# ಹರಪನಹಳ್ಳಿ ಪಾಳೆಯಗಾರರು

(ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿರುವ
ಪಿಎಚ್.ಡಿ. ಮಹಾಪ್ರಬಂಧ)

ಸಂಶೋಧಕರು

**ಜೆ.ಕೆ. ಮಲ್ಲಿಕಾರ್ಜುನಪ್ಪ**

ಮಾರ್ಗದರ್ಶಕರು

**ಡಾ. ಎಂ. ಕೊಟ್ರೇಶ್**

ಸಹ ಪ್ರಾಧ್ಯಾಪಕರು

ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬



೨೦೧೬

# ಹರಪನಹಳ್ಳಿ ಪಾಳೆಯಗಾರರು

## (ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)

(ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿರುವ
ಪಿಎಚ್.ಡಿ. ಮಹಾಪ್ರಬಂಧ)



ಸಂಶೋಧಕರು

**ಜೆ.ಕೆ. ಮಲ್ಲಿಕಾರ್ಜುನಪ್ಪ**

ಮಾರ್ಗದರ್ಶಕರು

**ಡಾ. ಎಂ. ಕೊಟ್ರೇಶ್**

ಸಹ ಪ್ರಾಧ್ಯಾಪಕರು

ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩೨೭೬

**೨೦೧೬**

# ಸಂಶೋಧಕರ ಪ್ರಮಾಣ ಪತ್ರ

**"ಹರಪನಹಳ್ಳಿ ಪಾಳೆಯಗಾರರು : (ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)"** ಎಂಬ ವಿಷಯದಲ್ಲಿ ಮಹಾಪ್ರಬಂಧವನ್ನು **ಡಾ. ಎಂ. ಕೊಟ್ರೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ದಿನಾಂಕ:** 3.8.16
**ಸ್ಥಳ** : ವಿದ್ಯಾರಣ್ಯ

ಸಂಶೋಧಕರು

**(ಜೆ.ಕೆ. ಮಲ್ಲಿಕಾರ್ಜುನಪ್ಪ)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪ್ರಮಾಣ ಪತ್ರ

**"ಹರಪನಹಳ್ಳಿ ಪಾಳೆಯಗಾರರು : (ಒಂದು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ)"** ಎಂಬ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ **ಶ್ರೀ ಜೆ.ಕೆ. ಮಲ್ಲಿಕಾರ್ಜುನಪ್ಪ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ದಿನಾಂಕ:** 3·8·16

**ಸ್ಥಳ** : ತುಮಕೂರು

M. Kotresh

(ಡಾ. ಎಂ. ಕೊಟ್ರೇಶ್)

ಸಹ ಪ್ರಾಧ್ಯಾಪಕರು
ಇತಿಹಾಸ ಮತ್ತು ಪುರಾತತ್ವ ವಿಭಾಗ
ತುಮಕೂರು ವಿಶ್ವವಿದ್ಯಾನಿಲಯ
ತುಮಕೂರು

Dr. M. Kotresh
Associate Professor
Department of History and Archaeology
Tumkur University, Tumkur - 572 103.

# ಪರಿವಿಡಿ

## ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಕಾಲ ಮತ್ತು ವ್ಯಾಪ್ತಿ

೧.೪ ಅಧ್ಯಯನದ ಸ್ವರೂಪ

೧.೫ ಅಧ್ಯಯನದ ವಿಧಾನ

೧.೬ ಅಧ್ಯಯನದ ಸಮೀಕ್ಷೆ

## ಅಧ್ಯಾಯ – ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ೧.೧ ಪೀಠಿಕೆ

ಇತಿಹಾಸವೆಂದರೆ ಗತಕಾಲದ ಘಟನೆಗಳನ್ನು ಲಭ್ಯವಿರುವ ಆಧಾರಗಳ ಮೇಲೆ ಪುನರ್ ರಚಿಸುವುದಾಗಿದೆ. ಚರಿತ್ರೆ ಒಂದು ದೇಶದ ಪ್ರಾಚೀನ ಪರಂಪರೆಯನ್ನು ತಿಳಿಸಿಕೊಡುವಲ್ಲಿ ಬಹುಮುಖ್ಯ ಪಾತ್ರವಹಿಸುತ್ತದೆ. ಚರಿತ್ರೆಯ ಅಧ್ಯಯನದಿಂದ ಒಂದು ಕಾಲದ ಸ್ಥಳದ ಹಾಗೂ ವ್ಯಕ್ತಿಯ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಾದ ಬೆಳವಣಿಗೆಯನ್ನು ತಿಳಿಯಬಹುದು. ಇಂತಹ ಚರಿತ್ರೆಯ ರಚನೆಗೆ ಸಹಾಯಕವಾಗುವ ಆಕರಗಳಲ್ಲಿ ಶಾಸನಗಳು, ಪತ್ರ ದಾಖಲೆಗಳು ಮತ್ತು ಸ್ಮಾರಕಗಳು ಇತ್ಯಾದಿ ಬಹುಮುಖ್ಯವಾದವುಗಳಾಗಿವೆ. ಆದರೆ ಇಂತಹ ಐತಿಹಾಸಿಕ ಅಂಶಗಳನ್ನು ಪ್ರತಿಬಿಂಬಿಸುವ ಚಾರಿತ್ರಿಕ ದಾಖಲೆಗಳು ಮತ್ತು ಸ್ಮಾರಕಗಳಲ್ಲಿ ಕೆಲವು ಉಳಿದಿವೆ. ಇನ್ನೂ ಕೆಲವು ಹಾಳಾಗಿವೆ. ಅದರಲ್ಲೂ ಲಭ್ಯವಿರುವ ಇಂತಹ ದಾಖಲೆಗಳು ಮತ್ತು ಸ್ಮಾರಕಗಳ ಅವಶೇಷಗಳಿಂದ ಇದೂವರೆಗೂ ಕೇವಲ ಕರ್ನಾಟಕದ ಪ್ರಸಿದ್ಧ ರಾಜಮನೆತನಗಳ ಚರಿತ್ರೆಯನ್ನು ಮಾತ್ರ ಕುರಿತು ಹೆಚ್ಚಿನ ಅಧ್ಯಯನ ನಡೆಸಲಾಗಿದೆ. ಆದರೆ ಇತ್ತೀಚಿನ ಕೆಲವು ದಶಕಗಳಿಂದ ಚರಿತ್ರೆ ಅಧ್ಯಯನದ ದೃಷ್ಟಿಕೋನ ಅಥವಾ ಸಂಶೋಧನೆಯ ನಿಲುವು ಬದಲಾಗಿದೆ. ಅಂದರೆ ಪ್ರಾದೇಶಿಕ ಅಥವಾ ಸ್ಥಳೀಯ ಇತಿಹಾಸದ ಅಧ್ಯಯನದ ಬಗ್ಗೆ ಆಸಕ್ತಿ ತೋರಿಸಲಾಗಿದ್ದು ಸೂಕ್ಷ್ಮ ಮತ್ತು ಸಮಗ್ರ ಅಧ್ಯಯನ ಮಾಡುವಲ್ಲಿ ಹೆಚ್ಚಿನ ಪ್ರಯತ್ನಗಳು ನಡೆಯುತ್ತವೆ. ಹಾಗಾಗಿ ಇತ್ತೀಚಿನ ದಿನಗಳಲ್ಲಿ ಇತಿಹಾಸ ಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ ಚರಿತ್ರೆಕಾರರಿಂದ ನಿರ್ಲಕ್ಷಿಸಲ್ಪಟ್ಟಿದ್ದ ಸ್ಥಳೀಯ ಇತಿಹಾಸದ ಚರಿತ್ರೆಯ ಅಧ್ಯಯನಕ್ಕೆ ಹೆಚ್ಚಿನ ಮಹತ್ವ ದೊರೆತಿದೆ[೧].

ದೇಶದ ಪ್ರತಿಯೊಂದು ಸ್ಥಳ, ಗ್ರಾಮ, ತಾಲ್ಲೂಕು, ಜಿಲ್ಲೆ ಹಾಗೂ ರಾಜ್ಯಕ್ಕೆ ತನ್ನದೇ ಆದ ಚರಿತ್ರೆಯಿದ್ದು ಆ ಚರಿತ್ರೆಯನ್ನು ಕ್ರಮಬದ್ಧ ಹಾಗೂ ವ್ಯವಸ್ಥಿತವಾಗಿ ಅಧ್ಯಯನ ನಡೆಸಿ ಪುನರ್‌ರಚನೆ ಮಾಡಿದರೆ ಚರಿತ್ರೆಗೊಂದು ಮಟ್ಟದ ಪರಿಪೂರ್ಣ ಅರ್ಥ ಬರುತ್ತದೆ. ಇದೇ ಮಾರ್ಗವಾಗಿ ಸ್ಥಳೀಯಮಟ್ಟದ ಇತಿಹಾಸವನ್ನು ಅಧ್ಯಯನ ಮಾಡಿದರೆ ಅದನ್ನು 'ಸ್ಥಳೀಯ ಇತಿಹಾಸ' ಎನ್ನಬಹುದು.

ಆದರೆ ಭಾರತದಂತಹ ಬಹುಭಾಷಾ ದೇಶಕ್ಕೆ 'ಪ್ರಾದೇಶಿಕ ಇತಿಹಾಸ' ಎನ್ನುವ ಪದ ಅನ್ವಯಿಸುವುದಿಲ್ಲ ಎನ್ನುವುದು ಅನೇಕ ವಿದ್ವಾಂಸರುಗಳ ಅಭಿಪ್ರಾಯ. ಅಂದರೆ ನಮ್ಮ ನಾಡಿನಲ್ಲಿ ಚಾರಿತ್ರಿಕವಾಗಿ ಬೆಳವಣಿಗೆ ಹೊಂದಿದ ಪ್ರದೇಶಗಳು ಯಾವುದೇ ಕೇಂದ್ರಾಡಳಿತಕ್ಕೆ ಸಂಪೂರ್ಣವಾಗಿ ಒಳಪಟ್ಟಿರುವುದಿಲ್ಲ. ಹಾಗಾಗಿ ಭಾರತದ ಇತಿಹಾಸವೆಂದರೆ ವಿವಿಧ ರಾಜ್ಯಗಳ, ಪ್ರದೇಶಗಳ ಇತಿಹಾಸವೇ

ಹೊರತು ಕೆಲವೇ ರಾಜವಂಶಗಳ ಇತಿಹಾಸವಲ್ಲ ಎನ್ನುವುದು ಸ್ಪಷ್ಟ. ಆದ್ದರಿಂದ ಯಾವುದನ್ನು ಪ್ರಾದೇಶಿಕ ಇತಿಹಾಸವೆಂದು ಕರೆಯಲಾಗುವುದೋ ಅದನ್ನು ಸ್ಥಳೀಯ ಇತಿಹಾಸವೆಂದು ಕರೆಯುವುದು ಸೂಕ್ತ[೨].

ಸ್ಥಳೀಯ ಇತಿಹಾಸ ಚರಿತ್ರೆಕಾರನಿಗೆ ಅವಶ್ಯಕವೆನಿಸುವ ಹಾಗೂ ಬಹುಮುಖ್ಯವೆನಿಸುವ ದಾಖಲೆಗಳನ್ನು ಒದಗಿಸಿಕೊಟ್ಟು ಆ ಪ್ರದೇಶದ ಇತಿಹಾಸ ರಚನೆಗೆ ಒಂದು ಚೌಕಟ್ಟನ್ನು ಸೃಷ್ಟಿಸಿಕೊಡುತ್ತದೆ. ಅಲ್ಲದೇ ಸ್ಥಳೀಯ ಇತಿಹಾಸವು ಎಲ್ಲಾ ವಿಧದ ಅಧ್ಯಯನದ ವಿಧಾನಗಳನ್ನು ಚರಿತ್ರೆಯ ಮಾದರಿಗಳನ್ನು ಮೌಖಿಕ, ಸಾಂಖ್ಯಿಕ ಮತ್ತು ಸಾಹಿತ್ಯಿಕ ಆಕರಗಳನ್ನು ಒಳಗೊಂಡಿದ್ದು ಜನಪದ ಮತ್ತು ಜಾನಪದ ಜೀವನಕ್ಕೆ ಸಂಬಂಧಿಸಿದ ವಸ್ತು ವಿಶೇಷತೆ, ವಾಸ್ತುಶಿಲ್ಪ, ವಿವಿಧ ಸಮುದಾಯ-ಜನಾಂಗಗಳ ರಾಜಕೀಯ, ಆರ್ಥಿಕ, ಬೌದ್ಧಿಕ, ಸಾಮಾಜಿಕ, ಸಾಂಸ್ಕೃತಿಕ, ಉಡುಗೆ-ತೊಡುಗೆ, ಆಹಾರ ಪದ್ಧತಿ, ಆಚರಣೆಗಳು, ಸ್ಥಳೀಯ ಉತ್ಪಾದನಾ ವಸ್ತುಗಳು, ಪರಿಸರ, ಹವಾಗುಣ ಮುಂತಾದವುಗಳನ್ನು ಅರಿಯಲು ಸಹಾಯಕವಾಗಿವೆ[೩]. ಹಾಗಾಗಿ ಇತ್ತೀಚಿನ ದಿನಗಳಲ್ಲಿ ಕರ್ನಾಟಕದಲ್ಲಿನ ಅನೇಕ ಜಿಲ್ಲೆಗಳು ಹಾಗೂ ಪ್ರದೇಶಗಳಲ್ಲಿ ಸಂಶೋಧನೆಗಳು ನಡೆಯುತ್ತಿದ್ದು ಅನೇಕ ಹೊಸ ಐತಿಹಾಸಿಕ ಅಂಶಗಳು ಬೆಳಕಿಗೆ ಬರುತ್ತಿವೆ. ಪರಿಣಾಮವಾಗಿ ಸ್ಥಳೀಯ ಅಥವಾ ಪ್ರಾದೇಶಿಕ ಇತಿಹಾಸದ ಪುನರ್ರಚನೆಗೆ ಅಗತ್ಯವಾದ ಆಕರಗಳು ಲಭ್ಯವಾಗಿ ಪರಿಪೂರ್ಣ ಇತಿಹಾಸ ರಚನೆಗೆ ಸಹಾಯಕವಾಗಿದೆ. ಈ ನಿಟ್ಟಿನಲ್ಲಿ ಏಷ್ಯಾಖಂಡದಲ್ಲೇ ಅತ್ಯಂತ ಪ್ರಾಚೀನ ನೆಲೆಯಾದ ಚಿತ್ರದುರ್ಗ, ಬಳ್ಳಾರಿ[೪] ಹರಪನಹಳ್ಳಿ ಪಾಳೆಯಗಾರರರ ಭೂಪ್ರದೇಶ ಸಹ ಈ ಸಾಲಿಗೆ ಸೇರಿರುವ ಒಂದು ಮಹತ್ವದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪ್ರದೇಶವಾಗಿದೆ. ಇಂತಹ ಪ್ರಾಚೀನ ನೆಲೆಯಾದ ಹರಪನಹಳ್ಳಿಯು ಒಂದು ತಾಲ್ಲೂಕು ಕೇಂದ್ರವಾಗಿದ್ದು, ಕ್ರಿ.ಶ.೧೫.೦೮.೧೯೯೭ರಲ್ಲಿ ರಚನೆಗೊಂಡ ನೂತನ ದಾವಣಗೆರೆ ಜಿಲ್ಲೆಗೆ ಸೇರಿಸಲ್ಪಟ್ಟಿತು[೫].

ಅನಾದಿಕಾಲದಿಂದಲೂ ಮಾನವನ ನೆಲೆ ಹಾಗೂ ಚಟುವಟಿಕೆಗಳ ಕೇಂದ್ರವಾಗಿದ್ದು ಚರಿತ್ರೆಯ ವಿವಿಧ ಮಜಲುಗಳನ್ನು ಹೊಂದಿರುವ ಹರಪನಹಳ್ಳಿ ಪ್ರದೇಶವು ಕರ್ನಾಟಕ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಅಲ್ಲದೇ ಕರ್ನಾಟಕದ ಕೇಂದ್ರಬಿಂದುವಾಗಿರುವ ಈ ಪರಿಸರವು ನೀರಿನ ಆಸರೆ, ಫಲವತ್ತಾದ ಭೂಮಿ, ವಾಣಿಜ್ಯ ಕೈಗಾರಿಕೆ ಹಾಗೂ ಇತ್ತೀಚಿನ ಶೈಕ್ಷಣಿಕ ಕೇಂದ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿ ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ ಸಂಘಟನೆ, ಸಂಮೃದ್ಧಿಗಳಿಂದ ಮಧ್ಯ ಕರ್ನಾಟಕದಲ್ಲಿ ಪ್ರಸಿದ್ಧಿಯಾಗಿದೆ.

ಪ್ರಾಗಿತಿಹಾಸ ಕಾಲದಿಂದಲೂ ಮಾನವ ಸಂಸ್ಕೃತಿಯ ಕೇಂದ್ರವಾಗಿರುವ ಹರಪನಹಳ್ಳಿ ಭೂ ಪ್ರದೇಶ ಅಪರೋಕ್ಷವಾಗಿ ಅನೇಕ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದನ್ನು ಮನಗಾಣುತ್ತೇವೆ.

ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮುಂತಾದ ಸಾಮ್ರಾಜ್ಯಗಳ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದಂತೆಯೇ ಈ ಪ್ರದೇಶದಲ್ಲಿ ದೊರೆತ ಶಾಸನಗಳನ್ನು ಐತಿಹಾಸಿಕ ದಾಖಲೆಗಳನ್ನು ಪರಿಶೀಲಿಸಿದಾಗ ನೊಳಂಬರು, ಸೇವುಣರು, ಉಚ್ಚಂಗಿ ಪಾಂಡ್ಯರು, ವಿಜಯನಗರದ ಅರಸರು, ಪಾಳೆಯಗಾರರು, ಪ್ರಮುಖರಾಗಿದ್ದುದು ಕಂಡುಬರುತ್ತದೆ. ಇವರುಗಳು ತಮ್ಮ ಆಳ್ವಿಕೆಯ ಕಾಲಾವಧಿಯಲ್ಲಿ ಅನೇಕ ಶಾಸನಗಳನ್ನು ಹಾಕಿಸಿದ್ದಲ್ಲದೆ ದೇವಾಲಯ, ಅರಮನೆ, ಕೋಟೆ ಕೊತ್ತಲಗಳು, ಕೆರೆ-ಕಟ್ಟೆಗಳು, ಮಠಗಳು ಮುಂತಾದ ಸ್ಮಾರಕಗಳನ್ನು ನಿರ್ಮಾಣ ಮಾಡಿ ಇಲ್ಲಿಯ ಇತಿಹಾಸ ರಚನೆಗೆ ಪ್ರಮುಖ ಆಕರಗಳನ್ನು ಬಿಟ್ಟು ಹೋಗಿದ್ದಾರೆ. ಈ ಆಕರಗಳಿಂದ ಅವರ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ದಾನ ಧರ್ಮ, ಸಾಂಸ್ಕೃತಿಕ ವಿಚಾರಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ಈ ಪ್ರದೇಶ ಹರಪನಹಳ್ಳಿ ಪಾಳೆಗಾರರ ರಾಜಧಾನಿಯಾಗಿದ್ದು ಇಲ್ಲಿಯ ಸುತ್ತಮುತ್ತಲಿನ ಪ್ರಾದೇಶಿಕ ಇತಿಹಾಸ ಚೌಕಟ್ಟಿನಲ್ಲಿಟ್ಟು ವಿಮರ್ಶಿಸಿದಾಗ ಈ ಪ್ರದೇಶಕ್ಕೆ ಸೇರಿದ ಅನೇಕ ಚಾರಿತ್ರಿಕ ಸಾಂಸ್ಕೃತಿಕ ಅಂಶಗಳನ್ನು ಗಮನಿಸಬಹುದು.

### ೧.೨ ಅಧ್ಯಯನದ ಉದ್ದೇಶ

ಒಂದು ದೇಶದ ಇತಿಹಾಸವನ್ನು ಅಧ್ಯಯನ ಮಾಡುವಲ್ಲಿ ಹಾಗೂ ರಚಿಸುವಲ್ಲಿ ಪರಿಶ್ರಮದ ಅವಶ್ಯಕತೆಯಿದೆ. ಯಾವುದೇ ಒಬ್ಬ ವ್ಯಕ್ತಿಯಿಂದ ದೇಶದ ಇಡೀ ಇತಿಹಾಸವನ್ನು ಸಮಗ್ರವಾಗಿ ಅಧ್ಯಯನ ಮಾಡಲು ಸಾಧ್ಯವಿಲ್ಲ. ಹಾಗಾಗಿ ಆ ದೇಶದ ಇತಿಹಾಸವನ್ನು ಅನೇಕ ಘಟ್ಟಗಳಾಗಿ ವಿಂಗಡಿಸಿ ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡಿ ಪರಿಶೀಲಿಸಿ ತುಲನಾತ್ಮಕವಾಗಿ ವಿವೇಚನೆ ಮಾಡಿ ಇತಿಹಾಸವನ್ನು ರಚಿಸಬೇಕಾಗುತ್ತದೆ[೬]. ಈ ಹಿನ್ನೆಲೆಯಲ್ಲಿ ಕರ್ನಾಟಕದ ಇತಿಹಾಸವನ್ನು ಅಧ್ಯಯನ ಮಾಡಿರುವ ವಿದ್ವಾಂಸರುಗಳ ಪ್ರಯತ್ನವನ್ನು ಗಮನಿಸಿದರೆ ಪ್ರಮುಖವಾಗಿ ರಾಜವಂಶಗಳ ಕಾಲ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ನಡೆಸಿರುವುದನ್ನು ಕಾಣಬಹುದಾಗಿದೆ. ಅದರಲ್ಲೂ ೨೦ನೆಯ ಶತಮಾನದ ಮಧ್ಯಭಾಗದ ನಂತರ ಪ್ರಾರಂಭವಾದ ಅಧ್ಯಯನಗಳಲ್ಲಿ ಪ್ರಮುಖವಾಗಿ ಸಾಂಸ್ಕೃತಿಕ ಅಂಶಗಳನ್ನು ಪರಿಶೀಲನೆಗೆ ಒಳಪಡಿಸಿ, ಯಾವುದೋ ಒಂದು ಮಿತಿಯಲ್ಲಿ ಮಾತ್ರ ವಿವರವಾಗಿ ಅಧ್ಯಯನ ಮಾಡುವ ಪ್ರಯತ್ನಗಳು ಕನ್ನಡದಲ್ಲಿ ನಡೆದಿವೆ[೭]. ಇಂತಹವುಗಳಲ್ಲಿ ಡಾ.ಎಂ.ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನ ಗ್ರಂಥ ಗಮನಾರ್ಹವಾದುದಾಗಿದೆ. ಶಾಸನಗಳನ್ನು ಕುರಿತಾದ ಇನ್ನೂ ಅನೇಕ ಅಧ್ಯಯನಗಳು ನಡೆದಿವೆ.

ಕಲೆ, ವಾಸ್ತು ಮತ್ತು ಶಿಲ್ಪಗಳ ಅಧ್ಯಯನದ ಬಗ್ಗೆ ಹೇಳುವುದಾದರೆ, ಆ ಕ್ಷೇತ್ರಗಳ ಬದಲಾವಣಾ ಘಟ್ಟಗಳನ್ನು ಆಯಾ ಕಾಲದ ರಾಜಮನೆತನಗಳ ಹೆಸರಿನೊಂದಿಗೆ ಸಮೀಕರಿಸಲಾಗಿದೆ.

ಇದು ಔಚಿತ್ಯವೂ ಹೌದು. ಪ್ರಾಚೀನ ಭಾರತದಲ್ಲಿ ಬಹುಪಾಲು ಎಲ್ಲಾ ಕಲಾ ಪ್ರಕಾರಗಳೂ ಹುಟ್ಟಿ ಬೆಳೆದಿದ್ದು ರಾಜಾಶ್ರಯದಿಂದಲೇ.

ಆಶ್ರಯದಾತರು ಇಲ್ಲದೆ ಯಾವುದೇ ಕಲಾ ಪ್ರಕಾರಗಳು ಪ್ರವರ್ಧಮಾನಕ್ಕೆ ಬರುವುದಿಲ್ಲ. ಹಾಗೆಯೇ ರಾಜಮನೆತನಗಳ ಏಳು–ಬೀಳುಗಳ ಪ್ರಭಾವವು ಕಲಾ ಪ್ರಕಾರಗಳ ಮೇಲಾಗಿರುವುದನ್ನು ಗುರುತಿಸಲಾಗಿದೆ. ಕೆಲವರು ಖಾಸಗಿಯಾಗಿ ಕಲಾ ಪ್ರಕಾರಗಳಿಗೆ ಸಾಂಸ್ಕೃತಿಕ ಅಂಶಗಳಿಗೆ ನೆರವು ನೀಡಿದ್ದರೂ ಅದು ಕಲಾವಿದರ ಕಲಾಕೃತಿಗಳ ಸಾಂಸ್ಕೃತಿಕ ಅಂಶಗಳ ಸಂಖ್ಯೆಯನ್ನು ಹೆಚ್ಚಿಸಿದೆಯೇ ಹೊರತು ಕಲಾ ಪ್ರಕಾರಗಳ ಒಲವುಗಳನ್ನು ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ[೮]. ಈ ಒಂದು ದೃಷ್ಟಿಯಿಂದಲೇ ಭಾರತೀಯ ಅಥವಾ ಕರ್ನಾಟಕದ ವಾಸ್ತುಶಿಲ್ಪವನ್ನು ವಿಂಗಡಿಸುವಾಗ ರಾಜಮನೆತನಗಳನ್ನು ಗಮನದಲ್ಲಿಟ್ಟುಕೊಂಡು ನಂತರ ಅವುಗಳನ್ನು ಧರ್ಮದ ದೃಷ್ಟಿಯಿಂದ ವಿಂಗಡಿಸಲಾಗುತ್ತದೆ[೯].

ಸಾಮಾನ್ಯವಾಗಿ ಕರ್ನಾಟಕದ ಕಲೆ, ಇತಿಹಾಸ, ಸಂಸ್ಕೃತಿ ಕುರಿತಂತೆ ವಿಜಯನಗರ ಕಾಲದವರೆಗೆ ಮಾತ್ರ ಹೆಚ್ಚು ಅಧ್ಯಯನಗಳು ನಡೆದಿವೆ. ಆದರೆ ವಿಜಯನಗರೋತ್ತರ ಕಾಲದ ಇತಿಹಾಸ, ಸಂಸ್ಕೃತಿ, ವಾಸ್ತುಶಿಲ್ಪ ಕುರಿತಂತೆ ಅಧ್ಯಯನಗಳು ಕೆಲವೆಡೆ ಪ್ರಾದೇಶಿಕವಾಗಿ ಅದರಲ್ಲೂ ತುಂಬಾ ವಿರಳವಾಗಿ ನಡೆದಿವೆ. ಹಾಗಾಗಿ ಅವುಗಳ ಇತಿಹಾಸಕ್ಕೆ ಸಂಬಂಧಪಟ್ಟ ಸಂಶೋಧನೆಗಳು ವಿರಳವಾಗಿದ್ದವು. ಏಕೆಂದರೆ ಅದು ಚಕ್ರವರ್ತಿಗಳ ಯುಗವಾಗಿದ್ದು, ಇತಿಹಾಸ ಎಂದರೆ ರಾಜಮಹಾರಾಜರ ಜೀವನ ಮತ್ತು ಅವರ ವಿಜಯಗಳ ವರ್ಣನೆ ಎಂದು ಪರಿಗಣಿಸಲಾಗಿತ್ತು. ಆದರೆ ಇಂದು ಪ್ರಜಾಪ್ರಭುತ್ವಯುಗ. ಸಾಮಾನ್ಯ ವ್ಯಕ್ತಿ ಸ್ಥಳೀಯ ಐತಿಹಾಸಿಕ ಬೆಳವಣಿಗೆಗಳು ಮಹತ್ವ ಪಡೆದಿದ್ದು ಸಂಶೋಧನೆಯು ಹೊಸ ತಿರುವನ್ನು ಪಡೆದುಕೊಂಡಿದೆ. ಹಾಗಾಗಿ ಪ್ರಾದೇಶಿಕ ಇತಿಹಾಸವನ್ನೇ ಕುರಿತಾದ ಹೆಚ್ಚು ಸಂಶೋಧನಾ ಗ್ರಂಥಗಳು, ಲೇಖನಗಳು ಹೊರ ಬರುತ್ತಿವೆ. ಇಂತಹ ಪ್ರಾದೇಶಿಕ ಇತಿಹಾಸ ರಚನೆಯಿಂದ ದೇಶದ ಹಾಗೂ ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದ ಸ್ಪಷ್ಟ ಚಿತ್ರಣ ದೊರೆಯುತ್ತದೆನ್ನುವ ಮಾತಿನಲ್ಲಿ ಯಾವುದೇ ಸಂಶಯವಿಲ್ಲ.

ಸ್ಥಳೀಯ ಅಥವಾ ಪ್ರಾದೇಶಿಕ ಚರಿತ್ರೆ ಬೆಳೆಯದಿದ್ದರೆ ರಾಜ್ಯ ಅಥವಾ ರಾಷ್ಟ್ರದ ಇತಿಹಾಸ ಪೂರ್ಣವಾಗಲಾರದು. ಅರ್ಥಾತ್ ಅಂತಹ ಇತಿಹಾಸ ಸ್ಪಷ್ಟತೆಯನ್ನು ಕಾಣಲಾರದು. ಹಾಗಾಗಿ ಸ್ಥಳೀಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಮಜಲುಗಳನ್ನು ಸಮಗ್ರವಾಗಿ ಒಂದು ಕಡೆ ತಂದಾಗ ನಮ್ಮ ಇತಿಹಾಸ ಸ್ಪಷ್ಟಗೊಳ್ಳುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಅಂತಹ ಪ್ರಾದೇಶಿಕ ಇತಿಹಾಸ ರಚನಾ ಕಾರ್ಯದಲ್ಲಿ ಮುಂದಾಗಿದೆ ಹಾಗೂ ಅಧ್ಯಯನದ ಉದ್ದೇಶವೂ ಇದಾಗಿದೆ.

ಪ್ರತಿಯೊಂದು ಅಧ್ಯಯನವು ಒಂದಲ್ಲ ಒಂದು ಉದ್ದೇಶವನ್ನು ಇಟ್ಟುಕೊಂಡಿರುವುದರ ಜೊತೆಗೆ ಗುರಿಯನ್ನು ಹೊಂದಿರುತ್ತದೆ. ಇಲ್ಲಿ ಗುರಿ ಎಂದರೆ ಒಂದು ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವುದಾದರೆ; ಏನನ್ನು ಶೋಧಿಸಲು ಪ್ರಯತ್ನಿಸಲಾಗುತ್ತದೆ ಎನ್ನುವುದನ್ನು ಉದ್ದೇಶ ತಿಳಿಸುತ್ತದೆ. ಇಂತಹ ಅಧ್ಯಯನದ ಉದ್ದೇಶಗಳೂ ಸಂಶೋಧನಾ ಕಾರ್ಯದಲ್ಲಿ ಒಂದು ಉತ್ತಮ ಮಾರ್ಗಸೂಚಿಯಂತೆ ಕೆಲಸ ನಿರ್ವಹಿಸುತ್ತದೆ[೧೦]. ಪ್ರಸ್ತುತ ಅಧ್ಯಯನದ ವಿಷಯ 'ಹರಪನಹಳ್ಳಿ ಪಾಳೆಯಗಾರರು' (ಒಂದು ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ) ಆಗಿದ್ದು ಪ್ರಸ್ತುತ ಅಧ್ಯಯನದ ಉದ್ದೇಶವೂ ಇವರ ಆಳ್ವಿಕೆಯ ಕಾಲಾವಧಿಯಲ್ಲಿ ಹಾಕಿಸಿದಂತಹ ಶಾಸನಗಳು ನಿರ್ಮಾಣಗೊಂಡ ಕಲೆ ಮತ್ತು ವಾಸ್ತುಶಿಲ್ಪಗಳು, ಕೆರೆ, ಕಟ್ಟೆ, ಕಾಲುವೆಗಳು, ಧರ್ಮ ಸಂಸ್ಕೃತಿಯನ್ನು ಕುರಿತು ಒಂದು ವ್ಯವಸ್ಥಿತ ಹಾಗೂ ಕ್ರಮಬದ್ಧ ಅಧ್ಯಯನ ಕೈಗೊಳ್ಳುವುದಾಗಿದೆ. ಅಂದರೆ ಅವರ ಸಾಂಸ್ಕೃತಿಕ ಕೊಡುಗೆಗಳ ಅಧ್ಯಯನವಾಗಿದೆ.

ವಿಜಯನಗರೋತ್ತರ ಕಾಲದಲ್ಲಿ ಹರಪನಹಳ್ಳಿ ಹಾಗೂ ಈ ಪ್ರದೇಶದ ಸುತ್ತ-ಮುತ್ತ ಅನೇಕ ಪಾಳೆಯಪಟ್ಟುಗಳು ಆಳ್ವಿಕೆ ನಡೆಸಿದ್ದು ತಮ್ಮದೇ ಆದ ಕೊಡುಗೆಗಳನ್ನು ನೀಡಿವೆ. ಈ ಪಾಳೆಯಗಾರರು ತಮ್ಮ ಇತಿಮಿತಿಯಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿದ್ದನ್ನು ಮತ್ತು ಅನೇಕ ನಿರ್ಮಾಣಗಳಿಗೆ ನೀಡಿದ ಪ್ರೋತ್ಸಾಹ, ಕೊಡುಗೆಗಳನ್ನು ಗುರುತಿಸಬಹುದಾಗಿದೆ. ಅಂತಹ ಪಾಳೆಯಪಟ್ಟುಗಳಲ್ಲಿ ಒಂದು ಹಾಗೂ ಪ್ರಸಿದ್ಧವಾದ ಹರಪನಹಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರ ಕುರಿತಂತೆ ಸಮಗ್ರ ಅಧ್ಯಯನ ಮಾಡುವುದಾಗಿದೆ. ಇದುವರೆಗೂ ಇವರನ್ನು ಕುರಿತಂತೆ ನಡೆದಿರುವ ಅಧ್ಯಯನಗಳು ಹೆಚ್ಚಾಗಿ ಅವರ ರಾಜಕೀಯ ಚರಿತ್ರೆಯನ್ನು ಕುರಿತವುಗಳಾಗಿವೆ. ಇವರ ಶಾಸನಗಳು, ನಿರ್ಮಿಸಿದ ದೇವಾಲಯಗಳು ಹಾಗೂ ಅವರ ಸಂಸ್ಕೃತಿಯ ಬಗ್ಗೆ ಕೆಲವೊಂದು ಗ್ರಂಥಗಳಲ್ಲಿ ಲೇಖನಗಳಲ್ಲಿ ಪತ್ರಿಕೆಗಳಲ್ಲಿ ಉಲ್ಲೇಖವಾಗಿದ್ದರೂ ಸಮಗ್ರವಾದ ಅಧ್ಯಯನವಾಗಿಲ್ಲ ಹಾಗೂ ವಿವರವಾದ ಮಾಹಿತಿ ಇಲ್ಲ. ಇವರ ಕಾಲದ ಶಾಸನಗಳು ಕಲೆ ಮತ್ತು ವಾಸ್ತುಶಿಲ್ಪ, ಸಂಸ್ಕೃತಿ, ಇತಿಹಾಸ ಕುರಿತಂತೆ ಒಂದು ಪ್ರತ್ಯೇಕ ವ್ಯವಸ್ಥಿತ ಕ್ರಮಬದ್ಧವಾದ ಹಾಗೂ ಸಂಶೋಧನಾತ್ಮಕವಾದ ಐತಿಹಾಸಿಕ ಸಾಂಸ್ಕೃತಿಕ ಅಧ್ಯಯನ ಇದುವರೆಗೂ ನಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿರುವ ಕೊಡುಗೆಗಳ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿ ಸವಿವರವಾದ ಮಾಹಿತಿಯನ್ನು ಸಂಗ್ರಹಿಸಿ ವಿಜಯನಗರೋತ್ತರ ಕಾಲದಲ್ಲೂ ಸಹ ಮಧ್ಯ ಕರ್ನಾಟಕದಲ್ಲಿ ರಾಜಕೀಯ ಸಾಂಸ್ಕೃತಿಕ ಚಟುವಟಿಕೆಗಳು ಜೀವಂತವಾಗಿ ಮುಂದುವರೆದಿರುವುದನ್ನು ಗುರುತಿಸುವುದೇ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಸ್ಥಳೀಯ ಈ ಪಾಳೆಯಗಾರ ನಾಯಕರು ನೆರೆಹೊರೆಯ ರಾಜಕೀಯ ಶಕ್ತಿಗಳಿಂದ ಜರ್ಜರಿತವಾಗಿದ್ದರೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಸಂದರ್ಭವನ್ನು ಗಮನಿಸುವುದು

ಸಹ ಬಹುಮುಖ್ಯವಾಗಿದೆ. ಅಷ್ಟೇ ಅಲ್ಲದೆ ಪ್ರಸ್ತುತ ಅಧ್ಯಯನದಲ್ಲಿ ಹೊಸದಾಗಿ ಸೇರ್ಪಡೆಗೊಂಡ ವಾಸ್ತು ಮೂರ್ತಿಶಿಲ್ಪದ ರಚನೆ, ಶೈಲಿ, ಲಕ್ಷಣ ಮತ್ತು ನಿರ್ಮಾಣ ಸಾಮಾಗ್ರಿಗಳನ್ನು ಕುರಿತು ಅಧ್ಯಯನ ಮಾಡಲಾಗುವುದು. ಮುಂದುವರೆದು ಹರಪನಹಳ್ಳಿ ಪಾಳೆಯಗಾರರು ವಿಜಯನಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ಲಕ್ಷಣಗಳನ್ನು ಅನುಸರಿಸಿದ್ದಾರೆಯೇ ಇಲ್ಲವೋ ಅನುಸರಿಸಿದ್ದಲ್ಲಿ ಹೊಸದಾಗಿ ಸೇರ್ಪಡೆಗೊಂಡ ರಚನೆಗಳಾವುವು ಅಥವಾ ತಮ್ಮದೇ ಆದಂತಹ ವಾಸ್ತುಶೈಲಿಯನ್ನು ಸೃಷ್ಟಿಸಿದರೆ ಹಾಗಿದ್ದರೆ ಅವರ ಕಲಾಶೈಲಿಯ ಲಕ್ಷಣಗಳಾವುವು ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿ ಅವರ ಕಲೆ ಮತ್ತು ವಾಸ್ತುಶಿಲ್ಪದ ವೈಶಿಷ್ಟ್ಯತೆಯನ್ನು ಗುರುತಿಸುವುದು, ರಕ್ಷಣಾ ವಾಸ್ತುಶಿಲ್ಪ, ವಸಾಹತುಶಾಹಿ ಪ್ರಭಾವ ಮುಂತಾದವುಗಳನ್ನು ಗಮನಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಈ ಮೂಲಕ ಪಾಳೆಯಗಾರರ ಕಾಲದ ರಾಜಕೀಯ, ಐತಿಹಾಸಿಕ, ಸಾಂಸ್ಕೃತಿಕ ಇತಿಹಾಸವನ್ನು ಅರಿಯುವುದಾಗಿದೆ.

### ೧.೩ ಅಧ್ಯಯನದ ಕಾಲ ಮತ್ತು ವ್ಯಾಪ್ತಿ

ಸಾಮಾನ್ಯ ಅರ್ಥದಲ್ಲಿ 'ವ್ಯಾಪ್ತಿ' ಎಂದರೆ ಎಲ್ಲೆ, ಮೇರು, ಹರವು, ಗಡಿ, ವೈಶಾಲ್ಯತೆ ಅಥವಾ ಸೀಮಾರೇಖೆ ಎಂದಾಗುತ್ತದೆ. ಯಾವುದೇ ಒಂದು ವಿಷಯದ ವ್ಯಾಪ್ತಿ ಎಂದರೆ ಆ ಕ್ಷೇತ್ರದ ವೈಶಾಲ್ಯತೆ, ಹರವು ಅಥವಾ ಅಧ್ಯಯನದ ಸೀಮಾರೇಖೆ ಎಂದರ್ಥ. ಯಾವುದೇ ಐತಿಹಾಸಿಕ, ಸಾಂಸ್ಕೃತಿಕ ಸಂಶೋಧನೆಗೆ ಕಾಲಮಾನದ ಚೌಕಟ್ಟು ಮತ್ತು ಭೌಗೋಳಿಕ ಪ್ರದೇಶದ ವ್ಯಾಪ್ತಿ ಬಹಳ ಮುಖ್ಯ ಒಂದು ನಿರ್ದಿಷ್ಟ ಹಾಗೂ ಉದ್ದೇಶ ಪೂರ್ವಕವಾದ ಸಂಶೋಧನೆ ಯಶಸ್ಸು ಕಾಣಬೇಕೆಂದರೆ ಇದು ಅತೀ ಅವಶ್ಯ. ಈ ಚೌಕಟ್ಟಿನಲ್ಲಿ ಸಾಗಿದಾಗ ಮಾತ್ರ ಕ್ರಮಬದ್ಧತೆಯಿಂದ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ವ್ಯಾಪ್ತಿಗಳಿಲ್ಲದ ಅಧ್ಯಯನ ಗೊಂದಲಮಯವಾಗಿ ಸಂಶೋಧಕನ ಮಿತಿಯನ್ನು ತೀವ್ರಗೊಳಿಸುವುದಲ್ಲದೇ ಸಂಶೋಧಕನನ್ನು ದಾರಿ ತಪ್ಪಿಸುತ್ತದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ಶೀರ್ಷಿಕೆಯನ್ವಯ ಹರಪನಹಳ್ಳಿ ಪಾಳೆಯಗಾರರಿಗೆ ಮಾತ್ರ ಸೀಮಿತವಾಗಿದೆ. ಕ್ರಿ.ಶ. ೧೫೦೦–೧೮೦೦ ರ ಕಾಲಾವಧಿಯಲ್ಲಿ ಪ್ರಧಾನವಾಗಿ ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ ನಡೆಸುವುದಾಗಿದೆ. ಈ ಕಾಲದಲ್ಲಿ ಹಾಕಲ್ಪಟ್ಟ ಶಾಸನಗಳು ನಿರ್ಮಾಣಗೊಂಡ ದೇವಾಲಯಗಳು, ಮೂರ್ತಿಶಿಲ್ಪಿಗಳು, ಮಠಗಳು, ಕೋಟೆಗಳು, ರಕ್ಷಣೆ ವ್ಯವಸ್ಥೆ, ಸಾಮಾಜಿಕ ಕಾರ್ಯಗಳು, ಹಾಗೂ ಸಂಸ್ಕೃತಿಯನ್ನು ಒಳಗೊಂಡಿದೆ. ಈ ಮೂಲಕ ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸಕ್ಕೆ ಮತ್ತು ವಿಜಯನಗರೋತ್ತರ ಕಾಲದ ಕಲೆ ಮತ್ತು ವಾಸ್ತುಶಿಲ್ಪ, ಶಿಕ್ಷಣ, ಸಂಸ್ಕೃತಿ ಕ್ಷೇತ್ರಕ್ಕೆ ಪ್ರಾದೇಶಿಕವಾಗಿ ಹರಪನಹಳ್ಳಿ ಪಾಳೆಯಗಾರರ ಕೊಡುಗೆಗಳನ್ನು ಪರಿಶೀಲಿಸಲಾಗುವುದಾಗಿದೆ.

## ೧.೪ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಕ್ರಿಶ. ೧೫೦೦ ರಿಂದ ೧೮೦೦ ರ ಕಾಲಾವಧಿಯ ದಾಖಲಾತಿ ಮತ್ತು ವಿವರಣೆಗಳನ್ನೊಗೊಂಡಂತೆ ವಿಶ್ಲೇಷಣಾತ್ಮಕವಾಗಿರುತ್ತದೆ. ಮುಖ್ಯವಾಗಿ ಹರಪನಹಳ್ಳಿ ಪಾಳೆಯಗಾರರ ಕಾಲದ ಶಾಸನಗಳು, ಇತಿಹಾಸ, ಕಲೆ, ವಾಸ್ತುಶಿಲ್ಪ ಮತ್ತು ಸಂಸ್ಕೃತಿಯನ್ನು ಕುರಿತಾದ ಸಂಶೋಧನಾತ್ಮಕವಾದ ಅಧ್ಯಯನವಾಗಿರುತ್ತದೆ. ಹಾಗೂ ಮುಂದಿನ ಅಧ್ಯಯನ ಮತ್ತು ಸಂಶೋಧನೆಗಳಿಗೆ ಅನುವು ಮಾಡಿ ಕೊಡುವ ಸ್ವರೂಪವನ್ನು ಹೊಂದಿದೆ. ಪ್ರಸ್ತುತ ಅಧ್ಯಯನದ ವಿಷಯವನ್ನು ಅಧ್ಯಯನದ ಅನುಕೂಲಕ್ಕಾಗಿ ಎಂಟು ಅಧ್ಯಾಯಗಳಾಗಿ ವಿಭಾಗಿಸಲಾಗಿದ್ದು ಪ್ರತಿಯೊಂದು ಅದ್ಯಾಯವು ಉಪಶೀರ್ಷಿಕೆಯನ್ನೊಳಗೊಂಡಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ, ಈವರೆಗಿನ ಸಮೀಕ್ಷೆ ಎಂಬ ವಿಷಯಗಳನ್ನೊಳಗೊಂಡಿದೆ. ಈ ಅಧ್ಯಯನಕ್ಕೆ ಸಹಾಯಕವಾದ ಆಕರಗಳು ಸೇರಿದಂತೆ ಹರಪನಹಳ್ಳಿ ಪಾಳೆಯಗಾರರ ಬಗ್ಗೆ ಈ ಹಿಂದೆ ನಡೆದಿರುವ ಅಧ್ಯಯನಗಳು ಹಾಗೂ ಪ್ರಸ್ತುತ ಅಧ್ಯಯನದ ವಿಧಾನಗಳನ್ನು ಕುರಿತು ಚರ್ಚಿಸಲಾಗಿದೆ. ಈ ವಿವರಗಳು ಪ್ರಸ್ತುತ ಅಧ್ಯಯನದ ನಿಬಂಧಕ್ಕೆ ಅಗತ್ಯವಾದ ತಾತ್ವಿಕ ಹಿನ್ನೆಲೆಯನ್ನು ರೂಪಿಸುತ್ತವೆಂದು ಹೇಳಬಹುದು.

ಪ್ರಾಗೈತಿಹಾಸಿಕ ಕಾಲದಿಂದ ಆಧುನಿಕ ಕಾಲದವರೆಗೂ ತನ್ನದೇ ಆದ ಚಾರಿತ್ರಿಕ ಘಟ್ಟಗಳನ್ನು ಗುರುತಿಸಿಕೊಂಡಿರುವ ಈ ಪ್ರದೇಶ ಕರ್ನಾಟಕದ ಮಧ್ಯಭಾಗದಲ್ಲಿರುವ ಪ್ರಮುಖ ರಾಜಕೀಯ ಮತ್ತು ಸಾಂಸ್ಕೃತಿಕ ನೆಲೆಯಾಗಿದೆ. ದಾವಣಗೆರೆ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದೆ.[೧೧]. ೧೯೫೬ರಲ್ಲಿ ನವಮೈಸೂರು ರಾಜ್ಯ ರಚನೆಗೊಂಡಾಗ ಸ್ವತಂತ್ರ ಚಿತ್ರದುರ್ಗ ಜಿಲ್ಲೆ, ದಾವಣಗೆರೆ, ಹರಿಹರ, ಜಗಳೂರು, ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ ಹಾಗೂ ಹೊಳಲ್ಕೆರೆಗಳೆಂಬ ಒಂಭತ್ತು ತಾಲ್ಲೂಕುಗಳನ್ನು ಒಳಗೊಂಡು ಅಸ್ತಿತ್ವಕ್ಕೆ ಬಂದಿತು. ಆದರೆ ರಾಜ್ಯದಲ್ಲಿಯೇ ಬಹುದೊಡ್ಡ ಜಿಲ್ಲೆಗಳಲ್ಲಿ ಒಂದಾಗಿದ್ದ ಚಿತ್ರದುರ್ಗ ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ೧೫.೦೮.೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನಾಕಾರ್ಯದ ಅನ್ವಯ ಜಿಲ್ಲೆಯ ಬಹುದೊಡ್ಡ ತಾಲ್ಲೂಕು ಕೇಂದ್ರವಾಗಿದ್ದ ದಾವಣಗೆರೆಯನ್ನು ದಾವಣಗೆರೆ, ಹರಿಹರ, ಚನ್ನಗಿರಿ, ಜಗಳೂರು, ಹೊನ್ನಾಳಿ, ಹರಪನಹಳ್ಳಿ ತಾಲ್ಲೂಕುಗಳನ್ನೊಳಗೊಂಡ ಹೊಸ ಜಿಲ್ಲೆಯನ್ನಾಗಿ ರಚಿಸಲಾಯಿತು[೧೨]. ಈ ಸಂದರ್ಭದಲ್ಲಿ ಜಿಲ್ಲೆಯು ಕೇವಲ ಆಡಳಿತಾತ್ಮಕವಾಗಿ ಬೇರೆಯಾಗದೆ, ಭೌಗೋಳಿಕ ನೆಲೆ ಮತ್ತು ಚರಿತ್ರೆಯ ಮೇರೆಗಳಲ್ಲಿಯೂ ಬದಲಾಯಿತು. ಒಟ್ಟಾರೆ ಈ ಜಿಲ್ಲೆಯು ಉತ್ತರ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆ, ದಕ್ಷಿಣ ಪೂರ್ವದಲ್ಲಿ ಚಿತ್ರದುರ್ಗ ಜಿಲ್ಲೆ, ಪಶ್ಚಿಮೋತ್ತರದಲ್ಲಿ ಹಾವೇರಿ ಜಿಲ್ಲೆ, ದಕ್ಷಿಣ ಪಶ್ಚಿಮದಲ್ಲಿ ಶಿವಮೊಗ್ಗ ಜಿಲ್ಲೆಯಿಂದ ಸುತ್ತುವರಿಯಲ್ಪಟ್ಟಿದೆ[೧೩]. ಪರಿಣಾಮವಾಗಿ ಅನೇಕ ಚಾರಿತ್ರಿಕ ವೈವಿಧ್ಯತೆಗಳಿಂದ ಕೂಡಿದೆ. ಹರಪನಹಳ್ಳಿ ಪ್ರಮುಖ ತಾಲ್ಲೂಕು ಕೇಂದ್ರವಾಗಿದೆ.

ಈ ಎಲ್ಲಾ ಹಿನ್ನೆಲೆಯೊಂದಿಗೆ ಜಿಲ್ಲೆಯ ಸಾಗೂ ಉತ್ತರದಲ್ಲಿ ಹಡಗಲಿ, ಪೂರ್ವದಲ್ಲಿ ಕೂಡ್ಲಿಗಿ, ಜಗಳೂರು, ದಕ್ಷಿಣದಲ್ಲಿ ದಾವಣಗೆರೆ, ಹರಿಹರ, ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನಿಂದ ಸುತ್ತುವರಿದಿರುವ ಹರಪನಹಳ್ಳಿ ತಾಲ್ಲೂಕಿನ ಭೌಗೋಳಿಕತೆ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಕುರಿತಂತೆ ಸಂಕ್ಷಿಪ್ತವಾಗಿ ಪ್ರಸ್ತುತ ಎರಡನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಈ ಪ್ರದೇಶದ ಉದ್ದಗಲಕ್ಕೂ ಹಬ್ಬಿರುವ ಬೆಟ್ಟಗುಡ್ಡಗಳ ಸಾಲು, ಕಣಿವೆ, ಕೊಳ್ಳಗಳು, ಕೋಟೆಕೊತ್ತಲಗಳು, ನೂರಾರು ಗುಡಿಗುಂಡಾರಗಳು, ಮಠಮಾನ್ಯಗಳು, ವಾಸ್ತುಶಿಲ್ಪ ಕಲೆ ಇಲ್ಲಿಯ ಶಾಸನ ಸಂಪತ್ತು, ದಾಖಲೆಗಳು, ಸ್ಮಾರಕಗಳು, ಪ್ರಾಚೀನ ಅರ್ವಾಚೀನ ಸಂಸ್ಕೃತಿಗಳ ಭವ್ಯ ಪರಂಪರೆಯನ್ನು ತೆರೆದಿಡುತ್ತಾ ಸಾಮಾನ್ಯರಿಂದ ಮೊದಲಾಗಿ ಸಂಶೋಧಕರವರೆಗೂ ಆಕರ್ಷಿತರನ್ನಾಗಿ ಮಾಡುತ್ತದೆ. ಈ ಹಿನ್ನೆಲೆಯಲ್ಲಿ ತಾಲ್ಲೂಕು ಕೇಂದ್ರವಾಗಿರುವ ಹರಪನಹಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ ಪಾಳೆಯಗಾರರು ತಮ್ಮ ಆಳ್ವಿಕೆಯ ಕಾಲಾವಧಿಯಲ್ಲಿ ನೀಡಿದಂತಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ಅಂದರೆ, ಸಾಮಾಜಿಕ ವ್ಯವಸ್ಥೆ ಅವರು ನಿರ್ಮಿಸಿದ ಗ್ರಾಮಗಳು, ಕೆರೆ ಕಾಲುವೆಗಳು, ಬಾವಿಪುಷ್ಕರಣಿಗಳು, ಕೋಟೆಕೊತ್ತಲಗಳು ಹಾಗೂ ಶಿಕ್ಷಣ, ಸಾಹಿತ್ಯ, ಸಂಗೀತ ಈ ಕಾಲದ ಕೃಷಿ ನೀರಾವರಿ ವ್ಯವಸ್ಥೆ, ವ್ಯಾಪಾರ ವಾಣಿಜ್ಯ, ಕೈಗಾರಿಕೆ, ತೆರಿಗೆ ಪದ್ಧತಿ, ನಾಣ್ಯಗಳು, ಸಂತೆಗಳು, ಆರ್ಥಿಕ ವ್ಯವಸ್ಥೆ, ನ್ಯಾಯ ವ್ಯವಸ್ಥೆ ಮುಂತಾದ ವಿಚಾರಗಳನ್ನು ಮೂರನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಶಾಸನಗಳು, ಪಾಳೆಯಗಾರರ ಕಾಲದ ಶಾಸನ ಪ್ರಕಾರಗಳು, (ಕ್ರಿ.ಶ. ೧೫೦೦-೧೮೦೦) ನಿರೂಪಗಳು, ಭೂಪಟ್ಟೇದಗಳು ಇತ್ಯಾದಿ ಕುರಿತಾಗಿದ್ದು ಇವರ ಕಾಲದಲ್ಲಿ ಹಾಕಿಸಲ್ಪಟ್ಟ ಶಾಸನಗಳು, ಶಾಸನ ವಿಧಗಳು, ಮಹತ್ವದ ವಿಷಯಗಳು, ಶಿಲ್ಪಗಳು, ಅವುಗಳ ವಿಧಗಳು, ಲಕ್ಷಣಗಳು, ರಚನೆ, ಶೈಲಿ ಹಾಗೂ ಮಾಧ್ಯಮವನ್ನು ವಿಶ್ಲೇಷಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ, ಧಾರ್ಮಿಕ ವಿಚಾರಗಳು, ಸಂಪ್ರದಾಯಗಳು, ದಾನ-ದತ್ತಿಗಳು, ದಾನಿಗಳು-ಧರ್ಮಾಚರಣೆಗಳು, ನಿರ್ಮಿಸಲ್ಪಟ್ಟ ದೇವಾಲಯಗಳು, ಮೂರ್ತಿಶಿಲ್ಪ, ಮಠಗಳು, ಬಸದಿಗಳು ಮುಂತಾದ ಧಾರ್ಮಿಕ ವ್ಯವಸ್ಥೆಯನ್ನು ಕುರಿತು ವಿವೇಚಿಸಲಾಗುತ್ತದೆ.

ಆರನೆಯ ಅಧ್ಯಾಯದಲ್ಲಿ ಪಾಳೆಯಗಾರರ ಕಾಲಾವಧಿಯ ರಕ್ಷಣಾ ವ್ಯವಸ್ಥೆ, ರಕ್ಷಣಾ ಸ್ಮಾರಕಗಳು, ಕೋಟೆಗಳು, ಹೂಡೇವುಗಳು, ಕುಸ್ತಿ ಗರಡಿ ಅರಮನೆ ಇತ್ಯಾದಿ ಕುರಿತು ವಿವರಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಹರಪನಹಳ್ಳಿ ಪಾಳೇಪಟ್ಟು ಪ್ರದೇಶದ ಮೇಲೆ ವಸಾಹತುಶಾಹಿ ಪ್ರಭಾವ ಮತ್ತು ಪರಿಣಾಮಗಳನ್ನು ಕುರಿತು ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳು ಹಾಗೂ ಮಿತಿಗಳನ್ನು ಕುರಿತು ವಿವೇಚಿಸಲಾಗಿದೆ ಮತ್ತು ಸಂಬಂಧಪಟ್ಟ ಕ್ಷೇತ್ರದಲ್ಲಿ ಮುಂದಿನ ಅಥವಾ ಹೆಚ್ಚಿನ ಸಂಶೋಧನೆಗೆ ಅನುವು ಮಾಡಿಕೊಡುವ ಸೂಚನೆಗಳನ್ನು ಅವಕಾಶಗಳನ್ನು ಒದಗಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕೊನೆಯಲ್ಲಿ ಅನುಬಂಧಗಳನ್ನು ಸೇರಿಸಲಾಗಿದ್ದು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಲಭ್ಯವಾದ ಸ್ಮಾರಕಗಳು, ಕೋಟೆಕೊತ್ತಲಗಳು, ದೇವಾಲಯಗಳು, ಶಾಸನಗಳು, ಶಿಲ್ಪಕಲಾಕೃತಿಗಳು ಮುಂತಾದವುಗಳ ಛಾಯಾಚಿತ್ರಗಳು, ನಕಾಶೆಗಳನ್ನು ನೀಡಲಾಗಿದೆ. ಇದರಲ್ಲಿ ಹರಪನಹಳ್ಳಿ ಪಾಳೆಯಗಾರರ ರಾಜ್ಯ ನಕ್ಷೆ, ದಾವಣಗೆರೆ ಜಿಲ್ಲಾ ನಕ್ಷೆ, ಹರಪನಹಳ್ಳಿ ತಾಲ್ಲೂಕು ನಕ್ಷೆ, ಕೋಟೆಗಳ ನಕ್ಷೆ, ದೇವಾಲಯಗಳ ತಲವಿನ್ಯಾಸ, ಶಾಸನ ಪಾಠಗಳು, ಗ್ರಂಥಋಣ, ಮುಂತಾದವುಗಳನ್ನು ನೀಡಲಾಗಿದೆ.

### ೧.೫ ಅಧ್ಯಯನದ ವಿಧಾನ

ಯಾವುದೇ ಒಂದು ಕಾರ್ಯವು ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತೀ ಮುಖ್ಯ ಅದೇ ರೀತಿ ಸಂಶೋಧನಾ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಕ್ರಮ ಬಹಳ ಅವಶ್ಯಕವಾದುದು ಹಾಗೂ ಅನಿವಾರ್ಯವೂ ಹೌದು. ಅಂತಯೇ ಪ್ರಸ್ತುತ ಅಧ್ಯಯನ ಕೈಗೊಳ್ಳುವ ಮುನ್ನ ಈ ಪ್ರದೇಶದ ಇತಿಹಾಸಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ವಿಷಯಗಳನ್ನು ಪಟ್ಟಿ ಮಾಡಿ ವಿದ್ವಾಂಸರೊಂದಿಗೆ ಚರ್ಚಿಸಲಾಯಿತು. ಈಗಾಗಲೇ ಸಂಶೋಧನೆಯಾಗಿರುವ ವಿಷಯಗಳನ್ನು ಬಿಟ್ಟು ಮಾರ್ಗದರ್ಶಕರ ಸಲಹೆಯ ಮೇರೆಗೆ ಆಸಕ್ತಿಯಿಂದ ಕ್ಷೇತ್ರಕಾರ್ಯವೇ ಪ್ರಧಾನವಾಗಿರುವ ಈ ಪ್ರಸ್ತುತ ಅಧ್ಯಯನದ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಯಿತು. ವಿಷಯದ ಆಯ್ಕೆಯು ಅಧಿಕೃತಗೊಂಡ ನಂತರ ಹರಪನಹಳ್ಳಿ ಪಾಳೆಯಗಾರರ ಕಾಲದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಂಶಗಳಾದ ಶಾಸನಗಳು, ಕಲೆ, ವಾಸ್ತುಶಿಲ್ಪ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಪಠ್ಯ ಅಧ್ಯಾಯಗಳನ್ನು ರಚಿಸಲಾಯಿತು. ನಂತರ ಹರಪನಹಳ್ಳಿ ಪರಿಸರದಲ್ಲಿ ಆಳ್ವಿಕೆ ನಡೆಸಿದ ಅರಸರು, ಪಾಳೆಯಗಾರರು ಹಾಗೂ ಭಾರತ ಮತ್ತು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಕೃತಿಗಳನ್ನು ಬಿಡಿಲೇಖನಗಳನ್ನು ನಿಬಂಧಗಳನ್ನು ಪತ್ರಿಕಾ ವರದಿಗಳನ್ನೊಳಗೊಂಡ ಗ್ರಂಥಸೂಚಿಯನ್ನು ಸಿದ್ಧಪಡಿಸಲಾಯಿತು. ನಂತರ ಆ ಆಕರಗಳನ್ನೆಲ್ಲಾ ಅಧ್ಯಯನ ಮಾಡಿ ಹರಪನಹಳ್ಳಿ ಪಾಳೆಯಗಾರರ ಕುರಿತಂತೆ ದೊರೆತ ಅಧ್ಯಯನ ಯೋಗ್ಯ ಅಂಶಗಳನ್ನು ಕಾಲಾನುಕ್ರಮವಾಗಿ ದಾಖಲಿಸಲಾಯಿತು. ತದನಂತರ ಹರಪನಹಳ್ಳಿ ಪಾಳೆಯಗಾರರ ಕಾಲ ಮತ್ತು ಗಡಿಗಳನ್ನು ಗುರುತಿಸಿಕೊಂಡು ಕಾಲಮಾನ ಕ್ರಿ.ಶ. ೧೫೦೦ ರಿಂದ

೧೮೦೦ ಹಾಗೂ ಭೌಗೋಳಿಕ ಪ್ರದೇಶವನ್ನು ಗುರ್ತಿಸಿಕೊಂಡು ಯಾವ ಯಾವ ಸ್ಥಳಗಳಲ್ಲಿ ಅವರ ಶಾಸನಗಳು ಲಭ್ಯವಾಗಿವೆ ಎಂಬುದನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಿ ಊರುಗಳ ಹೆಸರುಗಳನ್ನು ಪಟ್ಟಿ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಾಳೆಯಲ್ಲಿ ಶಾಸನಗಳ ಮಾಹಿತಿಯನ್ನು ದೇವಾಲಯಗಳ ವಾಸ್ತು ವಿವರಗಳನ್ನು, ಶಿಲ್ಪಗಳ ವಿವರವನ್ನು ದಾಖಲಿಸಿಕೊಂಡು ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ಇದೇ ಸಂದರ್ಭದಲ್ಲಿ ದೇವಾಲಯಗಳ ನಕ್ಷೆಯನ್ನು ತಯಾರಿಸಿ ಕೊಳ್ಳಲಾಯಿತು.

ಕ್ಷೇತ್ರಕಾರ್ಯದ ಜೊತೆಗೆ ಗ್ರಂಥಾಲಯಗಳ ಪುಸ್ತಕ ಪರಿಶೀಲನೆ ಕಾರ್ಯವನ್ನು ಕೈಗೊಳ್ಳಲಾಯಿತು. ದಾವಣಗೆರೆ ಕೇಂದ್ರ ಗ್ರಂಥಾಲಯ, ಹರಪನಹಳ್ಳಿ ತಾಲ್ಲೂಕು ಗ್ರಂಥಾಲಯ, ಬೆಂಗಳೂರಿನ ಐ.ಸಿ.ಹೆಚ್.ಆರ್. ಮಿಥಿಕ್ ಸೊಸೈಟಿ, ಮೈಸೂರು, ಧಾರವಾಡ, ಬೆಂಗಳೂರು, ಕನ್ನಡ (ಹಂಪಿ) ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಭೇಟಿ ನೀಡಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯಿಕ ದಾಖಲೆಗಳನ್ನು ಪರಿಶೀಲಿಸಿ ಮಾಹಿತಿಯನ್ನು ಹಾಗೂ ಅನೇಕ ಗ್ರಂಥಗಳನ್ನು ಸಂಗ್ರಹಿಸಿಕೊಳ್ಳಲಾಯಿತು. ಕನ್ನಡ ವಿಶ್ವವಿದ್ಯಾಲಯ, ಕಮಲಾಪುರ, ನೀಲಗುಂದ, ಕೂಲಹಳ್ಳಿ, ಬಾಗಳಿ ಮುಂತಾದಡಿಯಲ್ಲಿರುವ ವಸ್ತು ಸಂಗ್ರಹಾಲಯಗಳಿಗೆ ಭೇಟಿ ನೀಡಿ ಮಾಹಿತಿ ಪಡೆಯಲಾಯಿತು.

### ೧.೬ ಅಧ್ಯಯನದ ಸಮೀಕ್ಷೆ

ಈ ಪ್ರದೇಶದ ಇತಿಹಾಸವು ಪ್ರಾಗೈತಿಹಾಸ ಕಾಲದಿಂದ ಸ್ವಾತಂತ್ರ್ಯ ಹೋರಾಟದವರೆಗೂ ವಿಶಿಷ್ಟಸ್ಥಾನ ಪಡೆದುಕೊಂಡಿದೆ. ಶತಮಾನಗಳಿಂದ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಎಲ್ಲಾ ಇತಿಹಾಸದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ದಾವಣಗೆರೆ ನೇರವಾಗಿ ಯಾವುದೇ ಪಾಳೆಯಗಾರರನ್ನು ಹೊಂದಿರದೆ ಕೋಟೆಕೊತ್ತಲ, ಬುರುಜು, ಭತೇರಿಗಳೆಂದು ಇಲ್ಲಿ ಏನೂ ಇರದಿದ್ದರೂ ಚಿತ್ರದುರ್ಗದ ಐತಿಹಾಸಿಕ ನೆಲಗಟ್ಟಿನ ಮೇಲೆ ತನ್ನ ವ್ಯಕ್ತಿತ್ವವನ್ನು ಕಂಡುಕೊಂಡಿತ್ತು. ಆದರೆ ನೂತನ ಜಿಲ್ಲೆಗೆ ಸೇರ್ಪಡೆಯಾದ ಪ್ರದೇಶಗಳ ಪ್ರಾದೇಶಿಕ ಹಿನ್ನೆಲೆಯ ಚರಿತ್ರೆಯತ್ತ ಕಣ್ಣಾಡಿಸಿದಾಗ ಹರಪನಹಳ್ಳಿ, ಚನ್ನಗಿರಿ, ಹೊನ್ನಾಳಿ ತಾಲ್ಲೂಕುಗಳ ಮಹತ್ವದ ಸ್ಥಳಗಳು, ಐತಿಹಾಸಿಕ ಹಿನ್ನೆಲೆಯ ಧಾರ್ಮಿಕ ಕ್ಷೇತ್ರಗಳು, ಸಾಂಸ್ಕೃತಿಕ ಪರಂಪರೆ ಇಲ್ಲಿಯ ಅರೆಮಲೆನಾಡು, ಮಲೆನಾಡುಗಳ ಫಲವತ್ತತೆ, ಭೌಗೋಳಿಕ ಹಿನ್ನೆಲೆ ಎಲ್ಲವನ್ನು ಅರಿಯುವ ಪ್ರಯತ್ನಗಳು ನಡೆದಿವೆ. ನಡೆಯುತ್ತಿವೆ. ಹಾಗಾಗಿ ಇಂದು ದಾವಣಗೆರೆ ಒಳಗೊಂಡಂತೆ ಈ ಪ್ರದೇಶ ಐತಿಹಾಸಿಕವಾಗಿ ಮಹತ್ವದ ಸ್ಥಾನ ಪಡೆದಿದೆ. ಇಂತಹ ವಿಸ್ತಾರವಾದ ಇತಿಹಾಸವನ್ನು ಹೊಂದಿರುವ ಪ್ರತಿಯೊಂದು ಪ್ರದೇಶಗಳ ಬಗ್ಗೆ ಇದೂವರೆಗೂ ಅನೇಕ ಅಧ್ಯಯನಗಳು, ಸಂಶೋಧನೆಗಳು ನಡೆದು ಅನೇಕ ಕೃತಿಗಳು, ಪ್ರಬಂಧಗಳು, ಲೇಖನಗಳು, ಲಾವಣಿಗಳು, ಜಾನಪದ ಗೀತೆಗಳು, ಪ್ರಾರ್ಥನಾ ಪದಗಳು, ಕಾದಂಬರಿಗಳು ಮುಂತಾದ ಸಾಹಿತ್ಯದ ಪ್ರಕಾರಗಳು ರಚನೆಯಾಗಿವೆ. ಇವುಗಳಲ್ಲಿ ಕೆಲವು ವೈಚಾರಿಕತೆ ಮತ್ತು ಚಾರಿತ್ರಿಕ ವಸ್ತು ಬಗೆಗಿನ ಖಚಿತ

ವಿಶ್ಲೇಷಣೆಯಿಲ್ಲದೆ ಸೊರಗಿದ್ದರೂ ವಿವಿಧ ಕಾಲಘಟ್ಟಗಳಲ್ಲಿ ಆದ ಒಟ್ಟಾರೆ ಬದಲಾವಣೆ, ಸ್ಥಿತ್ಯಂತರಗಳನ್ನು ಸ್ಥೂಲವಾಗಿಯಾದರೂ ತಿಳಿದುಕೊಳ್ಳಲು ಸಹಾಯಕವಾಗಿದೆ[೧೪].

ಹರಪನಹಳ್ಳಿ ಹಾಗೂ ಸಮಕಾಲೀನ ಪಾಳೆಯಗಾರರನ್ನು ಕುರಿತಾದ ಅನೇಕ ಗ್ರಂಥಗಳು, ಪ್ರಬಂಧಗಳು, ಲೇಖನಗಳು, ಜಾನಪದ ಸಾಹಿತ್ಯ, ಲಾವಣಿಗಳು ಮುಂತಾದ ಸಾಹಿತ್ಯಿಕ ಪ್ರಕಾರಗಳು ಲಭ್ಯವಾಗಿದ್ದು ನಾನು ಪರಿಶೀಲಿಸಿದ ಅಧ್ಯಯನ ನಡೆಸಿದ ಕೆಲವು ಸಾಹಿತ್ಯ ಗ್ರಂಥಗಳು ಈ ಕೆಳಗಿನಂತಿವೆ. ಚಿಕ್ಕೇರೂರು ಗೋವಿಂದಾಚಾರ್ಯರ ಹರಪನಹಳ್ಳಿ ಪಾಳೆಯಗಾರರು ಅಪ್ರಕಟಿತ ಹಸ್ತಪ್ರತಿ,[೧೫] ಕುಂಬಾ ಸದಾಶಿವಪ್ಪನವರ[೧೬] ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಹರಪನಹಳ್ಳಿ ತಾಲೂಕು ದರ್ಶನ, ರಾಯ ಸಂಸ್ಕೃತಿ, ಡಾ.ಎಂ. ಕೊಟ್ರೇಶ್‌ರವರ[೧೭] ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಬಳ್ಳಾರಿ ಜಿಲ್ಲೆಯ ಕೋಟೆಗಳು, ಐತಿಹಾಸಿಕ–ಧಾರ್ಮಿಕ ಶ್ರೀಕ್ಷೇತ್ರ ಉಚ್ಚಂಗಿದುರ್ಗ, ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರ[೧೮], ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಬ್ರಿಟಿಷರ ವಿರುದ್ಧ ಬೇಡ ನಾಯಕರ ಹೋರಾಟಗಳು, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಕರ್ನಾಟಕದಲ್ಲಿ ತಳವಾರಿಕೆ, ಕಾಮಗೇತಿ ವಂಶಜರ ಚರಿತ್ರೆ, ಎಂ.ಎಸ್. ಪುಟ್ಟಣ್ಣನವರ[೧೯] ಚಿತ್ರದುರ್ಗದ ಪಾಳೆಯಗಾರರು, ಇಕ್ಕೇರಿ ಸಂಸ್ಥಾನದ ಚರಿತ್ರೆ ಹಾಗಲವಾಡಿ ಪಾಳಯಗಾರರು, ಪಿ. ಅಬ್ದುಲ್ ಸತ್ತಾರ್‌ರವರ[೨೦] ತರಿಕೇರೆಯ ಪಾಳೆಯಗಾರರು ಡಾ. ಡಿ.ವಿ. ಪರಮಶಿವಮೂರ್ತಿಯವರ[೨೧] ಸಂಶೋಧನೆಯ ಸಿರಿ, ಡಾ. ಡಿ.ಎನ್. ಯೋಗಿಶ್ವರಪ್ಪ[೨೨] ಇವರ ಹಾಗಲವಾಡಿ ನಾಯಕರು, ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು, ಡಾ. ಸಿ.ಆರ್. ಶ್ಯಾಮಲರವರ[೨೩] ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಪ್ರೊ. ಲಕ್ಷ್ಮಣ್ ತೆಲಗಾವಿಯವರ[೨೪] ಎಪ್ಪತ್ತೇಳು ಪಾಳೆಯಗಾರರು, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ ಡಾ. ಸಿ. ಮಹದೇವರವರ[೨೫] ಸಂಪಾದನೆಯ ಹೊಸಪೇಟೆ ತಾಲೂಕು ದರ್ಶನ, ಗುರುಮೂರ್ತಿ ಪೆಂಡಕೂರುರವರ[೨೬] ಬಳ್ಳಾರಿ ಜಿಲ್ಲೆಯ ಸ್ಥಳ ನಾಮಗಳು, ಸರಿತಾ ಕುಸುಮಾಕರ ದೇಸಾಯಿ ಇವರ[೨೭] ಹರಪನಹಳ್ಳಿ ಭೀಮವ್ವನವರ ಹಾಡುಗಳು, ವೈ. ಹನುಮಂತ ರೆಡ್ಡಿಯವರ[೨೮] ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಸುಮತೀಂದ್ರ ನಾಡಿಗ್‌ರವರ[೨೯] ಸಂತೆಬೆನ್ನೂರು ನಾಯಕರು, ಗೋವಿಂದಮೂರ್ತಿ ದೇಸಾಯಿ[೩೦] ಇವರ ಸವಣೂರು ನವಾಬರು ಎ.ಎಸ್. ನಂಜುಂಡ ಸ್ವಾಮಿಯವರ[೩೧] ಪಾಳೆಯಗಾರರು ಮತ್ತು ಒಡೆಯರ ಇತಿಹಾಸ, ಬಸವರಾಜ ಕುಂಚೂರು[೩೨] ಅವರ ನಮ್ಮೂರು ಕೆರೆಗಳು, ಎಂ. ದೃವ ನಾರಾಯಣರವರ[೩೩] ನಾರಾಯಣದೇವರಕೆರೆ, ಡಾ. ಎಫ್.ಟಿ. ಹಳ್ಳಿಕೇರಿಯವರ[೩೪] ಸಂಪಾದನೆಯ ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ, ಬಣಕಾರ ರಾಜಶೇಖರರವರ[೩೫] ಬಾಳ್ಳುಳಿಯ ಖಡ್ಗ ಮತ್ತು ರಾಜಸೋಮಶೇಖರ ನಾಯಕ, ಡಾ. ಬಿ.ಎ. ವಿವೇಕ ರೈ (ಸಂ) ರವರ ಪ್ರವಾಸಿಕಂಡ ವಿಜಯನಗರ[೩೬] ಡಾ. ದೇವರ ಕೊಂಡಾರೆಡ್ಡಿಯವರ[೩೭]

ಸಂಪಾದನೆಯ ಕ.ವಿ.ವಿ. ಶಾಸನ ಸಂಪುಟ–೧ (ಬಳ್ಳಾರಿ ಜಿಲ್ಲೆ) ಸಂಪುಟ–೨ (ಕೊಪ್ಪಳ ಜಿಲ್ಲೆ) ಸಂಶೋಧನಾ ಪ್ರಬಂಧಗಳಾದ ಡಾ. ಎನ್.ಜಿ. ಸಂತೋಷರವರ 'ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ'[೩೮] ಡಾ. ಭಾರತೀ ಅಳವಂಡಿಮಠ ಇವರ 'ಬಾಗಳಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ,'[೩೯] ಎಂ.ಫಿಲ್ ಪ್ರಬಂಧಗಳಾದ ದಂಡಿದುರುಗಮ್ಮನ ಸಾಂಸ್ಕೃತಿಕ ಅಧ್ಯಯನ (ಡಿ. ಬಸವರಾಜ)[೪೦] ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ (ಎಸ್. ಚನ್ನಬಸಪ್ಪ)[೪೧] ಕೂಡ್ಲಿಗಿ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು. 'ತರಳುಬಾಳು ಹುಣ್ಣಿಮೆ ಸ್ಮರಣ ಸಂಚಿಕೆ', ಡಾ. ಸಿ.ಎಂ. ಚುರ್ಚಿಹಾಳುಮಠರವರು ಸಂಪಾದಿಸಿ ಪ್ರಕಟಿಸಿರುವ 'ಮುಂಡರಗಿ ನಾಡಸ್ವಾತಂತ್ರ್ಯ ಸಂಗ್ರಾಮ', ಕೃತಿಗಳು ಇನ್ನು ಮುಂತಾದವುಗಳು ಅಧ್ಯಯನ ಯೋಗ್ಯ ಆಕರಗಳಾಗಿದ್ದು ಹರಪನಹಳ್ಳಿ ಪಾಳೆಯಗಾರರು ಮತ್ತು ಸಮಕಾಲೀನ ಪಾಳೆಯಗಾರರೊಂದಿಗಿನ ಸಂಬಂಧ, ಯುದ್ಧಗಳು, ಸಾಹಿತ್ಯ ಪರಂಪರೆ, ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಅಂಶಗಳು, ಶಾಸನಗಳು, ಕಲೆ, ವಾಸ್ತು, ಶಿಲ್ಪ ಮುಂತಾದ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತವೆ.

ಹೀಗೆ ದಾವಣಗೆರೆ ಜಿಲ್ಲೆ ಹಾಗೂ ಹರಪನಹಳ್ಳಿ ಪಾಳೆಯಗಾರರ ಇತಿಹಾಸದ ಬಗ್ಗೆ ಇನ್ನೂ ಅನೇಕ ಕೃತಿಗಳು, ಲೇಖನಗಳು, ಕಾದಂಬರಿಗಳು, ಲಾವಣಿಗಳು, ಜನಪದಗೀತೆಗಳು, ಸ್ಮರಣ ಸಂಚಿಕೆಗಳು ರಚನೆಯಾಗಿವೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಪ್ರಮುಖವಾದ ಆಧಾರಗಳನ್ನು ಮಾತ್ರ ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಹಾಗೂ ಪರಿಶೀಲಿಸಿದ ಎಲ್ಲಾ ಸಾಹಿತ್ಯಾಧಾರಗಳನ್ನು ಗಮನಿಸಿದರೆ ಹರಪನಹಳ್ಳಿ ಪಾಳೆಯಗಾರರ ಬಗ್ಗೆ ನಡೆದಿರುವ ಅಧ್ಯಯನಗಳು ಕಡಿಮೆ ಎಂದೇ ಹೇಳಬಹುದು. ಅದರಲ್ಲೂ ರಾಜಕೀಯ ಚರಿತ್ರೆಯ ಬಗ್ಗೆ ಕೆಲವೊಂದು ಅಧ್ಯಯನಗಳು ಕೆಲವು ಲೇಖನಗಳಲ್ಲಿ, ಪತ್ರಿಕೆಗಳಲ್ಲಿ ಉಲ್ಲೇಖವಾಗಿದ್ದು ಕೆಲವು ಗ್ರಂಥಗಳು ರಚನೆಯಾಗಿದ್ದರೆ ಇನ್ನೂ ಕಲೆ, ವಾಸ್ತುಶಿಲ್ಪ ಮತ್ತು ರಕ್ಷಣಾ ಸ್ಮಾರಕಗಳು, ಶಾಸನಗಳ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಇವುಗಳ ಕುರಿತು ಕೆಲವೊಂದು ಲೇಖನಗಳಲ್ಲಿ, ಪತ್ರಿಕೆಗಳಲ್ಲಿ ಉಲ್ಲೇಖವಾಗಿದೆಯೇ ಹೊರತು ಅದನ್ನೇ ಒಂದು ಸಂಶೋಧನೆಯ ವಿಷಯವಾಗಿ ಸಮಗ್ರ ವ್ಯವಸ್ಥಿತ ಹಾಗೂ ಕ್ರಮಬದ್ಧವಾದ ಅಧ್ಯಯನಗಳು ನಡೆದಿರುವುದು ಕಂಡು ಬಂದಿಲ್ಲ. ಹಾಗಾಗಿ ಹರಪನಹಳ್ಳಿ ಪಾಳೆಯಗಾರರ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸ ಕುರಿತಂತೆ ಒಂದು ವ್ಯವಸ್ಥಿತ ಹಾಗೂ ಕ್ರಮಬದ್ಧವಾದ ಅಧ್ಯಯನ ಕೈಗೊಂಡು ಕರ್ನಾಟಕದ ರಾಜಕೀಯ ಇತಿಹಾಸ, ಕಲೆ ಮತ್ತು ವಾಸ್ತುಶಿಲ್ಪ, ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ಒಟ್ಟಾರೆಯಾಗಿ ಸಂಗ್ರಹಿಸುವುದು ಮತ್ತು ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರರಾಗಿ ಸ್ಥಳೀಯವಾಗಿ ಏಳಿಗೆಗೆ ಬಂದ ಈ ಪಾಳೆಯಗಾರರು ಹೇಗೆ ತಮ್ಮ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸಿಕೊಂಡು ಹೋದರೆಂಬುದನ್ನು ಗುರುತಿಸುವುದೇ ಪ್ರಸ್ತುತ ನನ್ನ ಅಧ್ಯಯನದ ಉದ್ದೇಶವಾಗಿದೆ.

**ಅಡಿಟಿಪ್ಪಣಿಗಳು**

೧. ಶ್ರೀನಿವಾಸ್ ಎಂ.ವಿ., ೨೦೦೧, 'ಸ್ಥಳೀಯ ಚರಿತ್ರೆ', ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೪, ತಂಬಂಡ ವಿಜಯ್‌ಪೂಣಚ್ಚ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೩೯.

೨. ಅದೇ ಪುಟ. ೩೯.

೩. ಲಕ್ಷ್ಮಣ್ ತೆಲಗಾವಿ, ೨೦೦೩, 'ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ', ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೬.

೪. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು', ಕನ್ನಡ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೯.

೫. ಗಿರಿಜ .ಟಿ, ೨೦೦೧, 'ದಾವಣಗೆರೆ ಇದು ನಮ್ಮ ಜಿಲ್ಲೆ', ನಿಹಾರಿಕ ಪ್ರಕಾಶನ, ದಾವಣಗೆರೆ. ಪುಟ. ೨.

೬. ದೇವರಕೊಂಡಾರೆಡ್ಡಿ, ೧೯೯೪, 'ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ. ೧.

೭. ಅದೇ ಪುಟ. ೧.

೮. ಅದೇ ಪುಟ. ೨.

೯. ಅದೇ ಪುಟ. ೨.

೧೦. ಚಂದ್ರಪೂಜಾರಿ ಎಂ., ೨೦೦೮, 'ಸಂಶೋಧನಾ ಪ್ರಸ್ತಾವ', ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೯-೨೦.

೧೧. ಗಿರಿಜ .ಟಿ, ಪೂರ್ವೋಕ್ತ, ಪುಟ. ೧.

೧೨. ಕನ್ನಡ ವಿಷಯ ವಿಶ್ವಕೋಶ, ಸಂ-೧ (ಪರಿಷ್ಕೃತ) ೨೦೦೫, ಮೈಸೂರು ವಿಶ್ವವಿದ್ಯಾಲಯ, ಪುಟ. ೯೬೬.

೧೩. ಗಿರಿಜ ಟಿ. ಪೂರ್ವೋಕ್ತ, ಪುಟ. ೩.

೧೪. ಲಕ್ಷ್ಮಣ್ ತೆಲಗಾವಿ, ೨೦೦೪, 'ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ – ಒಂದು ಶತಮಾನ', ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಪುಟ. ೨.

೧೫. ಚಿಕ್ಕೇರೂರು ಗೋವಿಂದಾಚಾರ್ಯ, ಅಪ್ರಕಟಿತ ಹಸ್ತಪ್ರತಿ.

೧೬. ಸದಾಶಿವಪ್ಪ ಕುಂಬಾ, ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೮, ಹರಪನಹಳ್ಳಿ ತಾಲೂಕು ಪರಿಚಯ, ಮಾಲತೇಶ ಪ್ರಕಾಶನ, ಹರಪನಹಳ್ಳಿ, ೨೦೧೧, ರಾಯಸಂಸ್ಕೃತಿ, ಹರಪನಹಳ್ಳಿ.

೧೭. ಕೊಟ್ರೇಶ್ .ಎಂ, ೨೦೧೦, ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಕ.ವಿ.ವಿ., ಹಂಪಿ, ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕ.ವಿ.ವಿ., ಹಂಪಿ. ೨೦೦೬, ಐತಿಹಾಸಿಕ-ಧಾರ್ಮಿಕ ಶ್ರೀಕ್ಷೇತ್ರ ಉಚ್ಚಂಗಿದುರ್ಗ, ನಮ್ಮೂರು ಪ್ರಕಾಶನ, ಉಚ್ಚಂಗಿದುರ್ಗ.

೧೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಕ.ವಿ.ವಿ. ಹಂಪಿ. ೨೦೦೯, ಬ್ರಿಟೀಷರ ವಿರುದ್ಧ ಬೇಡ ನಾಯಕರ ಹೋರಾಟಗಳು, ಚಿನ್ನಹಗರಿ ಪ್ರಕಾಶನ, ಕೆ.ಬಿ. ಹಟ್ಟಿ, ೨೦೦೯, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಕ.ವಿ.ವಿ. ಹಂಪಿ. ೨೦೦೬, ಕರ್ನಾಟಕದಲ್ಲಿ ತಳವಾರಿಕೆ, ಕ.ವಿ.ವಿ., ಹಂಪಿ.

೧೯. ಪುಟ್ಟಣ್ಣ ಎಂ.ಎಸ್., ೧೯೯೭, ಚಿತ್ರದುರ್ಗದ ಪಾಳೆಯಗಾರರು, ಕಾವ್ಯಾಲಯ, ಮೈಸೂರು. ೧೯೩೧, ಇಕ್ಕೇರಿ ಸಂಸ್ಥಾನದ ಚರಿತ್ರೆ, ಬೆಂಗಳೂರು. ೧೯೩೧, ಹಾಗಲವಾಡಿ ಪಾಳೆಯಗಾರರು, ಬೆಂಗಳೂರು.

೨೦. ಅಬ್ದುಲ್ ಸತ್ತಾರ್ .ಪಿ, ೧೯೯೭, ತರೀಕೆರೆಯ ಪಾಳೆಯಗಾರರು, ಲೋಕಪಾವನಿ ಪ್ರಕಾಶನ, ಪಾಂಡವಪುರ.

೨೧. ಪರಮಶಿವಮೂರ್ತಿ, ಡಿ.ವಿ., ೧೯೯೬, ಸಂಶೋಧನೆಯ ಸಿರಿ, ಗುಣನಿಧಿ ಪ್ರಕಾಶನ, ಬೆಂಗಳೂರು.

೨೨. ಯೋಗೀಶ್ವರಪ್ಪ ಡಿ.ಎನ್., ೧೯೯೯, ಹಾಗಲವಾಡಿ ನಾಯಕರು, ಕ.ವಿ.ವಿ., ಹಂಪಿ. ೨೦೦೯, ಮದ್ಯಕಾಲೀನ ಕರ್ನಾಟಕದ ಪಾಳೆಯಗಾರರು, ಧಾತ್ರಿ ಪ್ರಕಾಶನ, ಬೆಂಗಳೂರು.

೨೩. ಶ್ಯಾಮಲ .ಸಿ.ಆರ್, ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು, ಒಂದು ಅಧ್ಯಯನ. ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೪. ಲಕ್ಷ್ಮಣ್ ತೆಲಗಾವಿ, ೨೦೧೧, ಎಪ್ಪತ್ತೇಳು ಪಾಳೆಯಗಾರರು, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ. (ಸಂ) ೨೦೦೮), ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ. (ಸಂ) ೧೯೭೬, ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ. ೨೦೦೩, ಸ್ಥಳೀಯ ಚರಿತ್ರೆ, ಕ.ವಿ.ವಿ., ಹಂಪಿ.

೨೫. ಮಹದೇವ .ಸಿ. (ಸಂ), ೨೦೦೨, ಹೊಸಪೇಟೆ ತಾಲೂಕು ದರ್ಶನ, ಕ.ವಿ.ವಿ., ಹಂಪಿ.

೨೬. ಗುರುಮೂರ್ತಿ ಪೆಂಡಕೂರು, ೨೦೦೬, ಬಳ್ಳಾರಿ ಜಿಲ್ಲೆಯ ಸ್ಥಳ ನಾಮಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೭. ಸರಿತಾ ಕುಸುಮಾಕರ ದೇಸಾಯಿ, ೨೦೦೧, ಹರಪನಹಳ್ಳಿ ಭೀಮವ್ವನವರ ಹಾಡುಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೮. ಹನುಮಂತರೆಡ್ಡಿ, ೨೦೦೮, ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಇತಿಹಾಸ ಸಂಶೋಧನಾ ಮಂಡಲ, ಧಾರವಾಡ.

೨೯. ಸುಮತೀಂದ್ರ ನಾಡಿಗ್, ೨೦೦೮, ಸಂತೆಬೆನ್ನೂರು ನಾಯಕರು, ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ಬೆಂಗಳೂರು.

೩೦. ಗೋವಿಂದಮೂರ್ತಿ ದೇಸಾಯಿ, ೧೯೯೯, ಸವಣೂರು ನವಾಬರು, ಕ.ವಿ.ವಿ., ಹಂಪಿ.

೩೧. ನಂಜುಂಡಸ್ವಾಮಿ, ಎ.ಎಸ್., ೧೯೮೬, ಪಾಳೆಯಗಾರರು ಮತ್ತು ಒಡೆಯರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೩೨. ಬಸವರಾಜ ಕುಂಚೂರು, ೨೦೦೯, ನಮ್ಮೂರ ಕೆರೆಗಳು, ಶ್ರೀಚಕ್ರ ಪ್ರಕಾಶನ, ಕುಂಚೂರು.

೩೩. ದೃವನಾರಾಯಣ .ಎ, ೧೯೭೯, ನಾರಾಯಣದೇವರಕೆರೆ, ಮರಿಯಮ್ಮನಹಳ್ಳಿ.

೩೪. ಹಳ್ಳಿಕೇರಿ, ಎಫ್.ಟಿ., (ಸಂ) ೨೦೦೩, ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ, ಕ.ವಿ.ವಿ., ಹಂಪಿ.

೩೫. ರಾಜಶೇಖರ ಬಣಕಾರ, ೨೦೧೧, ಬಾಳ್ಗುಳಿಯ ಖಡ್ಗ ಮತ್ತು ರಾಜ ಸೋಮಶೇಖರ ನಾಯಕ, ಹರಪನಹಳ್ಳಿ.

೩೬. ವಿವೇಕ ರೈ .ಬಿ.ಎ, (ಸಂ) ೨೦೧೦ ಪ್ರವಾಸಿಕಂಡ ವಿಜಯನಗರ, ಕ.ವಿ.ವಿ., ಹಂಪಿ.

೩೭. ದೇವರಕೊಂಡಾ ರೆಡ್ಡಿ, (ಸಂ) ೧೯೯೮, ಕ.ವಿ.ವಿ. ಶಾಸನ ಸಂಪುಟ, ೧, ೨, ಕ.ವಿ.ವಿ., ಹಂಪಿ.

೩೮. ಸಂತೋಷ್ .ಎನ್.ಜಿ, ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ, ಸಂಶೋಧನಾ ಮಹಾಪ್ರಬಂಧ.

೩೯. ಭಾರತೀ ಅಳವಂಡಿ ಮಠ, ಬಾಗಳಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಂಶೋಧನಾ ಮಹಾ ಪ್ರಬಂಧ.

೪೦. ಬಸವರಾಜ .ಡಿ, ದಂಡಿ ದುರುಗಮ್ಮನ ಸಾಂಸ್ಕೃತಿಕ ಅದ್ಯಯನ, ಎಂ.ಫಿಲ್ ಪ್ರಬಂಧ.

೪೧. ಚನ್ನಬಸಪ್ಪ .ಎಸ್, ನೀಲಗುಂದ ಪರಿಸರದ ಸಾಂಸ್ಕೃತಿಕ ಅದ್ಯಯನ, ಎಂ.ಫಿಲ್ ಪ್ರಬಂಧ.

## ಅಧ್ಯಾಯ – ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

---

೨.೧ ಭೌಗೋಳಿಕ ಪರಿಸರ

೨.೨ ಚಾರಿತ್ರಿಕ ಹಿನ್ನೆಲೆ

೨.೩ ಪಾಳೆಯಗಾರರು : ಕರ್ನಾಟಕದಲ್ಲಿ ಪಾಳೆಯಪಟ್ಟುಗಳು

೨.೪ ಹರಪನಹಳ್ಳಿ ಚಾರಿತ್ರಿಕ ನೋಟ

೨.೫ ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಇತಿಹಾಸ

## ಅಧ್ಯಾಯ – ೨

## ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ೨.೧ ಭೌಗೋಳಿಕ ಪರಿಸರ

ಇತಿಹಾಸವು ಎಲ್ಲಾ ಶಾಸ್ತ್ರಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಅದರಲ್ಲೂ ಮುಖ್ಯವಾಗಿ ಭೂಗೋಳಶಾಸ್ತ್ರದೊಂದಿಗೆ ಈ ಸಂಬಂಧ ಅಧಿಕ. ಭೂಗೋಳ ಮತ್ತು ಇತಿಹಾಸ ಒಂದು ನಾಣ್ಯದ ಎರಡು ಮುಖಗಳು. ಐತಿಹಾಸಿಕ, ಸಾಂಸ್ಕೃತಿಕ, ಘಟನೆಗಳ ಮೇಲೆ ಭೌಗೋಳಿಕಾಂಶಗಳ ಪ್ರಭಾವವನ್ನು ಗಮನಿಸಿಯೇ ಕಾಲಗಣನೆ ಮತ್ತು ಭೂಗೋಳಶಾಸ್ತ್ರ ಇತಿಹಾಸದ ಎರಡು ಕಣ್ಣುಗಳು ಎನ್ನಲಾಗಿದೆ.

ಕರ್ನಾಟಕಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಪ್ರಾಗೈತಿಹಾಸಿಕ ಕಾಲದಿಂದ ಆರಂಭಿಸಿ ಇಂದಿನವರೆಗೂ ನಿರಂತರತೆ ಇದೆ. ರಾಮಾಯಣ–ಮಹಾಭಾರತಗಳಂತಹ ಮಹಾಕಾವ್ಯಗಳಲ್ಲಿ ಕರ್ನಾಟಕದ ಹೆಸರು, ಪದವ್ಯುತ್ಪತ್ತಿ, ಮಹತ್ವ ಮುಂತಾದ ವಿಷಯಗಳ ಬಗ್ಗೆ ಉಲ್ಲೇಖವಿದ್ದು ಅದರ ಪ್ರಾಚೀನತೆಯನ್ನು ತಿಳಿಸಿಕೊಡುತ್ತದೆ. ಕರ್ನಾಟಕದ ಪ್ರಾಚೀನತೆಯನ್ನು ಪ್ರಾಗೈತಿಹಾಸ ಕಾಲ ಕ್ರಿ.ಪೂ.೧೦,೦೦೦–೩೦೦ ಹಾಗೂ ಇತಿಹಾಸ ಕಾಲ ಕ್ರಿ.ಪೂ. ೩೦೦[೧] ರಿಂದ ಎಂದು ಗುರುತಿಸಲಾಗಿದೆ. ಹಾಗೆಯೇ ಪೌರಾಣಿಕವಾಗಿ ಕ್ರಿ.ಪೂ. ೩೦೦೦ಕ್ಕೆ[೨] ಕರ್ನಾಟಕದ ಪ್ರಾಚೀನತೆಯನ್ನು ಕೊಂಡೊಯ್ಯಬಹುದಾಗಿದೆ. ಮಹಾಭಾರತದಲ್ಲಿ ಕರ್ನಾಟಕದ ಉಲ್ಲೇಖಗಳಿವೆ. ಮಹಾಭಾರತದ ಭೀಷ್ಮಪರ್ವದ ಒಂಭತ್ತನೆಯ ಅಧ್ಯಾಯದಲ್ಲಿ ದ್ರಾವಿಡ, ಕೇರಳ ಮುಂತಾದ ಹೆಸರುಗಳೊಂದಿಗೆ ಕರ್ನಾಟಕದ ಹೆಸರು ಉಲ್ಲೇಖಗೊಂಡಿದೆ[೩]. ಅಂದಿನ ಜನಪದಗಳನ್ನು (ಪ್ರಾಂತಗಳನ್ನು) ಕುರಿತು ಹೇಳುವಾಗ 'ಕರ್ಣಾಟಂ', 'ಕರ್ಣಾಟಕಂ' ಎಂಬ ಪ್ರಸ್ತಾಪವಿದೆ[೪].

ಪುರಾಣ ಗ್ರಂಥಗಳಂತೆ ಅನೇಕ ಶಾಸನಗಳಲ್ಲೂ ಕರ್ನಾಟಕದ ಹೆಸರಿನ ಬಗ್ಗೆ ಉಲ್ಲೇಖವಿದೆ. ಶಾಸನಗಳಲ್ಲಿ ಕೂಟಶಾಸನವೆಂದು ಅನುಮಾನವಿರುವ ಕದಂಬ ಅರಸ ವಿಷ್ಣುವರ್ಮನ ಬೀರೂರು ಶಾಸನದಲ್ಲಿ[೫] ಕರ್ನಾಟಕದ ಪ್ರಪ್ರಥಮ ಉಲ್ಲೇಖವಿದೆ. ಇಂತಹ ಪ್ರಾಚೀನ ಕರ್ನಾಟಕದ ಮಧ್ಯವರ್ತಿ ಕೇಂದ್ರದಲ್ಲಿರುವ ಹರಪನಹಳ್ಳಿ ಪಾಳೆಯಗಾರರ ಪ್ರದೇಶವು ನೀರಿನ ಆಸರೆ, ಫಲವತ್ತಾದ ಭೂಮಿ, ವಾಣಿಜ್ಯ, ವಿದ್ಯಾಕೇಂದ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿ ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ ಸಂಘಟನೆ ಸಮೃದ್ಧಿಗಳಿಂದ ಕರ್ನಾಟಕದಲ್ಲಿ ಪ್ರಸಿದ್ಧಿಯಾಗಿದೆ. ಈ ಪ್ರದೇಶವು ಬೆಟ್ಟಗುಡ್ಡಗಳಿಂದ ಆವೃತವಾಗಿದ್ದು ಪ್ರಮುಖ ಬೆಟ್ಟಗುಡ್ಡದ ಸಾಲುಗಳು ಸ್ವಾಭಾವಿಕ ರಕ್ಷಣೆ ನೀಡಿವೆ.

ಈ ಪ್ರದೇಶದಲ್ಲಿ ಖನಿಜ ಸಂಪತ್ತು ಹೇರಳವಾಗಿದ್ದು ಅಣಜಿ, ಹರಪನಹಳ್ಳಿ ಹಾಗೂ ಹೊಸಕೆರೆ ಬಳಿ ಮ್ಯಾಂಗನೀಸ್ ದೊರೆಯುತ್ತದೆ. ಹೊನ್ನಮರಡಿ, ಚಿಗಟೇರಿ, ಕಲ್ಲಳ್ಳಿ, ಕೊಂಗನಹೊಸೂರುಗಳಲ್ಲಿ ಚಿನ್ನ, ಅಣಜಿ, ಗುಮ್ಮನೂರುಗಳಲ್ಲಿ ಕಬ್ಬಿಣ, ಹರಪನಹಳ್ಳಿಗೆ ಹತ್ತಿರದಲ್ಲಿ ತಾಮ್ರ, ಬೆಣಚುಗಲ್ಲು, ದೊರೆಯುತ್ತವೆ[೮]. ಖನಿಜ ಸಂಪತ್ತಿನಂತೆ ಅರಣ್ಯಸಂಪತ್ತಿನಲ್ಲಿಯೂ ಈ ಪ್ರದೇಶ ಮಹತ್ವದ ಸ್ಥಾನ ಪಡೆದಿದೆ. ಹರಪನಹಳ್ಳಿ ತಾಲೂಕಿನಲ್ಲಿ ೨೨.೨೪೭ ಹೆಕ್ಟೇರ್ ಅರಣ್ಯ ಪ್ರದೇಶ ಇದೆ.[೯] ಇಲ್ಲಿ ಸಾಕಷ್ಟು ಮಳೆ ಬೀಳುವುದರಿಂದ ಜಲಸಂಪತ್ತು ಸಮೃದ್ಧಿಯಾಗಿದೆ. ವಾರ್ಷಿಕ ಸರಾಸರಿ ೭೩೦.೨೦ ಮಿ.ಮೀ ನಷ್ಟು ಮಳೆ ಬೀಳುತ್ತದೆ. ಕೃಷ್ಣ ಜಲಾಯನ ಪ್ರದೇಶದಲ್ಲಿರುವ ಇಲ್ಲಿ ತುಂಗಭದ್ರಾ, ಚಿಕ್ಕಹಗರಿ, ಚಿನ್ನಹಗರಿ ನದಿಗಳು ಹರಿಯುತ್ತವೆ. ನೂರಾರು ಕೆರೆಗಳಿದ್ದು ವ್ಯವಸಾಯಕ್ಕೆ ಯೋಗ್ಯವಾಗಿವೆ.

ಇಲ್ಲಿಯ ಹವಾಮಾನವು ಏರಿಳಿತಗಳಿಂದ ಕೂಡಿದ್ದು ಜನವರಿ ಕೊನೆಯಿಂದ ಪ್ರಾರಂಭವಾದ ಬೇಸಿಗೆ ತಾಪ ಮಾರ್ಚ್, ಏಪ್ರಿಲ್, ಮೇ, ತಿಂಗಳಲ್ಲಿ ಅತಿಹೆಚ್ಚು ಪ್ರಮಾಣದಲ್ಲಿರುತ್ತದೆ. ವಾರ್ಷಿಕ ಸರಾಸರಿ ೭೭.೩ ಡಿಗ್ರಿ ಫ್ಯಾರನ್‌ಹೀಟ್ ಉಷ್ಣಾಂಶವಿರುತ್ತದೆ. ಜೂನ್ ತಿಂಗಳಿಂದ ಮಳೆಗಾಲ ಪ್ರಾರಂಭವಾದರೂ ಜುಲೈ, ಆಗಸ್ಟ್, ಸೆಪ್ಟಂಬರ್ ತಿಂಗಳುಗಳಲ್ಲಿ ಹೆಚ್ಚು ಮಳೆಯಾಗಿ ಆಕ್ಟೋಬರ್‌ವರೆಗೂ ಮಳೆ ಬೀಳುತ್ತದೆ. ಭೂಮಿಯು ಕಪ್ಪು, ಕೆಂಪು, ಜೇಡಿಮಣ್ಣುಗಳಿಂದ ಫಲವತ್ತಾಗಿದ್ದು ವ್ಯವಸಾಯಕ್ಕೆ ಯೋಗ್ಯವಾಗಿದೆ. ಪ್ರಮುಖ ಬೆಳೆಗಳೆಂದರೆ ರಾಗಿ, ಭತ್ತ, ಕಬ್ಬು, ಅಡಕೆ, ಬಾಳೆ, ಹತ್ತಿ, ಜೋಳ, ದ್ವಿದಳ ಧಾನ್ಯ, ತರಕಾರಿ, ಹಣ್ಣು, ಹೂ, ಎಣ್ಣೆ ಬೀಜಗಳು ಮುಂತಾದವು[೧೧].

ತಾಲ್ಲೂಕು ಕೇಂದ್ರವಾಗಿರುವ ಹಾಗೂ ನನ್ನ ಅಧ್ಯಯನ ಕ್ಷೇತ್ರವಾಗಿರುವ ಹರಪನಹಳ್ಳಿಯ ಉತ್ತರದಲ್ಲಿ ಹಡಗಲಿ, ಪೂರ್ವದಲ್ಲಿ ಕೂಡ್ಲಿಗಿ, ಜಗಳೂರು, ದಕ್ಷಿಣದಲ್ಲಿ ಹರಿಹರ, ದಾವಣಗೆರೆ, ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕುಗಳು ಸುತ್ತುವರೆದಿವೆ.[೧೨] ಹರಪನಹಳ್ಳಿ ಪಟ್ಟಣ ೧೪.೪೭ ಉತ್ತರವಾಗಿ ೭೬.೦ ಪೂರ್ವ ಪಶ್ಚಿಮವಾಗಿದ್ದರೆ ತಾಲ್ಲೂಕು ೧೪.೩೦ ಮತ್ತು ೧೫.೦ ಮತ್ತು ೭೫.೪೨, ೭೬.೧೩ರ ಅಕ್ಷಾಂಶ ರೇಖಾಂಶದಲ್ಲಿದೆ[೧೩].

ಹರಪನಹಳ್ಳಿ ತಾಲೂಕು ಒಟ್ಟು ವಿಸ್ತೀರ್ಣ ೧.೪೨೨.೩ ಚ.ಕಿ.ಮೀ. ಇದ್ದು ೨೩೨ ಗ್ರಾಮಗಳನ್ನು ಹೊಂದಿದೆ. ಚಿಗಟೇರಿ, ಅರಸಿಕೆರೆ, ಹರಪನಹಳ್ಳಿ, ತೆಲಗಿ, ಉಚ್ಚಂಗಿದುರ್ಗಗಳು ಪ್ರಮುಖ ಹೋಬಳಿ ಕೇಂದ್ರಗಳಾಗಿವೆ. ಉತ್ತರಕ್ಕೆ ಇಳಿಜಾರಾಗಿರುವ (೮೫೩ ಮೀ ಎತ್ತರದ) ಕಲ್ಲಳ್ಳಿಗುಡ್ಡ ಶ್ರೇಣಿ ಮುಂದೆ ಕವಲೊಡೆದು ತೆಲಿಗಿಗುಡ್ಡ ಸಮೂಹ ಮತ್ತು ಹರಪನಹಳ್ಳಿಯ ಗುಡ್ಡ ಸಮೂಹವಾಗಿ ತಾಲ್ಲೂಕಿನ ದಕ್ಷಿಣದಲ್ಲಿ ಉಚ್ಚಂಗಿದುರ್ಗದವರೆಗೂ ಸಾಗಿದೆ[೧೪]. ಇದರ ಜೊತೆಗೆ ೭೭೫ ಮೀ ಎತ್ತರದ ನರಸಿಂಹದೇವರಗುಡ್ಡ, ಉಚ್ಚಂಗಿದುರ್ಗದಗುಡ್ಡ, ಹರಪನಹಳ್ಳಿ ಗೋಸಾಯಿಗುಡ್ಡ, ಚಿಗಟೇರಿ ಬಾಜಿಕಲ್ಲುಗುಡ್ಡ, ಮಲ್ಲಪ್ಪನಗುಡ್ಡ ಮುಂತಾದ ಗುಡ್ಡ ಶ್ರೇಣಿಗಳಿವೆ[೧೫]. ತಾಲ್ಲೂಕಿನ ಪಶ್ಚಿಮದ ಎಲ್ಲೆಯಲ್ಲಿ

ತುಂಗಭದ್ರಾ ನದಿ ಗಡಿಯಾಗಿ ಸ್ವಲ್ಪ ದೂರ ಹರಿದು ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕನ್ನು ಬೇರ್ಪಡಿಸಿದೆ. ತಾಲ್ಲೂಕಿನ ಪೂರ್ವದಲ್ಲಿ ತುಂಗಾಭದ್ರಾ ನದಿಯ ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ ತಾಲ್ಲೂಕಿನ ಅಣಜಿಗೇರಿಯಿಂದ ಉತ್ತರಕ್ಕೆ ಹರಿದು ಕೂಡ್ಲಿಗಿ, ಹಡಗಲಿ ತಾಲ್ಲೂಕನ್ನು ಪ್ರವೇಶಿಸಿ ಉತ್ತರಾಭಿಮುಖವಾಗಿ ಹರಿಯುತ್ತದೆ. ನದಿಗಳ ಜೊತೆಗೆ ಸುಮಾರು ೭೦ ಕೆರೆಗಳಿವೆ[೧೬]. ಹಿತಕರವಾದ ಉತ್ತಮ ಹವಾಗುಣವಿದ್ದು ವಾರ್ಷಿಕ ಸರಾಸರಿ ೭೩೦.೨೦ ಮಿ.ಮೀ. ಮಳೆಯಾಗುತ್ತದೆ. ಜೊತೆಗೆ ವ್ಯವಸಾಯಕ್ಕೆ ಅನುಕೂಲವಾದ ಮರಳು, ಕೆಂಪು ಮತ್ತು ಕಪ್ಪುಮಣ್ಣು, ಜೇಡಿಮಣ್ಣು, ಎರೆಮಣ್ಣು ಭೂಮಿಯನ್ನು ಹೊಂದಿದೆ. ಹಾಗೆಯೇ ಚಿಗಟೇರಿ, ಬಾಜಿಕಲ್ಲುಗುಡ್ಡದ ಬಳಿ ಮ್ಯಾಂಗನೀಸ್ ಅದಿರು, ಹರಪನಹಳ್ಳಿ ಪಟ್ಟಣದ ಬಳಿ ತಾಮ್ರ, ಚಿಗಟೇರಿ, ಕೊಂಗನಹೂಸೂರು, ಕಲ್ಲಹಳ್ಳಿಯ ಮೆಕ್ಕಲುಮಣ್ಣಿನಲ್ಲಿ ಚಿನ್ನದ ಅದಿರು, ಕಣಿವೆಹಳ್ಳಿ ಬಳಿ ಕಬ್ಬಿಣದ ಅದಿರು ಮುಂತಾದ ಖನಿಜ ಸಂಪತ್ತನ್ನು ಹೊಂದಿದೆ[೧೭]. ಈ ಪ್ರದೇಶದ ಆರ್ಥಿಕಾಭಿವೃದ್ದಿಗೆ ಸಹಕಾರಿಯಾಗಿವೆ.

### ೨.೨ ಚಾರಿತ್ರಿಕ ಹಿನ್ನೆಲೆ

ಪರ್ಯಾಯದ್ವೀಪ ಭಾಗದ ಅತೀ ಪುರಾತನ ಪ್ರಸ್ಥಭೂಮಿಯಾದ ಕರ್ನಾಟಕ ಪ್ರಪಂಚದ ಅತ್ಯಂತ ಪುರಾತನ ಪೀಠಭೂಮಿಯೂ ಆಗಿದೆ. ಇಂತಹ ಪುರಾತನ ಪೀಠಭೂಮಿಯ ಮಧ್ಯ ಭೂಭಾಗವಾಗಿರುವ ಈ ಪ್ರದೇಶ ರಾಜ್ಯದ ಹೃದಯ ಭಾಗದಲ್ಲಿದೆ. ಅಲ್ಲದೆ ಉತ್ತರ ಮತ್ತು ದಕ್ಷಿಣ ಕರ್ನಾಟಕ ಸಂಸ್ಕೃತಿಗಳನ್ನು ಬೆಸೆಯುವ ಸೇತುವೆಯಾಗಿದೆ[೧೮]. ಈ ಪ್ರದೇಶದಲ್ಲಿ ದೊರಕಿರುವ ಶಾಸನಗಳನ್ನು ಐತಿಹಾಸಿಕ ದಾಖಲೆಗಳನ್ನು ಗಮನಿಸಿದರೆ ಇದು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದು ಬರುತ್ತದೆ.

ಆದಿ ಹಳೇಶಿಲಾಯುಗ, ಸೂಕ್ಷ್ಮಶಿಲಾಯುಗ, ನವಶಿಲಾಯುಗ, ಶಿಲಾತಾಮ್ರಯುಗ, ಬೃಹತ್‌ಶಿಲಾಯುಗ ಸಂಸ್ಕೃತಿಗಳ ನೆಲೆವೀಡಾಗಿರುವ ಈ ಪ್ರದೇಶ ಕರ್ನಾಟಕದ ಮಹತ್ವದ ಐತಿಹಾಸಿಕ ಕೇಂದ್ರವಾಗಿದೆ. ಶಿಲಾಯುಗ ಕಾಲದಿಂದಲೂ ಮಾನವನಿಗೆ ಆಶ್ರಯ ತಾಣವಾಗಿದ್ದಿತೆಂಬುದಕ್ಕೆ ಈ ಪ್ರದೇಶದಲ್ಲಿ ಇದುವರೆಗೂ ದೊರೆತಿರುವ ಶಿಲಾಯುಗ, ನವಶಿಲಾಯುಗ, ಬೃಹತ್ ಶಿಲಾಯುಗ ಸಂಸ್ಕೃತಿಯ ಮೂಡ್ಲಗೆರೆ, ಹರಪನಹಳ್ಳಿ, ಹಸನಬಾಳು, ತೆಲಗಿ, ನೀಲಗುಂದ ಮುಂತಾದ ಪುರಾತತ್ವ ನೆಲೆಗಳು ಸಾಕ್ಷಿಯಾಗಿವೆ[೧೯].

ಬೃಹತ್ ಶಿಲಾಯುಗದ ನಂತರದ ಕಾಲವೇ ಇತಿಹಾಸ ಆರಂಭ ಕಾಲ. ಹರಪನಹಳ್ಳಿಯ ಬಾಗಳಿಯಲ್ಲಿ ಶಾತವಾಹನರ ಕಾಲದ ದೇವಾಲಯ ಇಟ್ಟಿಗೆ ಕಟ್ಟಡ ದೊರಕಿದೆ[೨೦].

ಇಂತಹ ಪ್ರಾಗೈತಿಹಾಸಿಕ ಹಿನ್ನೆಲೆಯುಳ್ಳ ಈ ಪ್ರದೇಶ ಐತಿಹಾಸಿಕವಾಗಿಯೂ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಮೌರ್ಯರಿಂದ ಹಿಡಿದು ಆಧುನಿಕ ಕಾಲದವರೆಗೂ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಈ ಎಲ್ಲಾ ರಾಜಮನೆತನಗಳು ಇಲ್ಲಿಯ ಇತಿಹಾಸವನ್ನು ಪುನರ್‌ವಿಮರ್ಶಿಸಲು ಹಾಗೂ ಸಂಶೋಧನೆ ಕೈಗೊಳ್ಳಲು ಸಹಕಾರಿಯಾಗುವಂತಹ ಅನೇಕ ಕುರುಹುಗಳನ್ನು ಹಾಗೂ ಅವಶೇಷಗಳನ್ನು ಬಿಟ್ಟು ಹೋಗಿವೆ. ಹಾಗಾಗಿ ಹರಪನಹಳ್ಳಿ ಪಾಳೆಯಗಾರರ ಕಾಲದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸ ಕುರಿತಂತೆ ಅಧ್ಯಯನ ಮಾಡಲು ಈ ಎಲ್ಲಾ ರಾಜಮನೆತನಗಳ ಒಂದು ಕಿರು ಪರಿಚಯ ಅತ್ಯಗತ್ಯವಾಗಿದೆ. ಇದು ಪ್ರಸ್ತುತ ಸಂಶೋಧನೆಗೆ ಅವಶ್ಯಕವೂ ಹೌದು. ಈ ದಿಶೆಯಲ್ಲಿ ಸಂಶೋಧನೆಗೆ ಪೂರಕವಾಗುವಂತಹ ಮಾಹಿತಿಯನ್ನು ರಾಜಮನೆತನಗಳಿಗನುಕ್ರಮವಾಗಿ ಸಂಕ್ಷಿಪ್ತವಾಗಿ ಕೆಳಕಂಡಂತೆ ಪರಿಚಯಿಸಲಾಗಿದೆ.

ಭಾರತದ ಪ್ರಸಿದ್ಧ ರಾಜಮನೆತನಗಳಲ್ಲಿ ಅತ್ಯಂತ ಪ್ರಮುಖ ಹಾಗೂ ಪ್ರಾಚೀನವಾದುದೆಂದರೆ ಮೌರ್ಯ ಸಾಮ್ರಾಜ್ಯ. ಅಲ್ಲದೆ ಉತ್ತರ ಭಾರತದಲ್ಲಿ ಪ್ರಪ್ರಥಮವಾಗಿ ಐತಿಹಾಸಿಕ ಸಾಮ್ರಾಜ್ಯಕ್ಕೆ ಅಸ್ತಿಭಾರ ಹಾಕಿದ ಹೆಗ್ಗಳಿಕೆಗೆ ಪಾತ್ರರಾಗಿರುವವರೆಂದರೆ ಮೌರ್ಯರು. ಹಾಗೆಯೇ ಕರ್ನಾಟಕವು ಸಹ ತನ್ನ ಚಾರಿತ್ರಿಕ ಘಟ್ಟವನ್ನು ಗುರುತಿಸಿಕೊಳ್ಳುವುದು ಮೌರ್ಯರ ಕಾಲದಿಂದ. ಹಾಗಾಗಿ ಅಶೋಕನ ಶಾಸನಗಳು ದೊರೆತಿರುವ ನೆಲೆಗಳಲ್ಲವೂ ಮೌರ್ಯಕಾಲೀನ ಸಂಸ್ಕೃತಿ ನೆಲೆಗೊಂಡಿದ್ದ ನಿವೇಶನಗಳೆ ಆಗಿವೆ ಎನ್ನುವುದು ಗಮನಾರ್ಹ.

ಕರ್ನಾಟಕದಲ್ಲಿ ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗರಾಮೇಶ್ವರ ಕೊಪ್ಪಳ, ನಿಟ್ಟೂರು, ಉಡಳಗಾಂವ, ಸನ್ನತಿಯಲ್ಲಿ ಆಶೋಕನ ಕಾಲದ ಶಾಸನಗಳು ದೊರಕಿದ್ದು ಮೌರ್ಯರ ಆಡಳಿತವನ್ನು ಖಚಿತಪಡಿಸುತ್ತವೆ. ಕ್ರಿ.ಶ.೧೮೯೨ರಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಸಿದ್ದಾಪುರ, ಬ್ರಹ್ಮಗಿರಿ ಹಾಗೂ ಜಟಿಂಗರಾಮೇಶ್ವರ ನೆಲೆಗಳಲ್ಲಿ ಬಿ.ಎಲ್.ರೈಸ್‌ರವರು ಕೈಗೊಂಡ ಉತ್ಖನನಗಳಿಂದ ಪತ್ತೆಯಾದ ಅಶೋಕನ ಕಿರಿಬಂಡೆಗಲ್ಲಿನ ಶಾಸನಗಳನ್ನು ಕ್ರಿ.ಶ.೧೯೦೩ರಲ್ಲಿ 'ಎಪಿಗ್ರಾಫಿಯಾ ಕರ್ನಾಟಕ' ಸಂಪುಟ-೧ರಲ್ಲಿ (ಚಿತ್ರದುರ್ಗ) ಪ್ರಕಟಿಸಿದ್ದರಿಂದ ದಕ್ಷಿಣ ಭಾರತದಲ್ಲಿ ಮೌರ್ಯ ಸಾಮ್ರಾಜ್ಯದ ಗಡಿಯನ್ನು ಗುರುತಿಸಲಾಯಿತು[೩೫]. ಬಿಂದುಸಾರನು ಈ ಪ್ರದೇಶದಲ್ಲಿ ದಖನ್ನಿನ ಸ್ವಲ್ಪ ಭಾಗವನ್ನು ಸೇರಿಸಿಕೊಂಡು ಆಳ್ವಿಕೆ ನಡೆಸಿದನು[೩೬]. ಇತಿಹಾಸಕ್ಕೆ ಹೊಸ ತಿರುವು ಕೊಟ್ಟವನೆಂದರೆ ಆಶೋಕ ಮಹಾಶಯ. ಆದರೆ ಮೌರ್ಯ ಸಾಮ್ರಾಜ್ಯ ದಕ್ಷಿಣ ಭಾಗದಾದ್ಯಂತ ವ್ಯಾಪಿಸಲಿಲ್ಲ ಎಂಬುದು ಇತಿಹಾಸಕಾರರ ಅಭಿಪ್ರಾಯ. ಒಟ್ಟಿನಲ್ಲಿ 'ಕುಂತಲವು' ಅಶೋಕನ ಆಳ್ವಿಕೆಗೂ ಮೊದಲೇ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದಿತೆಂಬುದು ನಿರ್ವಿವಾದ ವಿಷಯವಾಗಿದೆ[೩೭]. ಅಲ್ಲದೆ ಅಶೋಕನ ಎರಡು ಮತ್ತು ಮೂರನೆಯ ಶಾಸನಗಳು ದಕ್ಷಿಣದ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತವೆ.

ಮೌರ್ಯ ಸಾಮ್ರಾಜ್ಯದ ನಂತರ ಅವರ ಸಾಮಂತರಾಗಿದ್ದ ಆಂಧ್ರರು, ಆಂಧ್ರಭೃತ್ಯರು, ಶಾತಕರ್ಣಿಗಳು ಎಂಬ ಹೆಸರುಗಳಿಂದ ಪ್ರಸಿದ್ಧರಾಗಿದ್ದ ಶಾತವಾಹನರು ಅಧಿಕಾರಕ್ಕೆ ಬಂದರು. ಬಳ್ಳಾರಿ ಜಿಲ್ಲೆಯ ಮ್ಯಾಕದೋಣಿ ಮತ್ತು ಹಿರೇಹಡಗಲಿಯ ಪ್ರಾಕೃತ ಶಾಸನಗಳು ಈ ಪ್ರದೇಶವನ್ನು 'ಶಾತವಾಹನಿಹಾರ' ಮತ್ತು 'ಶಾತವಾಹನೀರಠ್ಠ' (ಶಾತವಾಹನೀ ರಾಷ್ಟ್ರ) ಎಂದು ಪ್ರಯೋಗಿಸಿದ್ದು ಈ ಪ್ರದೇಶದಲ್ಲಿ ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರೆಂದು ತಿಳಿಸುತ್ತವೆ[೪೯].

ಕ್ರಿ.ಶ. ಮೂರನೆಯ ಶತಮಾನದಲ್ಲಿ ಅಂತ್ಯಗೊಂಡ ಶಾತವಾಹನರ ನಂತರ ಆಧಿಪತ್ಯ ಸ್ಥಾಪಿಸಿದವರೆಂದರೆ ಬನವಾಸಿ ಕದಂಬರು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇವರ ಒಂದು ಶಾಖೆಯು ಇಲ್ಲಿಯ ಉಚ್ಚಂಗಿದುರ್ಗವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಉಚ್ಚಂಗಿದುರ್ಗ ಸಮೀಪ ಅಣಜಿ ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.೪೫೦ರ ಕಾಲದ ಸಂಸ್ಕೃತಭಾಷೆಯ ಶಾಸನ ನೊಣಕ್ಕಸ ಪಲ್ಲವನಿಗೂ ಕದಂಬಕೃಷ್ಣವರ್ಮನಿಗೂ ನಡೆದ ತುಮುಲ ಯುದ್ಧದ ಬಗ್ಗೆ ವರ್ಣಿಸುತ್ತದೆ[೫೦]. ಈ ಯುದ್ಧದಲ್ಲಿ ಕೃಷ್ಣವರ್ಮ ಸೋತಿದ್ದರಿಂದ ಈತನಿಗೆ ಸಹಾಯ ಮಾಡಿದ ಶಿವಸ್ಕಂಧವರ್ಮ ಭಗ್ನಮನಸ್ಕನಾಗಿ ಮರಣ ಹೊಂದಿದನೆಂದು, ಕೃಷ್ಣವರ್ಮ ಶಾಂತಿವರ್ಮನ ಸೋದರನಾಗಿದ್ದು ಪೂರ್ವಕದಂಬರ ಶಾಖೆಗೆ ಸೇರಿದವನೆಂದು ತಿಳಿಯಲಾಗಿದೆ[೫೧]. ಅಲ್ಲದೆ ಕ್ರಿ.ಶ.೪೫೦ರ ಶಾಸನ ಸಾಮಾಜಿಕ, ಧಾರ್ಮಿಕ ನಡವಳಿಕೆಗಳು ಹೇಗಿದ್ದವೆಂಬುದಕ್ಕೆ ಕೈಗನ್ನಡಿಯಾಗಿದೆ. ಅಣಜಿಯಲ್ಲಿನ ಕೋಟೆ ಮತ್ತು ಕೆಲವು ಅವಶೇಷಗಳು ಇವರ ಕಾಲದವುಗಳನ್ನಬಹುದು[೫೨]. ಉಚ್ಚಂಗಿದುರ್ಗ ಕದಂಬರ ಎರಡನೆಯ ರಾಜಧಾನಿಯಾಗಿತ್ತು[೫೩].

ಕದಂಬರ ನಂತರ ಕರ್ನಾಟಕದಲ್ಲಿ ಪ್ರವರ್ಧಮಾನಕ್ಕೆ ಬಂದ ಸಾಮ್ರಾಜ್ಯ ನಿರ್ಮಾಪಕ ರಾಜಮನೆತನಗಳಾದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಹೊಯ್ಸಳರು ಮತ್ತು ಇವರುಗಳ ಮಹಾಸಾಮಾಂತಾಧಿಕಾರಿಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದರೆಂಬುದು ಶಾಸನಗಳು ಮತ್ತು ಇತರ ಸ್ಮಾರಕಗಳ ಮೂಲಕ ದೃಢಪಟ್ಟಿದೆ. ಇವರಲ್ಲದೆ ಪಲ್ಲವರು, ಪಾಂಡ್ಯರು, ನೊಳಂಬರು ಈ ಪ್ರದೇಶದ ಆನೆಕೊಂಡ, ಬೇತೂರು, ಉಚ್ಚಂಗಿದುರ್ಗಗಳಿಂದ ಆಳ್ವಿಕೆ ನಡೆಸಿದರು.

ಹೊಯ್ಸಳರ ನಂತರ ವಿಜಯನಗರ ಸಾಮ್ರಾಟರು ಆನೆಗೊಂದಿ ನಂತರ ಹಂಪೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ಪ್ರಧಾನವಾಗಿ ಈ ಭಾಗದಲ್ಲಿ ಆಳಿದರು. ನಾಡಿನ ಇತಿಹಾಸದ ಸುವರ್ಣ ಕಾಲವಿದು, ದೇಶ-ವಿದೇಶಗಳಲ್ಲಿ ನಾಡಿನ ಕೀರ್ತಿ ಪಸರಿಸಿತು. ನಾಡಿನ ಇತಿಹಾಸ, ಸಂಸ್ಕೃತಿ, ಸಾಹಿತ್ಯ-ಶಿಕ್ಷಣ, ಕಲೆ, ವಾಸ್ತುಶಿಲ್ಪ, ಮುಂತಾದ ಕ್ಷೇತ್ರಗಳಿಗೆ ಇವರ ಕೊಡುಗೆ ಅಪಾರ. ವಿಜಯನಗರ ಅರಸರು ತಮ್ಮ ರಾಜಕೀಯ ವ್ಯವಸ್ಥೆಯಲ್ಲಿ ಅಮರನಾಯಕ ಪದ್ಧತಿ ಎಂಬ ವಿಶಿಷ್ಟ ವ್ಯವಸ್ಥೆಯನ್ನು ಪರಿಚಯಿಸಿದ ಕೀರ್ತಿಗೆ ಪತ್ರರಾಗಿದ್ದಾರೆ. ಈ

ಅಮರನಾಯಕ ಪದ್ಧತಿಯೇ ಮುಂದೆ ಪಾಳೆಯಗಾರ ವ್ಯವಸ್ಥೆಯಾಗಿ ಮಾರ್ಪಟ್ಟು ವಿಜಯನಗರೋತ್ತರ ಕಾಲದ ನಾಡಿನ ರಾಜಕೀಯ, ಸಾಂಸ್ಕೃತಿಕ, ಐತಿಹಾಸಿಕ ಕ್ಷೇತ್ರದಲ್ಲಿ ಪ್ರಸಿದ್ಧಿಯಾಗಿದೆ. ಇವರೇ ಪಾಳೆಯಗಾರರು, ಒಡೆಯರು, ನಾಯಕರು, ಪ್ರಭುಗಳು ಮುಂತಾದ ವಿಶೇಷಣಗಳಿಂದ ಪರಿಚಿತರಾಗಿದ್ದಾರೆ.

**೨.೩ ಪಾಳೆಯಗಾರರು : ಕರ್ನಾಟಕದಲ್ಲಿ ಪಾಳೆಯಪಟ್ಟುಗಳು**

ಭಾರತದ ಹಿಂದುಳಿದ ಜಾತಿಗಳಲ್ಲಿ 'ತಳವಾರ' ಎಂಬುದು ಒಂದು. ಇದು ಪ್ರಾಚೀನ ಕಾಲದಿಂದಲೂ ದೇಶದಲ್ಲಿ ಸೇವಾನಿರತವಾಗಿರುವ ಜನಾಂಗದಲ್ಲಿ ಹೆಸರಾಗಿದೆ. ಇವರು ಕಾವಲುಗಾರರಾಗಿ ಎರಡು ಗ್ರಾಮಗಳನ್ನು ವಿಜಯನಗರ ಕಾಲಕ್ಕೂ ಪರಿಪಾಲಿಸಿಕೊಂಡು ಬಂದಿದ್ದರು. ಪೂರ್ವಜರ ವೃತ್ತಿಯಂತೆ ಇವರು ವಿಜಯನಗರದ ನಂತರವೂ ಪಾಳೆಯಗಾರಿಕೆ ಅನುಭವಿಸಿದ್ದು ನಿಜ[೫೫]. ವಿಜಯನಗರ ಅರಸರ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಮಂತರು ದಂಡಿನೊಡನೆ ಪಾಳೆಯವನ್ನು ಹಾಕಿ ಯುದ್ಧಕ್ಕೆ ಸಿದ್ಧವಾಗಿರತಕ್ಕವರನ್ನು 'ಪಾಳೆಯಗಾರ'ರೆಂದು ಹೇಳಲಾಗಿದೆ. ಹಾಗೂ 'ಪಾಳೆಯಗಾರ'ಎಂಬ ಪದದಲ್ಲಿರುವ 'ಪಾಳೆಯ' ಪದವು ದಂಡು, ಸೈನ್ಯ, ಸೇನಾವಿಭಾಗ, ಶಿಬಿರ, ಠಾಣೆ ಮುಂತಾದ ಅರ್ಥಗಳನ್ನು ಸೂಚಿಸಲಾಗುತ್ತಿದ್ದು ಇವುಗಳ ಮುಖ್ಯಸ್ಥರೇ ಪಾಳೆಯಗಾರರೆಂತಲೂ ತಿಳಿದು ಬರುತ್ತದೆ[೫೬]. ಪಾಳೆಯಗಾರರು ದಕ್ಷಿಣ ಭಾರತದಲ್ಲಿ ಹದಿನಾರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಆದರೆ ವಿಜಯನಗರದ ಸ್ಥಾಪನೆಗಿಂತ ಮೊದಲೇ ಪ್ರಬಲರಾದ ಪಾಳೆಯಗಾರರು ಪಾಳೆಯಪಟ್ಟುಗಳನ್ನು ಕಟ್ಟಿದ್ದರೆಂಬುದು ಕರ್ನಾಟಕದ ಪೂರ್ವೇತಿಹಾಸವನ್ನು ಅಧ್ಯಯನ ಮಾಡಿದಾಗ ತಿಳಿದು ಬರುತ್ತದೆ. ಬೇಡಯೋಧರಿಂದ ಸ್ಥಾಪಿತವಾದ ಪ್ರಮುಖ ಪಾಳೆಯಪಟ್ಟುಗಳೆಂದರೆ ಕುರುಗೋಡು, ಬಳ್ಳಾರಿ, ಜರಿಮಲೆ, ಗುಡಿಕೋಟೆ, ಹರಪನಹಳ್ಳಿ, ಕೆಂಚನಗುಡ್ಡ, ಆನೆಗೊಂದಿ, ಚಿತ್ರದುರ್ಗ, ರಾಯದುರ್ಗ, ಬೇಲೂರು, ಸಂತೆಬೆನ್ನೂರು, ತರೀಕೆರೆ, ಹರತಿ, ನಾಯಕನಹಟ್ಟಿ, ಮತ್ತಿನಾಡು, ಬೂದಿಹಾಳು ಮತ್ತು ನಿಡಗಲ್ಲು, ಹೊಳವನಹಳ್ಳಿ, ಮಿಡಿಗೇಶಿ, ಪಾವಗಡ, ಹೆಬ್ಬೂರು, ಗುಬ್ಬಿ-ಹೊಸಹಳ್ಳಿ, ಹಾಗಲವಾಡಿ ಹಾಗೂ ಮಧುಗಿರಿ ಪ್ರಮುಖವಾದವುಗಳಾಗಿವೆ[೫೭].

ಬಳ್ಳಾರಿ ಹಾಗೂ ತುಮಕೂರು ಜಿಲ್ಲೆಗಳ ಪಾಳೆಯಗಾರರು ವಿಜಯನಗರ ಅರಸರ ಕಾಲದಲ್ಲಿಯೇ ಇದ್ದು ಅವರಿಗೆ ವಿಧೇಯರಾಗಿದ್ದರು. ಚಿತ್ರದುರ್ಗದ ಪಾಳೆಯಗಾರರು ವಿಜಯನಗರ ಅರಸರ ಕಾಲದಿಂದ ಹೈದರಾಲಿಯ ಕಾಲದವರೆಗೂ ಆಳಿದರು. ಈ ಪಾಳೆಯಗಾರರೆಲ್ಲ ಸುಮಾರು ೩೦೦ ವರ್ಷಗಳವರೆಗೆ ಅಂದರೆ ಕ್ರಿ.ಶ.೧೪೮೫ರಿಂದ ೧೭೯೯ರವರೆಗೆ ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಪತನದಿಂದ ಉತ್ತರ ಕರ್ನಾಟಕದಲ್ಲಿ ಬಿಜಾಪುರದ ಆಲಿ ಆದಿಲ್‌ಷಾ ದಖನ್‌ನಲ್ಲಿ ಮಹಮದೀಯರು, ಪಶ್ಚಿಮ ಹಾಗೂ ಉತ್ತರಭಾಗಗಳ ಹಿಂದೂ ಪ್ರದೇಶಗಳಲ್ಲಿ ಊಳಿಗದವರು, ಶ್ರೀಮಂತರು ಮತ್ತು ವೈಸ್‌ರಾಯಗಳು ಕಾರ್ಯೋನ್ಮುಖರಾದರು. ಈ ಸಂದರ್ಭದಲ್ಲಿ ಬೇಡನಾಯಕರು

ಶ್ರೀಮಂತರ ಸೇವೆ ಯಶಸ್ವಿ ಮಧ್ಯವರ್ತಿ ಸೈನಿಕ ಮುಖ್ಯಸ್ಥರಾಗಿ ಮಹಮದೀಯರ ವಿರುದ್ಧ ಹೋರಾಡಿದರು. ಇಂತಹವುಗಳಲ್ಲಿ ಚಿತ್ರದುರ್ಗ. ರಾಯದುರ್ಗ, ರತ್ನಗಿರಿ, ಹರಪನಹಳ್ಳಿ, ತರೀಕೆರೆಗಳು ಮುಖ್ಯವಾಗಿವೆ. ಕ್ರಿ.ಶ.೧೫೭೬-೭೭ರಲ್ಲಿ ಆಲಿಆದಿಲ್‌ಷಾ ಪೆನುಗೊಂಡೆಯ ಮಾರ್ಗವಾಗಿ ಬಂದು ವಿಜಯನಗರ ಅರಸರನ್ನು ಭೇಟಿ ಮಾಡಿದಾಗ ಗೌರವ ಮರ್ಯಾದೆಗಳು ಸಿಗಲಿಲ್ಲವಾದ್ದರಿಂದ ವಿಜಯನಗರ ಅರಸರ ಅನುಯಾಯಿಗಳಾಗಿದ್ದ ಬೇಡರನ್ನು ಹರಪನಹಳ್ಳಿಗೆ ಮುಖ್ಯಸ್ಥರನ್ನಾಗಿ ಮಾಡಲು ಸುಲ್ತಾನ ಪ್ರಯತ್ನಿಸಿದನು[೫೮]. ಬೇಡ ಬುಡಕಟ್ಟು ಪ್ರಾಚೀನ ಮೂಲ ನಿವಾಸಿ ಪಂಗಡವಾಗಿದ್ದು ಗಿರಿಕಂದರಗಳಲ್ಲಿ ನೆಲೆಸುವವರು, ಹಕ್ಕುಗಳಿಗಾಗಿ ಹೋರಾಡುವವರು ಹಾಗೂ ಸೈನಿಕ ಶಕ್ತಿಯಲ್ಲಿ ಪ್ರವೀಣರಾಗಿದ್ದರು. ಮರಾಠರ ಮತ್ತು ಮೊಘಲರ ಉಪಟಳವನ್ನು ಹತ್ತಿಕ್ಕಿದ ಬೇಡರ ಶೌರ್ಯ ಹಾಗೂ ಪರಾಕ್ರಮವನ್ನು ಮೆಚ್ಚುವಂತಹದ್ದು. ಹೀಗೆ ಕ್ಷತ್ರಿಯರ ಶೌರ್ಯ, ಪರಾಕ್ರಮದ ಉಜ್ವಲ ಭವಿಷ್ಯವಿದ್ದ ಬೇಡರು ತಮ್ಮ ಅನುಪಮ ಕಾಣಿಕೆಯನ್ನು ಹರಪನಹಳ್ಳಿ ಕ್ಷೇತ್ರದಲ್ಲಿ ಉಳಿಸಿ ಹೋಗಿದ್ದಾರೆ.

### ೨.೪ ಹರಪನಹಳ್ಳಿ ಚಾರಿತ್ರಿಕ ನೋಟ

ಹರಪನಹಳ್ಳಿ ಮೊದಲು ಸ್ವತಂತ್ರ ರಾಜ್ಯವಾಗಿರದೆ ಮೂವತ್ತರ ಮುತ್ತಿಗೆಗೆ ಸೇರಿದ ಒಂದು ಅಗ್ರಹಾರವಾಗಿತ್ತು ಎಂಬುದು ಕ್ರಿ.ಶ.೧೧೦೪ರ ಹಿರೇಕುರುವತ್ತಿಯ ಶಾಸನದಿಂದ ತಿಳಿದು ಬರುತ್ತದೆ[೫೯]. ಇದರ ಮೂಲ ಹೆಸರು ಬ್ರಹ್ಮಪುರಿ. ಬೆಣ್ಣೆಹಳ್ಳಿ ಪಂಪಾ ದೇವಾಲಯದ ಕ್ರಿ.ಶ.೧೧೪೮ರ ಶಾಸನದಲ್ಲಿ ಬ್ರಹ್ಮಪುರಿಯ ಹನ್ನೆರಡು ಜನ ಬ್ರಾಹ್ಮಣರ ಉಲ್ಲೇಖವಿದೆ. ಬೆಣ್ಣೆಹಳ್ಳಿ, ಮೂವತ್ತರ ಮುತ್ತಿಗೆ, ಹರಪನಹಳ್ಳಿಗಳು ಹತ್ತು ಕಿ.ಮೀ.ಅಂತರದಲ್ಲಿವೆ. ಹದಿಮೂರನೆಯ ಶತಮಾನದಲ್ಲಿ ಬ್ರಹ್ಮಪುರಿಯ ಬ್ರಾಹ್ಮಣ ವಿಷ್ಣುನಾಯಕನ ಪುತ್ರ ಹರಿಯಣ್ಣ/ಹರಿಯಪ್ಪ ಪೆರ್ಗಡೆ ಹೆಗ್ಗಡೆತನ ಮಾಡುತ್ತಿದ್ದ. ಇವನನ್ನು ಹರಿಯಣ್ಣ, ಹರಿಹರ, ಹರಿಯಪ್ಪ ಎಂದೆಲ್ಲಾ ಕರೆಯುತ್ತಿದ್ದರು[೬೦]. ಹರಿಯಪ್ನ ಹೆಸರಿನಲ್ಲಿ ಸ್ಥಾಪಿತವಾದ 'ಬ್ರಹ್ಮಪುರಿ' ಕ್ರಮೇಣ ಜನಸಾಮಾನ್ಯರಿಂದ ಹರಿಯಪ್ಪನಹಳ್ಳಿ, ಹರಪ್ನಹಳ್ಳಿ, ಹಾರಪ್ನಹಳ್ಳಿ, ಹರುಪ್ನಹಳ್ಳಿ, ಹರಪನಹಳ್ಳಿ ಸೀಮೆ ಎಂದೆಲ್ಲಾ ಕರೆಸಿಕೊಂಡು ಹರಪ್ಪನಹಳ್ಳಿ ಆಗಿದೆ[೬೧]. ಕೊಟ್ಟೂರಿನ ಉಡುಕೇಶ್ವರ ದೇವಾಲಯದ ಶಾಸನದಲ್ಲಿ ಹರಿಯಪ್ಪನ ಪ್ರಸ್ತಾಪವಿದೆ. ಹಾಗೂ ಮುತ್ತಿಗೆ ಗ್ರಾಮದ ಕಟ್ಟೆಮನೆಗೆ ಸಂಬಂಧಿಸಿದವರು ಈ ಹರಿಯಪ್ಪ ಪೆರ್ಗಡೆ ವಂಶಕ್ಕೆ ಸೇರಿದವರೆಂದು ಮುತ್ತಿಗೆ ಗ್ರಾಮದಲ್ಲಿ ದೊರೆತ ದಾಖಲೆ ತಿಳಿಸುತ್ತದೆ[೬೨]. ಪಾಳೆಯಗಾರರ ಕಾಲದಲ್ಲಿ ಹರಿಪುರ, ಹರಿಯಪ್ಪನಹಳ್ಳಿ, ಹರಪ್ಪನಹಳ್ಳಿ ಎಂದು ಹೆಸರಾಯಿತು. ಲಿಂಗಣ್ಣ ಕವಿ ರಚಿತ ಕೆಳದಿನೃಪವಿಜಯದಲ್ಲಿ ಹರಪ್ಪನಹಳ್ಳಿ ಪಾಳೆಯಗಾರರ ಮೊದಲ ಸೋಮಶೇಖರನಾಯಕನಿಗೆ 'ಹರಪುರಾಧೀಶ್ವರ' ಎಂದು ಉಲ್ಲೇಖವಿದೆ[೬೩]. ಕೈಫಿಯತ್‌ನಲ್ಲಿ ಹಾರಪ್ನಹಳ್ಳಿ, ಹರಪ್ನಹಳ್ಳಿ, ಹರುಪನಹಳ್ಳಿ ಸೀಮೆ ಎಂಬ ಉಲ್ಲೇಖಗಳಿವೆ. ಅಗ್ರಹಾರದ ಲಕ್ಷಣಗಳು ಇಂದಿಗೂ ಕಂಡುಬರುತ್ತವೆ.

ಹಿಂದೆ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದ ಹರಪ್ಪನಹಳ್ಳಿ ನಂತರ ನೂತನವಾಗಿ ರಚನೆಯಾದ ದಾವಣಗೆರೆ ಜಿಲ್ಲೆಗೆ ಸೇರಿತು. ಈ ತಾಲ್ಲೂಕನ್ನು ಉತ್ತರದಲ್ಲಿ ಹಡಗಲಿ, ಪೂರ್ವದಲ್ಲಿ ಕೂಡ್ಲಿಗಿ, ಜಗಳೂರು, ದಕ್ಷಿಣದಲ್ಲಿ ಹರಿಹರ, ದಾವಣಗೆರೆ, ಪಶ್ಚಿಮದಲ್ಲಿ ರಾಣೆಬೆನ್ನೂರು ತಾಲ್ಲೂಕುಗಳು ಸುತ್ತುವರಿದಿವೆ. ಚಿಗಟೇರಿ, ಅರಸಿಕೇರಿ, ಹರಪ್ಪನಹಳ್ಳಿ, ತೆಲಗಿ, ಉಚ್ಚಂಗಿದುರ್ಗಗಳು ಪ್ರಮುಖ ಹೋಬಳಿ ಕೇಂದ್ರಗಳಾಗಿವೆ[೬೪]. ಪಟ್ಟಣ ೧೪°೪೭ ಉತ್ತರವಾಗಿ ಮತ್ತು ೭೬° ಪೂರ್ವ ಪಶ್ಚಿಮವಾಗಿದ್ದರೆ ತಾಲ್ಲೂಕು ೧೪° ೩೦° ಮತ್ತು ೧೫° ಮತ್ತು ೭೫೪೨, ೭೬–೧೩ ಇದೆ. ಕ್ರಿ.ಶ.೧೮೬೮ ಮತ್ತು ೧೮೮೨ರಲ್ಲಿ ಹರಪ್ಪನಹಳ್ಳಿ ಡೆಪ್ಯೂಟಿ ಕಲೆಕ್ಟರ್ ಕೇಂದ್ರಸ್ಥಳವಾಗಿತ್ತು. ಪಾಳೆಯಗಾರರು ಆಳ್ವಿಕೆ ನಡೆಸಿದ ಪ್ರಸಿದ್ಧ ರಾಜಧಾನಿ ಕೇಂದ್ರವೂ ಆಗಿತ್ತು[೬೫]. ಉತ್ತರಕ್ಕೆ ಇಳಿಜಾರಾಗಿರುವ ಈ ತಾಲ್ಲೂಕಿನ ಕಲ್ಲಹಳ್ಳಿಗುಡ್ಡ ಶ್ರೇಣಿಯಿಂದ ಕಲ್ಲಹಳ್ಳಿ ಗುಡ್ಡ ಶಿಖರ ೮೫೩ಮೀ ಎತ್ತರವಿದ್ದು ಮುಂದೆ ಕವಲೊಡೆದು ತೆಲಗಿ, ಹರಪ್ಪನಹಳ್ಳಿ ಗುಡ್ಡ ಸಮೂಹವಾಗಿ ತಾಲ್ಲೂಕಿನ ದಕ್ಷಿಣದಲ್ಲಿ ಉಚ್ಚಂಗಿದುರ್ಗದವರೆಗೂ ಸಾಗಿದೆ. ೭೭೫ ಮೀ. ಎತ್ತರದ ನರಸಿಂಹದೇವರ ಗುಡ್ಡ, ಉಚ್ಚಂಗಿದುರ್ಗದ ಗುಡ್ಡ, ಹರಪ್ಪನಹಳ್ಳಿ ಗೋಸಾಯಿಗುಡ್ಡ, ಚಿಗಟೇರಿಬಾಜಿಕಲ್ಲುಗುಡ್ಡ, ಮಲ್ಲಪ್ಪನಗುಡ್ಡ ಮುಂತಾದ ಗುಡ್ಡಗಳಿವೆ[೬೬]. ತಾಲ್ಲೂಕಿನ ಪಶ್ಚಿಮದ ಎಲ್ಲೆಯಲ್ಲಿ ತುಂಗಭದ್ರಾ ನದಿ ಗಡಿಯಾಗಿ ಸ್ವಲ್ಪ ದೂರ ಹರಿದು ತಾಲ್ಲೂಕಿನ ಕಡತಿ ಗ್ರಾಮದ ಬಳಿ ಪ್ರವೇಶಿಸಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕನ್ನು ಬೇರ್ಪಡಿಸಿದೆ. ಇದರ ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ ಕೂಡ್ಲಿಗಿ, ಹಡಗಲಿ ತಾಲ್ಲೂಕನ್ನು ಪ್ರವೇಶಿಸಿ ಉತ್ತರಾಭಿಮುಖವಾಗಿ ಹರಿಯುತ್ತದೆ. ಈ ಪ್ರದೇಶದ ವಾರ್ಷಿಕ ಸರಾಸರಿ ಮಳೆ ೭೩೦.೨೦. ಮಿ.ಮೀ[೬೭].

ಪ್ರಸ್ತುತ ಹರಪ್ಪನಹಳ್ಳಿ ತಾಲ್ಲೂಕು ೨೨೩ ಗ್ರಾಮಗಳಿಂದ ಕೂಡಿದ್ದು ಇಲ್ಲಿ ಸುಮಾರು ೭೦ಕ್ಕೂ ಹೆಚ್ಚು ಕೆರೆಗಳಿವೆ. ಜೊತೆಗೆ ತಾಲ್ಲೂಕಿನಲ್ಲಿ ಹರಿಯುವ ತುಂಗಭದ್ರಾ ಮತ್ತು ಚಿಕ್ಕಹಗರಿ ನದಿಗಳ ಮೂಲಕ ವ್ಯವಸಾಯ ನಡೆಯುತ್ತಿದ್ದು ಜೋಳ, ನವಣೆ, ಭತ್ತ, ರಾಗಿ, ಎಣ್ಣೆ ಬೀಜಗಳು ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ವ್ಯವಸಾಯಕ್ಕೆ ಅನುಕೂಲವಾದ ಮರಳು, ಕೆಂಪು–ಕಪ್ಪು ಜೇಡಿಮಣ್ಣಿನ ಫಲವತ್ತಾದ ಭೂಮಿ ಇದೆ. ಜೊತೆಗೆ ಮ್ಯಾಂಗನೀಸ್ ಅದಿರು (ಬಾಜಿಕಲ್ಲುಗುಡ್ಡದ ಬಳಿ) ಹರಪ್ಪನಹಳ್ಳಿ ಪಟ್ಟಣದ ಬಳಿ ತಾಮ್ರ, ಚಿಗಟೇರಿ, ಕೊಂಗನಹೊಸೂರು, ಕಲ್ಲಳ್ಳಿಯ ಮೆಕ್ಕಲು ಮಣ್ಣಿನಲ್ಲಿ ಚಿನ್ನದ ಅದಿರು, ಕಣಿವೆಹಳ್ಳಿ ಬಳಿ ಕಬ್ಬಿಣದ ಅದಿರು, ಹಲವಾಗಿಲಿಗೆ ಹತ್ತಿರದಲ್ಲಿ ಬಿಳಿಜೇಡಿಮಣ್ಣು, ಹರಪ್ಪನಹಳ್ಳಿ ಪಟ್ಟಣದ ಬಳಿ ಸುಣ್ಣದಕಲ್ಲು ಮುಂತಾದ ಖನಿಜಸಂಪತ್ತನ್ನು ಹೊಂದಿದೆ[೬೮].

ಹರಪನಹಳ್ಳಿ ತಾಲ್ಲೂಕಿನಲ್ಲಿ ಬೃಹತ್ ಶಿಲಾಯುಗ (ತೆಲಗಿ, ನೀಲಗುಂದ, ಮಾಡಲಗೇರಿ) ಸೂಕ್ಷ್ಮಶಿಲಾಯುಗ (ಮಾಡಲಗೇರಿ) ನವಶಿಲಾಯುಗ (ಮಾಡಲಗೇರಿ) ಹಾಗೂ ಇತಿಹಾಸ ಆರಂಭಯುಗ (ಬಾಗಳಿ)ದ ಸಂಸ್ಕೃತಿಗಳ ನೆಲೆಗಳು ಕಂಡು ಬಂದಿವೆ[೬೯].

ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಕ್ರಿ.ಪೂ.ಮೂರನೆಯ ಶತಮಾನದಲ್ಲಿ ಮೌರ್ಯರ ಪ್ರಮುಖ ರಾಜಕೀಯ ಕೇಂದ್ರವಾಗಿತ್ತು. ಇವರ ಶಾಸನಗಳು ಚಿತ್ರದುರ್ಗ ಜಿಲ್ಲೆಯ ಸಿದ್ದಾಪುರ, ಜಟಿಂಗ ರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ದೊರೆತಿರುವುದರಿಂದ ಮತ್ತು ಆ ಸ್ಥಳಗಳು ಬಳ್ಳಾರಿಗೆ ಸಮೀಪದಲ್ಲಿರುವುದರಿಂದ ಈ ಪ್ರದೇಶ ಪೂರ್ಣವಾಗಿ ಅವರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಬಹುದಾಗಿದೆ[೭೦]. ಹಾಗಾಗಿ ಹಿಂದೆ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಹರಪ್ಪನಹಳ್ಳಿ ತಾಲ್ಲೂಕು ಸಹ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ. ಹಿರೇಹಡಗಲಿಯ ತಾಮ್ರಶಾಸನದಲ್ಲಿ 'ಸಾತವಾಹನಿರಟ್ಟ' 'ಶಾತವಾಹನೀಹಾರ' ಎಂಬ ಉಲ್ಲೇಖಗಳಿದ್ದು ಈ ಪ್ರದೇಶ ಶಾತವಾಹನರ ಆಳ್ವಿಕೆಗೆ ಸೇರಿತ್ತೆಂದು ತಿಳಿಯಲಾಗಿದೆ. ಉಚ್ಛಂಗಿ ಪರ್ವತದ ಪಶ್ಚಿಮದ ಪ್ರಾಚೀನ ಶಾಸನದಿಂದ ಕ್ರಿ.ಶ.ಐದನೆಯ ಶತಮಾನದಲ್ಲಿ ಉಚ್ಛಂಗಿ ಬನವಾಸಿ ಕದಂಬರ ರಾಜಧಾನಿಯಾಗಿತ್ತೆಂದೂ ಅಲ್ಲಿಯವರೆಗೆ ಅವರು ರಾಜ್ಯ ವಿಸ್ತರಿಸಿದ್ದರೆಂದು ಹಾಗೂ ಬನವಾಸಿ ೧೨೦೦೦ ಕ್ಕೆ ಸೇರಿತ್ತೆಂದು ತಿಳಿದು ಬರುತ್ತದೆ[೭೧]. ಕದಂಬರ ಆಳ್ವಿಕೆಯಲ್ಲಿ 'ಕದಂಬಳಿಗೆ ಸಾಸಿರ' ಎಂಬುದಕ್ಕೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಹಗರಿಬೊಮ್ಮನಹಳ್ಳಿ (ಹರಪ್ಪನಹಳ್ಳಿ-ದಾವಣಗೆರೆ) ತಾಲ್ಲೂಕುಗಳು ಸೇರಿದ್ದವು. ಉಚ್ಛಂಗಿ ೩೦ ಕದಂಬಳಿಗೆ ಸೇರಿದ ಉಪವಿಭಾಗವಾಗಿತ್ತು[೭೨].

ಕ್ರಿ.ಶ.ಆರನೆಯ ಶತಮಾನದಲ್ಲಿ ಬಾದಾಮಿ ಚಾಲುಕ್ಯರು ಕದಂಬರನ್ನು ಸೋಲಿಸಿ ಉಚ್ಚಂಗಿ ಮತ್ತು ತೆಲಗಿಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ನಂತರದಲ್ಲಿ ಬಂದ ರಾಷ್ಟ್ರಕೂಟರು ಉಚ್ಛಂಗಿದುರ್ಗ ಮತ್ತು ಚಿರಸ್ತಿನಹಳ್ಳಿಯಲ್ಲಿ ಆಡಳಿತ ಮಾಡಿದ್ದಾರೆ. ಚಿರಸ್ತಿನಹಳ್ಳಿಯ ಶಂಕರಸ್ವಾಮಿಯ ದೇವಾಲಯದ ಶಾಸನ ರಾಷ್ಟ್ರಕೂಟರ ನಾಲ್ಕನೆಯ ಗೋವಿಂದನು ಆಳುತ್ತಿದ್ದಾಗ ಕ್ರಿ.ಶ.೯೨೧-೯೩೨ರಲ್ಲಿ ಪಾಡಿಗ ನೊಳಂಬನೆಂಬ ಯೋಧ ಶತ್ರುಗಳೊಂದಿಗೆ ಹೋರಾಡಿ ವೀರ ಮರಣ ಹೊಂದಿದಕ್ಕಾಗಿ ರಾಷ್ಟ್ರಕೂಟರ ಅಯ್ಯಪ್ಪದೇವನು ಪಾಡಿಗನ ಕುಟುಂಬಕ್ಕೆ ನೆತ್ತರು ಕೊಡುಗೆಯಾಗಿ ನೀರಾವರಿ ಮತ್ತು ಒಣಭೂಮಿಯನ್ನು ದಾನಕೊಟ್ಟ ವಿಚಾರವನ್ನು ಉಲ್ಲೇಖಿಸಿದೆ. ಅಯ್ಯಪ್ಪದೇವನು ಕೋಗಳಿನಾಡಿಗೆ ಸೇರಿದ್ದ ಮಾಸಿಮಾಡಿ ೪೦ನ್ನು ಆಳುತ್ತಿದ್ದ. ಬಾಗಳಿ ಇವರ ಕಾಲದಲ್ಲಿ ದೊಡ್ಡ ಪಟ್ಟಣವಾಗಿದ್ದು ಕಲ್ಲೇಶ್ವರ ದೇವಾಲಯದ ಪಶ್ಚಿಮ ಶಾಸನದಲ್ಲಿ ರಾಷ್ಟ್ರಕೂಟರ ರಟ್ಟಕಂದರ್ಪನ ಸಾಮಂತರೊಟ್ಟನ ಆಳ್ವಿಕೆ ಮತ್ತು ಮಹಾಮುನಿಗಳ ಒಪ್ಪಿಗೆಯ ಮೇರೆಗೆ ಬೂದ್‌ಗೊಳ್‌ನ್ನು ಬಳಿಯರಬಾದಮ್ಮಗೆ ಕೊಟ್ಟರೂ ಆ ಬಾದಮ್ಮನು ಜೈನ ಸನ್ಯಾಸಿಯಾಗಿದ್ದು ಕೆರೆಯ ದುರಸ್ತಿಗಾಗಿ ಬೂದುಗೂಳನ್ನು ಹಿಂದಕ್ಕೆ ಕೊಟ್ಟನೆಂದು ಉಲ್ಲೇಖವಿದೆ[೭೩].

ಕ್ರಿ.ಶ.ಹತ್ತನೆಯ ಶತಮಾನದವರೆಗೆ ಚಾಲುಕ್ಯರು ರಾಷ್ಟ್ರಕೂಟರ ಸಾಮಂತರಾಗಿದ್ದರು. ತರುವಾಯ ತಲಕಾಡಿನ ಗಂಗ ವಂಶದ ಮಾರಸಿಂಹನು ಉಚ್ಛಂಗಿದುರ್ಗದ ಕೋಟೆಯನ್ನು ಪಡೆದುಕೊಂಡಾಗ 'ನೊಳಂಬ ಕುಲಾಂತಿಕ' ಎಂಬ ಬಿರುದು ಪ್ರಾಪ್ತವಾಯಿತು. ಪಶ್ಚಿಮ ಚಾಲುಕ್ಯರ

ತೈಲಪ ಗಂಗರನ್ನು ಹಿಮ್ಮೆಟ್ಟಿಸಿದನು. ಈ ಬಗ್ಗೆ ಬಾಗಳಿ (೧೦೧೮) ಮತ್ತು ತೆಲಗಿ (೧೦೩೨) ಶಾಸನಗಳು ಬೆಳಕು ಚೆಲ್ಲುತ್ತವೆ. ಇವರು ಕುಂತಳವನ್ನು ಆಳುವಾಗ ಅನೇಕ ಘಟನೆಗಳು ಜರುಗುತ್ತವೆ. ದೊರೆ ತ್ರಿಭುವನದೇವರ ಹಾಗೂ ನೊಳಂಬವಾಡಿಯ ೩೨೦೦೦ ಸಾಮಂತರಸರ ಆಳ್ವಿಕೆಯಲ್ಲಿ ಹರಪನಹಳ್ಳಿ ಒಂದು ಆಡಳಿತ ಪ್ರದೇಶವಾಗಿತ್ತು[೭೪]. ನಂತರ ಕ್ರಿ.ಶ.ಎಂಟನೆಯ ಶತಮಾನದಲ್ಲಿ ನೊಳಂಬಪಲ್ಲವರು ಉಚ್ಚಂಗಿದುರ್ಗವನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸಿದರು. ತಾಲ್ಲೂಕಿನ ಅರಸೀಕೆರೆ ನೊಳಂಬರ ಆಳ್ವಿಕೆಗೆ ಸೇರಿದ್ದು. ಇವರ ಅರಸಿಯೊಬ್ಬಳು ಕೆರೆ ಕಟ್ಟಿಸಿದ್ದರಿಂದ ಈ ಗ್ರಾಮಕ್ಕೆ ಅರಸೀಕೆರೆ ಎಂದು ಹೆಸರಾಯಿತೆಂದು ಪ್ರತೀತಿ. ಶಾಸನದಲ್ಲಿ ನೊಳಂಬನರಸಿಕೆರೆ ಎಂಬ ಉಲ್ಲೇಖವಿದೆ. ಆದರೆ ಈಕೆಯ ಹೆಸರಾಗಲಿ ಕೆರೆ ಕಟ್ಟಿಸಿದ್ದಕ್ಕೆ ದಾಖಲೆಗಳಾಗಲಿ ಇಲ್ಲ[೭೫].

ಹರಿಹರಸ್ವಾಮಿಯ ದೇವಾಲಯದ ಬಳಿಯ ಶಾಸನದಲ್ಲಿ ಕ್ರಿ.ಶ.೧೦೩೨ರಲ್ಲಿ ನೊಳಂಬವಾಡಿ ೩೨೦೦೦ನ್ನು ಆಳುತ್ತಿದ್ದ ಚಾಲುಕ್ಯರ ಜಗದೇಕಮಲ್ಲ ಎರಡನೆಯ ಜಯಸಿಂಹದೇವ ಮತ್ತು ಅವನ ಮಹಾಮಂಡಲೇಶ್ವರ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾಡಿದೇವನ ಹೆಸರು ಕಂಡು ಬರುವುದು. ಇವನು ನೊಳಂಬವಾಡಿ ೩೨೦೦೦, ಕದಂಬಳಿಗೆ ೧೦೦೦, ಕೋಗಳಿ–೫೦೦ ಮುಂತಾದವುಗಳನ್ನು ಆಳುತ್ತಿದ್ದಾಗ ತೆಲಗಿಯ ಊರೊಡೆಯ ಕನ್ನಿಮಯ್ಯನು ಬಿಕ್ಕಿಗನ ಕೆರೆಯನ್ನು ಕರೀಗೌಡನಿಗೆ ಕುಡಲೂರು ಶಂಕರನಾರಾಯಣ ದೇವರ ಸಮ್ಮುಖದಲ್ಲಿ ಒಂದು ಗದ್ದೆಯನ್ನು ನೊಳಂಬಾಧಿಕಾರಿಯ ಕಾಲು ತೊಳೆದು ದಾನ ಬಿಟ್ಟ ವಿಚಾರವಿದೆ. ಕಂಚಿಕೆರೆಯ ಮಂದಲಿಮಠದ ಬಳಿಯ ಶಾಸನದಲ್ಲಿ ಕ್ರಿ.ಶ.೧೦೫೯ರಲ್ಲಿ ನೊಳಂಬ ಜಗದೇಕಮಲ್ಲ ನೊಳಂಬಪೆರ್ಮಾಡಿದೇವನು ಕೋಗಳಿ–೫೦೦, ಕದಂಬಳಿಗೆಸಾಸಿರ(೧೦೦೦) ಆಳುತ್ತಿದ್ದಾಗ ಇವನ ಸಾಮಂತಪೆರ್ಗಡೆ ಬಾಚಿಮಯ್ಯ ಕಂಚಿಕೆರೆಯನ್ನು ಆಳುತ್ತಿದ್ದನು.

ಕ್ರಿ.ಶ.೧೧೬೨ರಲ್ಲಿ ಕೋಗಳಿ–೫೦೦, ಬಿಕ್ಕಿನನೆಳ್ವತ್ತರ ಉಪವಿಭಾಗದಲ್ಲಿ ಅರಸೀಕೆರೆ ಸಮ್ಮಿಳಿತವಾಗಿತ್ತೆಂದು ಕಳಚೂರಿಗಳ ಶಾಸನದಲ್ಲಿ ಉಲ್ಲೇಖವಿರುವುದರಿಂದ ಇವರ ಆಳ್ವಿಕೆಯೂ ಇತ್ತೆಂದು ತಿಳಿಯಬಹುದಾಗಿದೆ[೭೬]. ಕಡತಿಯ ಕಲ್ಲೇಶ್ವರ ದೇವಾಲಯದ ಕ್ರಿ.ಶ.೧೨೮೨ರ ಕಾಲದ ಶಾಸನದಲ್ಲಿ ಯಾದವ ರಾಮಚಂದ್ರದೇವನ ಆಳ್ವಿಕೆಯಲ್ಲಿ ಬಯಿರಸದೇವನ ಮಗ ಬಸವದೇವನೆಂಬ ವೀರ ಯುದ್ಧದಲ್ಲಿ ಹೋರಾಡಿ ಮಡಿದ ವಿಚಾರವಿದೆ. ಅಲ್ಲಿಯೇ ಇರುವ ಇನ್ನೊಂದು ವೀರಗಲ್ಲು ಕ್ರಿ.ಶ.೧೨೯೨–೯೪ರ ಕಾಲದ್ದಾಗಿದ್ದು ಯಾದವ ಅರಸ ವೀರರಾಮಚಂದ್ರರಾಯನು ಆಳುತ್ತಿದ್ದಾಗ ಕಂದರದೇವನ ಮುಂದಾಳತ್ವದಲ್ಲಿ ಮನೆಯಗೊಡತಿ ಚಟ್ಟರಸರನು ಯುದ್ಧ ಮಾಡಿ ಮಡಿದ ವಿಷಯವನ್ನು ತಿಳಿಸುತ್ತದೆ[೭೭].

ಕುಂಚೂರು ಗ್ರಾಮದ ಕೆರೆ ಬಳಿಯ ಮಲ್ಲಿಕಾರ್ಜುನ ದೇವಾಲಯ ಕಂಬದ ಕ್ರಿ.ಶ. ೧೨೮೬ರ ಶಾಸನ ಯಾದವರ ವೀರರಾಮಚಂದ್ರದೇವನ ಮಾಂಡಳಿಕ ಲಿಂಗದೇವರಾಣಿಯ ನಿರೂಪದಂತೆ ಊರಡೆಯ ಮಲ್ಲಣ್ಣ ಜಕ್ಕರಸಮತ್ತವೂರ ಮಲ್ಲಿಕಾರ್ಜುನ ದೇವರಿಗೆ ಮತ್ತೂರು ಗ್ರಾಮವನ್ನು ಮುಖ್ಯ ಪೂಜಾರಿ ಕಲ್ಲೆಯಜೀಯ ಹರಿಪಜೀಯನಿಗೆ ಭೂದಾನ ನೀಡಿದ ವಿಚಾರವನ್ನು ತಿಳಿಸುತ್ತದೆ[೭೮].

ದೇವಗಿರಿಯ ಯಾದವ/ಸೇವುಣರ ನಂತರ ಕಲ್ಯಾಣ ಚಾಲುಕ್ಯರು ಉಚ್ಚಂಗಿಯಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಕ್ರಿ.ಶ.೧೦೬೪ರಲ್ಲಿ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲನ ಮಗ ವಿಷ್ಣುವರ್ಧನ ವಿಜಯಾದಿತ್ಯದೇವ ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ ದೇವಪಯ್ಯ ಉಚ್ಚಂಗಿಯನ್ನು ಆಳುತ್ತಿದ್ದನು. ಕಲ್ಯಾಣ ಚಾಲುಕ್ಯರ ಅರಸ ಆರನೆಯ ವಿಕ್ರಮಾದಿತ್ಯನು ಕ್ರಿ.ಶ.೧೦೬೮ಕ್ಕೆ ಪೂರ್ವದಲ್ಲಿ ವಿಜಯಯಾತ್ರೆ ಕೈಗೊಂಡಾಗ ಅವನ ಸೈನ್ಯದ ಸರ್ವಾಧ್ಯಕ್ಷನಾಗಿ ಮೆರೆದ ಫಲಿತಪಾಂಡ್ಯ ಬಾಗಳಿಯನ್ನು ಆಳುತ್ತಿದ್ದನು. ಹಾಗಾಗಿ ತುಂಗಭದ್ರೆಯ ಒಳಭಾಗದ ಈ ಪ್ರದೇಶ ಕಲ್ಯಾಣ ಚಾಲುಕ್ಯರಿಗೆ ಹೆಚ್ಚು ಪ್ರಿಯವಾಗಿದ್ದು ಈ ಭಾಗದಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿದರು[೭೯]. ಬಾಗಳಿಯ ಕಲ್ಲೇಶ್ವರ ದೇವಾಲಯವು ಶಾಸನಗಳ ಆಗರವಾಗಿದ್ದು ಅದರಲ್ಲಿ ೧೨ ಶಾಸನಗಳು ಆರನೆಯ ವಿಕ್ರಮಾದಿತ್ಯನ ಕಾಲದವುಗಳಾಗಿವೆ[೮೦]. ಈ ದೇವಾಲಯವನ್ನು ವಿಕ್ರಮಾದಿತ್ಯನು ತನ್ನ ೫೧ನೆಯ ವಯಸ್ಸಿನಲ್ಲಿ ಕ್ರಿ.ಶ.೧೦೬೮ರಲ್ಲಿ ಕಟ್ಟಿಸಿದನೆಂದು ತಿಳಿದು ಬರುತ್ತದೆ.

ಇಲ್ಲಿ ಆಳಿದ ಪಾಂಡ್ಯರು ಉಚ್ಚಂಗಿ ಪಾಂಡ್ಯರೆಂದೇ ಹೆಸರಾಗಿದ್ದಾರೆ. ಕ್ರಿ.ಶ.೧೦೭೯-೧೧೬೦ಕ್ಕಿಂತ ಹೆಚ್ಚು ಕಾಲ ಪಾಂಡ್ಯರ ಆಳ್ವಿಕೆಗೆ ಒಳಗಾಗಿತ್ತು. ಕುಂಚೂರಿನ ಮಲ್ಲಿಕಾರ್ಜುನಸ್ವಾಮಿ ದೇವಾಲಯದ ಬಳಿಯ ಶಾಸನ ಚಾಲುಕ್ಯ ತ್ರಿಭುವನಮಲ್ಲದೇವನ ಮಾಂಡಳಿಕ ತ್ರಿಭುವನಮಲ್ಲ ವೀರಪಾಂಡ್ಯದೇವರು ಆಳುತ್ತಿದ್ದನು. ಈ ವೀರಪಾಂಡ್ಯನು ಬಿಜ್ಜಳನ ಸಾಮಂತನಾಗಿದ್ದನು[೮೧]. ಕ್ರಿ.ಶ.೧೧೬೯ರಲ್ಲಿ ಅಲಗಿಲವಾಡದಲ್ಲಿ ವಿಜಯಪಾಂಡ್ಯ ಆಳ್ವಿಕೆ ನಡೆಸಿದನೆಂದು ಇವನ ಮಹಾ ಪ್ರಧಾನ ಪೆರ್ಮಾಡಿ ದಂಡನಾಯಕನನ್ನು ಇವನ ದಂಡನಾಥ ಕೇತನನ್ನು ಮತ್ತು ಪೆರ್ಗಡೆ ದಾಸಿಯಣ್ಣನ ಹೆಸರುಗಳನ್ನು ಅಲ್ಲಿನ ಕಲ್ಲೇಶ್ವರ ದೇವಾಲಯದ ಶಾಸನ ತಿಳಿಸುತ್ತದೆ[೮೨]. ಉಚ್ಚಂಗಿ ಪಾಂಡ್ಯರು ಬಾಗಳಿಯನ್ನು ತಮ್ಮ ರಾಜ್ಯದ ಉಪರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ವಿಜಯ ಪಾಂಡ್ಯ ಅಥವಾ ಕಾಮದೇವನಿಗೆ ಸೇರಿದ ಕಾಲವಿಲ್ಲದ ಬಾಗಳಿಯ ಸಂಸ್ಕೃತ ಶಾಸನ ಫಲಮಾಂಡಪಾಂಡ್ಯ, ಫಲಕಪಾಂಡ್ಯ, ಸೊಂಚಿಪಾಂಡ್ಯ, ರಾಯಪಾಂಡ್ಯ, ಗೊಲೆಯ ಪಾಂಡ್ಯರು ಆಳ್ವಿಕೆ ನಡೆಸಿದ ಬಗ್ಗೆ ತಿಳಿಸುತ್ತದೆ[೮೩]. ಹಾಗೂ ಚೇದಿರಾಜ, ಶ್ರೀರಾಯಪಾಂಡ್ಯ, ವೀರಪಾಂಡ್ಯ ಹಾಗೂ ವಿಜಯಪಾಂಡ್ಯರನ್ನು ಹೆಸರಿಸುತ್ತದೆ[೮೪].

ಹೊಯ್ಸಳರು ವಿಷ್ಣುವರ್ಧನನು ಅಧಿಕಾರಕ್ಕೆ ಬರುವವರೆಗೂ ಕಲ್ಯಾಣ ಚಾಲುಕ್ಯರ ಅಧೀನದಲ್ಲಿದ್ದರು. ಎರಡನೆಯ ಬಲ್ಲಾಳನು ನೊಳಂಬವಾಡಿಯನ್ನು ಹಲವು ಬಾರಿ ವಶಪಡಿಸಿಕೊಂಡು

ಉಚ್ಚಂಗಿದುರ್ಗವನ್ನು ಉತ್ತರಭಾಗದ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನಲ್ಲದೆ ತುಂಗಭದ್ರಾ ನದಿಯನ್ನು ಉತ್ತರಸೀಮೆಯ ಗಡಿಯಾಗಿ ಮಾಡಿಕೊಂಡಿದ್ದನು[೮೫]. ವಿಜಯನಗರದ ಶ್ರೀಕೃಷ್ಣದೇವರಾಯ ಆಳ್ವಕೆಯ ಕಾಲದಲ್ಲಿ ಚಿನ್ನದ ಕೆಲಸ ಮಾಡುತ್ತಿದ್ದ ಭಂಡಾರದ ತಿಮ್ಮರಸ ಕೊಟ್ಟೂರು ಸೀಮೆಯ ಪಾರುಪತ್ಯೆಗಾರ ನಾಗರಸನ ಅಪ್ಪಣೆಯಂತೆ ಅರಸೀಕೆರೆಯನ್ನು ಆಳುತ್ತಾ ಹಾಳಾಗಿದ್ದ ಕೆರೆಯನ್ನು ಪುನರ್ ಸ್ಥಾಪಿಸಿದ[೮೬]. ಚಿಗಟೇರಿ ಇವರ ಕಾಲದಲ್ಲಿ ಅಗ್ರಹಾರವಾಗಿತ್ತು. ಕ್ರಿ.ಶ.೧೫೪೭ರಲ್ಲಿ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಬಾಗಳಿ ಕೊಟ್ಟೂರು ಸೀಮೆಗೆ ಸೇರಿತ್ತು. ಮುಂದೆ ಹರಪ್ಪನಹಳ್ಳಿ ಪಾಳೆಯಗಾರರು, ಹೈದರಾಲಿ, ಟಿಪ್ಪುಸುಲ್ತಾನ, ಬ್ರಿಟೀಷರ, ಆಳ್ವಿಕೆಗೆ ಒಳಪಟ್ಟ ಈ ಪ್ರದೇಶ ವಸಾಹತು ಶಾಹಿ ಪ್ರಭಾವಕ್ಕೆ ಒಳಗಾಯಿತು. ವಿಜಯನಗರ ಅರಸರ ನಂತರ ಅಧಿಕಾರಕ್ಕೆ ಬಂದ ಪಾಳೆಯಗಾರರ ಬಗ್ಗೆ ತಿಳಿದುಕೊಳ್ಳುವುದು ಪ್ರಸ್ತುತ ಅಧ್ಯಯನ ಕ್ಷೇತ್ರದ ಪ್ರಮುಖ ವಿಷಯವಾಗಿದೆ.

### ೨.೫ ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಇತಿಹಾಸ

ವಿಜಯನಗರ ಸಾಮ್ರಾಜ್ಯದ ಪತನಾ ನಂತರ ಕರ್ನಾಟಕದಲ್ಲಿ ಪ್ರಬಲರಾದವರು ಪಾಳೆಯಗಾರರು. ಇವರಲ್ಲಿ ಹರಪನಹಳ್ಳಿ ಪಾಳೆಯಗಾರರು ಪ್ರಮುಖರಾಗಿದ್ದಾರೆ. ಬಾಗಳಿ, ಹರಪನಹಳ್ಳಿ ಉಚ್ಚಂಗಿದುರ್ಗ ನಾರಾಯಣದೇವರಕೆರೆಗಳನ್ನು, ರಾಜಧಾನಿಗಳನ್ನಾಗಿ ಮಾಡಿಕೊಂಡು ಕ್ರಿ.ಶ.ಹದಿನಾರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ ಇವರು 'ಹರಪನಹಳ್ಳಿ ಪಾಳೆಯಗಾರ'ರೆಂದೇ ಹೆಸರಾಗಿದ್ದಾರೆ. ವಿಜಯನಗರದ ಸಂಸ್ಕೃತಿ ಮತ್ತು ಪರಂಪರೆಯನ್ನು ಮುಂದುವರೆಸಿದರಲ್ಲದೆ ಪ್ರಾದೇಶಿಕ ಮಟ್ಟದ ಬುಡಕಟ್ಟು ಸಂಸ್ಕೃತಿ ಮತ್ತು ಶಿಷ್ಟ ಸಂಸ್ಕೃತಿಗಳನ್ನು ಸಂಯೋಜಿಸಿ ಸಾಂಸ್ಕೃತಿಕ ಸಂಪರ್ಕವನ್ನು ಸೃಷ್ಟಿಸಿದರು. ಕೋಟೆ ಕೊತ್ತಲಗಳು, ಬುರುಜು ಭತೇರಿಗಳು, ಅರಮನೆಗಳು, ಕೆರೆ, ಕಾಲುವೆಗಳು, ದೇವಾಲಯಗಳು ಮುಂತಾದವುಗಳನ್ನು ನಿರ್ಮಾಣ ಮಾಡಿ ಇಲ್ಲಿಯ ಸಾಂಸ್ಕೃತಿಕ ಇತಿಹಾಸದಲ್ಲಿ ವೈವಿಧ್ಯತೆಯನ್ನು ಕಾಪಾಡಿಕೊಂಡು ಬರುತ್ತಾ ಕರ್ನಾಟಕದ ಪರಂಪರೆಯನ್ನು ಎತ್ತಿ ಹಿಡಿದರಲ್ಲದೇ ಅಂದಿನ ರಾಜಕೀಯ ಕ್ಷೇತ್ರದಲ್ಲೂ ಪ್ರಬಲರಾಗಿದ್ದರು.

#### ದಾದಯ್ಯನಾಯಕ

ಕ್ರಿ.ಶ. ೧೫೦೦ ರಿಂದ ೧೮೦೦ ಕಾಲಾವಧಿಯಲ್ಲಿ ಕಂಡು ಬರುವ ಶಾಸನಗಳನ್ನು ಆಧರಿಸಿ ಇವರ ರಾಜಕೀಯ ಇತಿಹಾಸವನ್ನು ಅವಲೋಕಿಸಿದರೆ ಇದುವರೆಗೂ ತಿಳಿದಿರುವಂತೆ ಈ ರಾಜ್ಯಸ್ಥಾಪಕ ಮಾಚೀನಾಯಕನ ಮಗ ದಾದೇನಾಯಕನಿಗಿಂತ ಪೂರ್ವದಲ್ಲಿ ಕೆಲ ಹೋಲಿಕೆ ಇರುಬಹುದಾದ ಹೆಸರುಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಉದಾಹರಣೆಗೆ ಹೊಸೂರು ಶಾಸನವು (೧೬ನೇ ಶತಮಾನ) ಮಾದಿನಾಯಕನ ಹೆಸರನ್ನು ಸೂಚಿಸಿ ಹೊಸೂರ ದೇವಿಗೆ ದಾನ ನೀಡಿದನೆಂದೂ, ಕ್ರಿ.ಶ.

೧೫೧೬ರ ಸೋಗಿ ಶಾಸನವು ಬಾಗಳಿ ಇಮ್ಮಡಿ ಬಸವಪ್ಪನು ಶ್ರೀಕೃಷ್ಣದೇವರಾಯನ ಅಧಿಕಾರಿಯಾಗಿದ್ದು ಈತನ ಪ್ರಧಾನಿ ಅರುಹ ತಿಮ್ಮಂಣನು ಸೋಗೆಯ ಧರ್ಮದ ಏತಕ್ಕಾಗಿ ದಾನನೀಡಿದನೆಂದೂ ಕ್ರಿ.ಶ. ೧೫೫೦ರ ಬಾಗುಳಿ ಶಾಸನವು ಹಳವಿ ನಾಯಕನು ಬಾಗುಳಿ ಆಳುತ್ತಿದ್ದಾಗ ಬಾಗುಳಿಯ ಪಟ್ಟಣಶೆಟ್ಟಿಯ ಹೆಂಡತಿ ಲಿಂಗಮ್ಮನು ಕಲಿದೇವರ ನೈವೇದ್ಯಕ್ಕೆ ದಾನ ನೀಡಿದಳೆಂದು ತಿಳಿಸುತ್ತದೆ. ಈ ಕಾಲಮಾನದ ನಂತರ ಕ್ರಿ.ಶ. ೧೫೮೦ರ ಕೊಟ್ಟೂರು ಶಾಸನವು ಬಾಗುಳಿಯ ಕಾರ್ಯಕರ್ತ ಮಾಚಿದೇವನ ಮಗ ವಾದಿನಾಯಕ ಕೊಟ್ಟೂರು ಸೀಮೆಯ ಕುರುಬರಿಗೆ ಕುರಿದೆರಿಗೆ ಮನ್ನಾ ಮಾಡಿದನೆಂದು ತಿಳಿಸುತ್ತದೆ. ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ದಾದೇನಾಯಕನಿಗಿಂತಲೂ ಮೊದಲು ಈತನ ಪೂರ್ವಜರು ಬಾಗಳಿ ಪ್ರದೇಶದಲ್ಲಿ ಸಣ್ಣ ಪುಟ್ಟ ಅಧಿಕಾರದಲ್ಲಿದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಈ ಹಿನ್ನೆಲೆಯಲ್ಲಿ ಬಂದ ದಾದೇನಾಯಕ ವಿಜಯನಗರ ಸಾಮ್ರಾಜ್ಯ ಪತನಾ ನಂತರ ಸ್ವತಂತ್ರ ರಾಜ್ಯ ಸ್ಥಾಪಿಸಿ ಆಡಳಿತ ಆರಂಭಸಿದನು. ಇಲ್ಲಿಂದ ಮುಂದು ಬರುವ ಪಾಳೆಯಗಾರರ ಶಾಸನೋಕ್ತ ಹೆಸರುಗಳು ಹಾಗೂ ಈಗಾಗಲೇ ಗ್ಯಾಸೆಟಿಯರ್ ಮುಂತಾದೆಡೆ ಪ್ರಕಟಗೊಂಡಿರುವ ಹೆಸರುಗಳು ಮತ್ತು ಕಾಲಮಾನ ಹೊಂದಿಕೆಯಾಗದೆ ಗೊಂದಲಗಳಿಗೆ ಎಡೆಮಾಡಿಕೊಡುತ್ತದೆ.

ಹರಪನಹಳ್ಳಿ ಪಾಳೆಯಪಟ್ಟಿನ ಸ್ಥಾಪಕ ದಾದೇನಾಯಕ. ಇವನು ಕ್ರಿ.ಶ.೧೫೬೫ರಿಂದ ೧೫೯೨ರವರೆಗೆ ಆಳ್ವಿಕೆ ನಡೆಸಿದ್ದನು. ಬೇಡರ ಮಾಚೀನಾಯಕ ಅಥವಾ ಮುದ್ದನಾಯಕನ ಹಿರಿಯ ಮಗನಾದ ದಾದೇನಾಯಕ ಕಣ್ಣಪ್ಪನ ಕುಲಕ್ಕೆ ಮತ್ತು ಕುಮ್ಮಟ ದುರ್ಗದ ಕುಮಾರರಾಮನ ಪುವ್ವಲ ವಂಶಕ್ಕೆ ಸೇರಿದವನಾಗಿದ್ದು ಬೇಟೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದನು. ಅಂದರೆ ದಾದಯ್ಯ ನಾಯಕನೆಂಬ ಶೂರನು ಕಣ್ಣು ಕಿತ್ತುಕೊಟ್ಟು ಕಾಮಾರಿಯ ಕೃಪೆಗೆ ಪಾತ್ರನಾದ ಕಣ್ಣಪ್ಪನ ಕುಲದವನೆಂದು ಪುವ್ವಲ ದೀಪಕನಾದ ಮತ್ತು ಕನ್ನಡ ನಾಡಿನ ರಕ್ಷಣೆಗಾಗಿ ತನ್ನ ತಲೆಯನ್ನೇ ಅರ್ಪಿಸಿದ ಗಂಡುಗಲಿ ಕುಮಾರರಾಮನ ವಂಶದವನೆಂದು ಅಭಿಪ್ರಾಯ ಪಡಲಾಗಿದೆ[೮೭]. ಕುಂಬಾ ಸದಾಶಿವಪ್ಪನವರೂ ಇದೇ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇದನ್ನು ಸಮರ್ಥಿಸಲು ಆಧಾರಗಳ ಕೊರತೆ ಇದೆ.

ಒಮ್ಮೆ ಶ್ರೀಚಂದ್ರಕಲಾ ಪರಮೇಶ್ವರಿ ಕ್ಷೇತ್ರದಲ್ಲಿರುವ ಕಾಡಿನಲ್ಲಿ ಬೇಟೆಯಾಡುತ್ತಿರುವಾಗ ಪರಮೇಶ್ವರಿ ಸ್ವಪ್ನದಲ್ಲಿ ಬಂದು ಕುಮಾರ ತುಂಗಭದ್ರಾ ನದಿಯನ್ನು ದಾಟಿ ಬಾಗಳಿ ಎಂಬ ಪುಣ್ಯಕ್ಷೇತ್ರಕ್ಕೆ ಪ್ರಯಾಣ ಬೆಳೆಸಿ ಅಲ್ಲಿ ರಾಜ್ಯ ಸ್ಥಾಪಿಸಲು ಆದೇಶಿಸಿದಳಂತೆ. ಅದರಂತೆ ಬಾಗಳಿಗೆ ಪ್ರಯಾಣ ಬೆಳೆಸಿದನು[೮೮]. ಆಗ ಕಾನಹಳ್ಳಿ, ನೀಲುಗುಂದ, ಬಾಗಳಿ ಸುತ್ತಮುತ್ತ ಕಳ್ಳಕಾಕರ ಭಯ ಹೆಚ್ಚಾಗಿದ್ದಾಗ ದಾದೇನಾಯಕ ತನ್ನ ಬೇಡರ ಪಡೆಯೊಂದಿಗೆ ಬಾಗಳಿಗೆ ಬರುತ್ತಾನೆ. ಊರಗೌಡನಿಗೆ ಮಕ್ಕಳಿಲ್ಲದ ಕಾರಣ ದಾದಯ್ಯನಾಯಕನನ್ನು ದತ್ತು ತೆಗೆದುಕೊಂಡು ಚಾರಿತ್ರಿಕ ಮಹತ್ವದ ಖಡ್ಗವನ್ನು ದಾದಯ್ಯನಿಗೆ ಕೊಟ್ಟನಂತೆ. ನೀಲಗುಂದ, ಬಾಗಳಿಗಳಲ್ಲಿ ಬೇಟೆಯಾಡುತ್ತಾ ಕೊಟ್ನಕಲ್ಲು, ಸೋವೆನಹಳ್ಳಿಯಲ್ಲಿ ಮೊದಲು

ರಾಜ್ಯ ಸ್ಥಾಪನೆ ಮಾಡಿ ಬಾಗಳಿಯನ್ನು ಕೇಂದ್ರವನ್ನಾಗಿಸಿಕೊಂಡನು[೯]. ಎಂಬುದಾಗಿ ಚಿಕ್ಕೇರೂರು ಗೋವಿಂದಚಾರ್ಯರು ಚರ್ಚಿಸಿದ್ದಾರೆ.

ದಾದಯ್ಯನಾಯಕನು ರಾಯಚೂರು ಸಮೀಪದ ಶ್ರೀಚಂದ್ರಕಲಾಪರಮೇಶ್ವರಿಯ ಆಶೀರ್ವಾದ ಪಡೆದು ಪ್ರಬಲವಾದ ರಾಜ್ಯ ಕಟ್ಟುವ ಹುಮ್ಮಸ್ಸಿನಲ್ಲಿ ಹರಪನಹಳ್ಳಿಗೆ ಬಂದು ಹುಗ್ಗಿ ಮಾಡಿಸಿ ಊರಿಗೆಲ್ಲ ಹಂಚಿ ಕ್ರಿ.ಶ.೧೫೫೮ರಲ್ಲಿ ಹರಪನಹಳ್ಳಿ ಪಾಳೆಯವನ್ನು ಸ್ಥಾಪಿಸಿದನು. ಕ್ರಿ.ಶ.೧೫೬೫ರಲ್ಲಿ ಹರಪನಹಳ್ಳಿ ಕೋಟೆ ಕಟ್ಟಿಸಿ ಸಿಂಹಾಸನರೂಢನಾದನು[೧೦]. ದಾದಯ್ಯನಾಯಕ ತನ್ನ ಶಕ್ತಿ ಸಾಮರ್ಥ್ಯದಿಂದ 'ಕಿರಾತಪಡೆ'ಯನ್ನು ಕಟ್ಟಿ ನೆರೆಹೊರೆ ಊರುಗಳಲ್ಲಿ ನಡೆಯುತ್ತಿದ್ದ ಕಳ್ಳತನ ದರೋಡೆಗಳನ್ನು ತಡೆಗಟ್ಟುತ್ತಿದ್ದನು[೧೧]. ತನ್ನ ಬೇಡ ಪಡೆಯೊಂದಿಗೆ ಪ್ರಪ್ರಥಮ ಬಾರಿಗೆ ಹರಪ್ಪನಹಳ್ಳಿ ತಾಲ್ಲೂಕಿನ ೩೩ ಹಳ್ಳಿಗಳನ್ನು ವಶಪಡಿಸಿಕೊಂಡನು. ಕ್ರಿ.ಶ.೧೫೬೨ರಲ್ಲಿ ಚಿತ್ರದುರ್ಗದ ಕೋಟೆಗೆ ಬಸವಾಪಟ್ಟಣದ ಕೆಂಗಣ್ಣನಾಯಕ ಮುತ್ತಿಗೆ ಹಾಕಿದಾಗ ಓಬಣ್ಣನಾಯಕ ದಾದೇನಾಯಕನ ಸಹಾಯ ಕೋರಿ ಪತ್ರ ಬರೆದು ಒಬ್ಬ ಸೈನಿಕನನ್ನು ಬಾಗಳಿಗೆ ಕಳುಹಿಸಿದನು. ಆಗ ದಾದೇನಾಯಕ ಮುನ್ನೂರು ಸಶಸ್ತ್ರ ಸೈನ್ಯದೊಡನೆ ಚಿತ್ರದುರ್ಗಕ್ಕೆ ಬಂದು ಕೆಂಗಣ್ಣನಾಯಕನನ್ನು ಸೋಲಿಸಿ ಹಿಮ್ಮೆಟ್ಟಿಸಿದ. ಇದರ ಫಲವಾಗಿ ಓಬಣ್ಣನಾಯಕ ತನ್ನ ತಂಗಿ ಹೊನ್ನಾನಾಗತಿಯನ್ನು ಕೊಟ್ಟು ವಿವಾಹ ಮಾಡಿ ವೈವಾಹಿಕ ಸಂಬಂಧ ಬೆಳೆಸಿದನು. ಆದರೆ ಬಾಗಳಿ ಅರಮನೆಯಲ್ಲಿ ವಾಸಿಸಲು ಇಷ್ಟಪಡದ ಹೊನ್ನನಾಗತಿ ತನ್ನ ಅಣ್ಣನಿಂದ ಉಚ್ಚಂಗಿ ಕೋಟೆಯನ್ನು ಬಳುವಳಿಯಾಗಿ ಪಡೆದಳು[೧೨].

ಹೊನ್ನೇನಾಗತಿಯನ್ನು ವಿವಾಹವಾಗುವ ಮುನ್ನವೇ ಚಿತ್ರದುರ್ಗದ ನಾಯಕರೊಂದಿಗೆ ದಾದಯ್ಯನಾಯಕ ಸಂಬಂಧ ಹೊಂದಿದ್ದನು. ಅಂದರೆ ಒಮ್ಮೆ ಮತ್ತಿತಿಮ್ಮಣ್ಣನಾಯಕ ಮತ್ತು ದಾದೇನಾಯಕರಿಬ್ಬರೂ ವಿಜಯನಗರದ ಅರಸರೊಂದಿಗೆ ಅವಿಧೇಯರಾಗಿ ವರ್ತಿಸಿ ಸೆರೆಸಿಕ್ಕು, ವಿಜಯನಗರದ ಕೇಂದ್ರ ಕಾರಾಗೃಹ ಸೇರಿದರು ಮತ್ತಿತಿಮ್ಮಣ್ಣನಾಯಕ ಇಲ್ಲಿಯೇ ಮರಣ ಹೊಂದಿದನು. ಆಗ ಇವನ ಬಳಿಯಿದ್ದು ಚಿತ್ರದುರ್ಗಕ್ಕೆ ಮರಳಿದವರೆಂದರೆ ಓಬಣ್ಣನಾಯಕ ಮತ್ತು ದಾದೇನಾಯಕರೆಂದು ತಿಳಿದು ಬರುತ್ತದೆ. ಹಾಗಾಗಿ ದಾದೇನಾಯಕ ಚಿತ್ರದುರ್ಗದ ಅರಸರಿಗೆ ಹೆಚ್ಚು ಪರಿಚಿತ ವ್ಯಕ್ತಿ ಎಂದು ತಿಳಿಯಲಾಗಿದೆ[೧೩].

ಉಚ್ಚಂಗಿಕೋಟೆಯಲ್ಲಿ ದಾಂಪತ್ಯ ಜೀವನವನ್ನು ನಡೆಸುತ್ತಿದ್ದ ದಾದಯ್ಯನಾಯಕ ನಂತರದ ದಿನಗಳಲ್ಲಿ ಹರಪನಹಳ್ಳಿಯ ಚಪ್ಪರದ ಅರಮನೆಯನ್ನು ತೆಗೆದು ಎರಡು ಸುತ್ತಿನ ಕಲ್ಲಿನ ಕೋಟೆಯನ್ನು ನಿರ್ಮಿಸಿ ಒಂದಕ್ಕೆ ತನ್ನ ಮನೆ ದೇವರು ಆಂಜನೇಯ ಇನ್ನೊಂದಕ್ಕೆ ತನ್ನ ರಾಣಿ ಹೊನ್ನೇನಾಗತಿ ಎಂದು ನಾಮಕರಣ ಮಾಡಿದ. ಆದರೆ ಉಚ್ಚಂಗಿದುರ್ಗದ ವಿಷಯದಲ್ಲಿ ಓಬಣ್ಣನಾಯಕನಿಗೂ ಮತ್ತು ದಾದೇನಾಯಕನ ಮಧ್ಯೆ ವೈಮನಸ್ಸು ಉಂಟಾಗಿ ದಾದಯ್ಯನಾಯಕ ಚಿತ್ರದುರ್ಗದವರ ವಿರುದ್ಧ ಯುದ್ಧ

ಮಾಡುವ ಅನಿವಾರ್ಯತೆ ಉಂಟಾಯಿತು. ದಾದಯ್ಯ ನಾಯಕನಿಂದ ಆರಂಭಗೊಂಡ ಈ ವೈಮನಸ್ಸು, ಘರ್ಷಣೆ, ಈ ಎರಡೂ ಮನೆತನಗಳ ನಡುವೆ ತಲೆ ತಲಾಂತರಗಳವರೆಗೂ ಮುನ್ನೆಡೆದು ಪರಸ್ಪರರ ಅವನತಿಗೆ ಕಾರಣವಾಯಿತು. ಉಚ್ಚಂಗಿ ದುರ್ಗದ ಕೋಟೆಯಲ್ಲಿ ಒಮ್ಮೆ ದಾದಯ್ಯನಾಯಕ ತನ್ನ ಅಧಿಕಾರಿಗಳೊಂದಿಗೆ ಚರ್ಚಿಸುತ್ತಿರುವಾಗ ಆ ಸ್ಥಳಕ್ಕೆ ಆಗಮಿಸಿದ ರಾಣಿ ಹೊನ್ನೇನಾಗತಿ ಆಕಸ್ಮಿಕ ಕಾಲು ಜಾರಿ ಕೋಟೆಯ ಮೇಲಿಂದ ಬಿದ್ದು ಪ್ರಾಣತೆತ್ತಳೆಂದು ತಿಳಿದು ಬಂದಿದೆ[೯೪]. ಈ ಘಟನೆಯ ಬಳಿಕ ದಾದೇನಾಯಕನು ತನ್ನ ರಾಣಿಯ ಹೆಸರಿನಲ್ಲಿ ಅವಳು ಉರುಳಿದ ಸ್ಥಳದಲ್ಲಿ ಒಂದು ಹೂಡೇವು ಕಟ್ಟಿಸಿ ಅದಕ್ಕೆ 'ಹೊನ್ನೇನಾಗತಿ ಹೂಡೇವು' ಎಂದು ಹೆಸರಿಟ್ಟನು. ಮಳೆಗಾಲದಲ್ಲಿ ಅಲ್ಲಿಂದ ನೀರು ಹರಿದು ಬರುವುದರಿಂದ ಅದನ್ನು 'ಹೊನ್ನೇ ಝುರಿ' ಎಂದು ಸ್ಥಳೀಯರು ಕರೆಯುತ್ತಾರೆ. ಬಹುದಿನಗಳಾದರೂ ನಾಯಕ ತನ್ನ ರಾಣಿಯನ್ನು ಮರೆಯದೆ ಆಸ್ಥಳಕ್ಕೆ ನಿತ್ಯವೂ ಬಂದು ಹೋಗುತ್ತಿದ್ದನಂತೆ. ಅಲ್ಲದೆ ಮೊದಲುಘಟ್ಟದ ಆಂಜನೇಯ ದೇವರ ಗುಡಿ ಪಕ್ಕದಲ್ಲಿ ಒಂದು ಶಿಲ್ಪವನ್ನು ತಾನು ತನ್ನ ಮಡದಿ ಹೊನ್ನವ್ವನ ಚಿತ್ರವನ್ನು ಕಲ್ಲಿನಲ್ಲಿ ಕೆತ್ತಿಸಿದ್ದಾನೆ. ದೇವರತಿಮ್ಮಲಾಪುರದಲ್ಲಿ ದಾದೇನಾಯಕ ತನ್ನ ನಾಲ್ಕೂ ಪತ್ನಿಯರೊಂದಿಗೆ ಇರುವ ಶಿಲ್ಪಗಳಿವೆ ಇದರಿಂದ ದಾದೇನಾಯಕ ಹೊನ್ನೇನಾಗತಿಯ ಮರಣಕ್ಕೆ ಕಾರಣವಾಗಿರಲಾರ. ಹೀಗಿದ್ದರೂ ಚಿತ್ರದುರ್ಗದವರು ದಾದೇನಾಯಕ ಹೊನ್ನಮ್ಮನನ್ನು ಕಟ್ಟೆಯಿಂದ ಕೆಳಗೆ ತಳ್ಳಿ ಕೊಲೆ ಮಾಡಿದನೆಂದು ಭಾವಿಸಿದರು. ಈ ಬೆಳವಣಿಗೆಯಿಂದ ಚಿತ್ರದುರ್ಗದವರಿಗೂ – ಹರಪ್ಪನಹಳ್ಳಿಯವರಿಗೂ ವೈರುಧ್ಯತೆಗಳು ಬೆಳೆದು ಮುಂದಿನ ಯುದ್ಧಗಳಿಗೆ ಕಾರಣವಾದವು[೯೫]. ಬಹುತೇಕ ಹೊನ್ನೇನಾಗತಿ ಮರಣದ ವಿಚಾರವಲ್ಲದೆ, ದಾದೇನಾಯಕನ ವಿಸ್ತರಣಾ ಚಟುವಟಿಕೆಗಳು ಚಿತ್ರದುರ್ಗದವರ ನೆಮ್ಮದಿಗೆ ಭಂಗ ತಂದಿರಬೇಕು. ಈ ರಾಜಕೀಯ ಹಗೆತನ, ವೈಷಮ್ಯ ಈ ಎರಡೂ ರಾಜ್ಯಗಳ ನಡುವೆ ಸುಧೀರ್ಘ ಹೋರಾಟಕ್ಕೆ ಕಾರಣವಾಗಿರಬಹುದು.

ಹೊನ್ನೇನಾಗತಿಯ ಮರಣದ ನಂತರ ದಿವಾನ, ಪುರೋಹಿತ, ಹಿರಿಯರ ಒತ್ತಾಯದ ಮೇರೆಗೆ ಜರಿಮಲೆ ಪಾಳೆಯಗಾರರ ಮಗಳು ಜಂಪಾನಾಗತಿ, ಗುಡೇಕೋಟೆ ಪಾಳೆಯಗಾರನ ಮಗಳು ಭರಮನಾಗತಿ ಹಾಗೂ ತರೀಕೆರೆ ಪಾಳೆಯಗಾರರ ಮಗಳು ಹನುಮಾನಾಗತಿಯರನ್ನು ವಿವಾಹವಾಗಿ ಜಂಪಾನಾಗತಿಯನ್ನು ಪಟ್ಟದ ರಾಣಿಯನ್ನಾಗಿ ಸ್ವೀಕರಿಸಿದನು. ೨೬ ವರ್ಷಗಳ ಸುದೀರ್ಘ ಆಳ್ವಿಕೆ ನಡೆಸಿ ಕ್ರಿ.ಶ.೧೫೯೨ರಲ್ಲಿ ಮರಣ ಹೊಂದಿದನು.

**ರಂಗಣ್ಣನಾಯಕ**

ದಾದೇನಾಯಕ ಮತ್ತು ಜಂಪಾನಾಗತಿಯರ ಪುತ್ರ ರಂಗಣ್ಣನಾಯಕ ಕ್ರಿ.ಶ.೧೫೯೨ರಲ್ಲಿ ತನ್ನ ತಂದೆಯ ಮರಣದ ನಂತರ ಪಟ್ಟಕ್ಕೆ ಬಂದನು. ಇವನು ಪಟ್ಟಕ್ಕೆ ಬರುವ ಮೊದಲೇ ತಂದೆಯೊಡನೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಅನುಭವವನ್ನು ಪಡೆದಿದ್ದನು. ತನ್ನ ರಾಜ್ಯವನ್ನು ಪೂರ್ವಕ್ಕೆ ಕೊಟ್ಟೂರಿನವರೆಗೂ ವಿಸ್ತರಿಸಿದನು. ಕೂಡ್ಲಿಗಿ ತಾಲ್ಲೂಕಿನ ಜರಿಮಲೆ ಪಾಳೆಯಗಾರರ ಮಗಳಾದ

ಚಂಪಾನಾಗತಿಯನ್ನು ವಿವಾಹವಾದನು. ತನ್ನ ತಂದೆಯಂತೆಯೆ ದೇವರು ಹಾಗೂ ಗುರು ಹಿರಿಯರಲ್ಲಿ ಗೌರವ ಭಕ್ತಿ ಮತ್ತು ಪ್ರಜೆಗಳ ಮೇಲೆ ಪ್ರೀತಿ ವಿಶ್ವಾಸವನ್ನು ಹೊಂದಿದ್ದನು. ಅನೇಕ ಕೆರೆ, ಕಾಲುವೆ, ದೇವಾಲಯಗಳನ್ನು ನಿರ್ಮಿಸಿದನು. ಕೊಟ್ಟೂರು ಬಸವೇಶ್ವರ ಅಥವಾ ಗುರುಬಸವಸ್ವಾಮಿಗೆ ದೇವಸ್ಥಾನದ ಮಧ್ಯಭಾಗವನ್ನು ಹಾಗೂ ಮಹಾದ್ವಾರವನ್ನು ಕಟ್ಟಿಸಿದ್ದಲ್ಲದೆ ಅಪಾರ ಕಾಣಿಕೆಯನ್ನು ನೀಡಿದನು. ೨೪ ವರ್ಷಗಳ ಕಾಲ ಆಳ್ವಿಕೆ ಮಾಡಿದ ರಂಗಣ್ಣನಾಯಕ ಕ್ರಿ.ಶ.೧೬೧೬ರಲ್ಲಿ ಮರಣ ಹೊಂದಿದನು.

**ಭರಮಣ್ಣನಾಯಕ**

ರಂಗಣ್ಣನಾಯಕನ ಪುತ್ರ ಭರಮಣ್ಣನಾಯಕ ಕ್ರಿ.ಶ. ೧೬೧೬ರಲ್ಲಿ ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಪ್ರಜೆಗಳು ಸುಖ ಶಾಂತಿಯಿಂದ ಇದ್ದರು. ಇವನಿಗೆ ಮುದ್ದನಾಯಕನೆಂತಲೂ ಹೆಸರಿತ್ತೆಂದು ತಿಳಿದು ಬರುತ್ತದೆ[೯]. ಈತನು ೩೪ ವರ್ಷಗಳ ಸುದೀರ್ಘ ಆಳ್ವಿಕೆಯನ್ನು ನಡೆಸಿದರೂ ಈಗಾಗಲೇ ಇದ್ದ ವಿಶಾಲವಾದ ರಾಜ್ಯವನ್ನು ರಕ್ಷಿಸಿಕೊಂಡು ಹೋಗುವುದರಲ್ಲೇ ಕಾಲ ಕಳೆಯಬೇಕಾಯಿತು. ಆದರೆ ಅಧಿಕಾರವಹಿಸಿಕೊಂಡ ಆರಂಭದ ದಿನಗಳಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹನಸಿಕೋಟೆಯನ್ನು ಜರಿಮಲೆ ಪಾಳೆಯಗಾರರಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸಿ ತುಂಬಾ ಪ್ರಯಾಸಪಟ್ಟನು. ಮೂರು ತಿಂಗಳುಗಳ ಕಾಲ ಹೋರಾಡಿ ಕೊನೆಗೆ ಮೋಸದಿಂದ ಹನಸಿಕೋಟೆಯನ್ನು ವಶಪಡಿಸಿಕೊಂಡನು. ಮುಂದುವರೆದು ಒಂದು ವರ್ಷದಲ್ಲಿ ಅದರ ಸುತ್ತಮುತ್ತಲಿನ ಅನೇಕ ಕೋಟೆಗಳನ್ನು ಹೆಚ್ಚು ಶ್ರಮವಿಲ್ಲದೆ ವಶಪಡಿಸಿಕೊಂಡನು[೭]. ಇವನು ವಿದ್ಯಾವಂತನಲ್ಲದಿದ್ದರೂ ಹೆಚ್ಚು ಚುರುಕು ಬುದ್ಧಿಯುಳ್ಳವನಾಗಿದ್ದು ಎಲ್ಲರನ್ನು ಗೌರವಿಸುತ್ತಾ ನಂಬಿಕೆ ವಿಶ್ವಾಸ ಗಳಿಸಿದ್ದನು. ಜರಿಮಲೆ ಸಂಸ್ಥಾನ ಇವನ ಅಜ್ಜಿಯ ಮನೆ. ಇವರ ರಾಜಕೀಯ ಹೋರಾಟವನ್ನು ನೋಡಿದರೆ ಗೊಂದಲಗಳು ಮೂಡುತ್ತವೆ. ಹರಪನಹಳ್ಳಿ ಪ್ರಸನ್ನ ವೆಂಕಟರಮಣ ದೇವಾಲಯದಲ್ಲಿ ಡಾ. ಎಂ. ಕೊಟ್ರೇಶ್‌ರವರಿಂದ ಶೋಧಿಸಲ್ಪಟ್ಟ ಶಾಸನ ಕ್ರಿ.ಶ. ೧೬೦೩ ಕಾಲಮಾನ ಹೊಂದಿದ್ದು ಬಾಗುಳಿ ಬಸಪ್ಪನ ಹೆಸರನ್ನು ಉಲ್ಲೇಖಿಸುತ್ತದೆ. ಶಾಸನಗಳಲ್ಲಿ ಭರಮಣ್ಣ ನಾಯಕನ ಉಲ್ಲೇಖ ಕಂಡುಬರುವುದಿಲ್ಲ. ಈ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲವಾಗಿದೆ.

**ಓಬಣ್ಣನಾಯಕ**

ಭರಮಣ್ಣನಾಯಕನ ಮಗ ಓಬಣ್ಣನಾಯಕ ಕ್ರಿ.ಶ. ೧೬೫೧ರಲ್ಲಿ ಪಟ್ಟಕ್ಕೆ ಬಂದು ಕೇವಲ ಐದು ವರ್ಷಗಳು ಮಾತ್ರ ಆಳ್ವಿಕೆ ನಡೆಸಿದನು. ಇವನು ಅಪ್ರಾಪ್ತನಾಗಿದ್ದರಿಂದ ತನ್ನ ತಂದೆಯ ಮರಣದ ಎರಡು ವರ್ಷಗಳ ನಂತರ ಅಧಿಕಾರಕ್ಕೆ ಬಂದು ಆಪ್ತರು ಮತ್ತು ಸೇನಾಪತಿಗಳ ಮಾರ್ಗದರ್ಶನದಂತೆ ರಾಜ್ಯವಾಳಿದ ಎಂದು ತಿಳಿದು ಬಂದಿದೆ. ಇವನನ್ನು ಹೊಂಬಣ್ಣ ನಾಯಕನೆಂತಲೂ ಕರೆಯಲಾಗಿದೆ. ಅಧಿಕಾರಕ್ಕೆ ಬಂದ ಕೆಲ ದಿನಗಳಲ್ಲೇ ಅನೇಕ ಯುದ್ಧಗಳನ್ನು ಮಾಡಿ ರಾಜ್ಯವನ್ನು ವಿಸ್ತರಿಸುವಲ್ಲಿ ಹಾಗೂ ಪ್ರಜೆಗಳಲ್ಲಿ ಶಾಂತಿ ಕಾಪಾಡುವಲ್ಲಿ ಯಶಸ್ವಿಯಾದನು. ಇವನಿಗೆ ಪ್ರಾಣಿಗಳ ಬೇಟೆಯಲ್ಲಿ ಅತ್ಯಾಸಕ್ತಿಯಿದ್ದು

ಜನರಿಗೆ ಬೆಳೆಗೆ ಹಾಗೂ ರೈತರಿಗೆ ತೊಂದರೆ ಕೊಡುತ್ತಿದ್ದ ಅನೇಕ ಪ್ರಾಣಿಗಳನ್ನು ತನ್ನ ಬೇಡ ಪಡೆ, ಕುಸ್ತಿವೀರರು, ಬಾಕು, ಭರ್ಜಿ, ಖಡ್ಗ ಹಾಗೂ ಈಟಿಗಳೊಂದಿಗೆ ಹೋಗಿ ಬೇಟೆಯಾಡುತ್ತಿದ್ದ. ಸಾಮಾನ್ಯವಾಗಿ ರೈತರಿಗೆ ಅನುಕೂಲವಾದ ಸೋಮವಾರ ದಿನದಂದು ತನ್ನ ಬೇಟೆಯನ್ನು ಹಮ್ಮಿಕೊಂಡು ಒಂದು ದಿನ ಮುಂಚಿತವಾಗಿಯೇ ರಾತ್ರಿ ಹಲಗೆ ಹೊಡೆಯಿಸಿ ಸಾರ್ವಜನಿಕರಿಗೂ ಮತ್ತು ರೈತರಿಗೂ ತಾನು ಹೊರಡುವ ಮಾಹಿತಿಯನ್ನು ತಿಳಿಸುತ್ತಿದ್ದನು[೯೮]. ಈತನ ಹೆಸರಿನಲ್ಲಿ ಓಬಳಪುರವೆಂಬ ಅನೇಕ ಗ್ರಾಮಗಳು ಕಂಡು ಬರುತ್ತವೆ[೯೯]. ಕ್ರಿ.ಶ. ೧೬೪೪ರ ಮೈದೂರು ಶಾಸನದಲ್ಲಿ ಬಾಗುಳಿ ಓಬಯದೇವನಾಯಕನ ಕುಮಾರ ಮಹಾನಾಯಕಾಚಾರ್ಯ ಬಸವಯ್ಯನಾಯಕ ಎಂಬ ಉಲ್ಲೇಖವಿದ್ದು ಮೈದೂರುಲ್ಲಿ ಕಲ್ಲಿನ ದೋಣಿ ನಿರ್ಮಾಣ ವಿಚಾರ ತಿಳಿಸುತ್ತದೆ.

**ವೀರಮುಮ್ಮಡಿನಾಯಕ**

ಮುಮ್ಮಡಿಬಸಪ್ಪ ನಾಯಕನಿಗೆ ಪುತ್ರ ಸಂತಾನವಿಲ್ಲದ ಕಾರಣದಿಂದ ತಮ್ಮನಾದ ವೀರಮುಮ್ಮಡಿನಾಯಕ ಕ್ರಿ.ಶ.೧೬೫೬ರಲ್ಲಿ ಅಧಿಕಾರಕ್ಕೆ ಬಂದ. ಇವನಿಗೆ ಬಸವಂತಪ್ಪನಾಯಕನೆಂತಲೂ ಕರೆಯಲಾಗಿದೆ. ಇವನು ದಾದಯ್ಯನಾಯಕನ ಕೊನೆಯ ಸಂತತಿಗೆ ಸೇರಿದ್ದು ಹನ್ನೆರಡು ವರ್ಷಗಳ ಕಾಲ ಉತ್ತಮ ಆಳ್ವಿಕೆ ಮಾಡಿದ್ದಾನೆ. ಇವನು ಸೈನ್ಯದ ಬಲವರ್ಧನೆಗೆ ಹೆಚ್ಚು ಮಹತ್ವ ನೀಡಿ ಹರಪನಹಳ್ಳಿ ಸೀಮೆಯ ಕುಸ್ತಿ ಆಟದ ಉತ್ತಮ ಉತ್ಸಾಹಿ ತರುಣರನ್ನು ಸೇನೆಗೆ ಸೇರಿಸಿಕೊಂಡು ಅವರಿಗೆ ಕತ್ತಿವರಸೆ, ಮಲ್ಲಯುದ್ಧ, ಈಟಿ ಎಸೆಯುವುದು, ಬಾಣ ಹೊಡೆಯುವುದು ಮುಂತಾದ ಯುದ್ಧ ಕೌಶಲಗಳ ಬಗ್ಗೆ ಸಮರ್ಥರಾದ ಯೋಧರ ಮೂಲಕ ತರಬೇತಿ ಕೊಡಿಸಿದ. ಮೈಸೂರಿನಿಂದ ಉತ್ತಮ ಪಳಗಿದ ಕುದುರೆಗಳನ್ನು ತರಿಸಿಕೊಂಡು ಸೈನ್ಯವನ್ನು ಪ್ರಬಲ ಹಾಗೂ ಶಿಸ್ತಿನಿಂದ ಇಟ್ಟಿದ್ದನು. ನಾಯಕನಿಗೆ ಪ್ರಜೆಗಳಲ್ಲದೆ ಸೈನಿಕರ ಯೋಗಕ್ಷೇಮದ ಬಗ್ಗೆಯೂ ಹೆಚ್ಚು ಕಾಳಜಿ ಇದ್ದುದರಿಂದ ಅಪಾರ ಪ್ರೀತಿ ಅಭಿಮಾನ ಬೆಳೆಸಿಕೊಂಡನು.

ಕೂಡ್ಲಿಗಿ ತಾಲ್ಲೂಕಿನ ಬೆಳ್ಳಾಡು (ಶಿವಪುರದ ಹತ್ತಿರ) ಕೋಟೆಯನ್ನು ನಾರಾಯಣ ದೇವರಕೆರೆಯ ತಳವಾರನ ಮಾತಿನಂತೆ ಮುತ್ತಿಗೆ ಹಾಕಿ ಒಂದು ವಾರ ಕಾಲ ಯುದ್ಧ ಮಾಡಿದನು. ಆದರೆ ಕೋಟೆ ಸಂಪೂರ್ಣ ನಾಶವಾಗಿ ನಾಯಕನ ಕೈ ಸೇರಿತು. ಆಗ ಕೋಟೆಯ ಜನರು ಬೇರೆಡೆಗೆ ವಲಸೆ ಹೋದರಂತೆ. ಕೋಟೆ ನಾಶದ ಸ್ಥಳದಲ್ಲಿ ಒಂದು ತಗ್ಗು ಪ್ರದೇಶವಿದ್ದು ಈಗಲೂ ಶಿವಪುರದವರು ಅದನ್ನು 'ರಕ್ತದಗುಂಡಿ' ಎಂದು ಕರೆಯುತ್ತಾರೆ. ಬೆಳ್ಳಾಡು ಪಕ್ಕದಲ್ಲಿ ಶಿವಪುರ ಗ್ರಾಮ ಸ್ಥಾಪಿಸಲ್ಪಟ್ಟಿದೆ. ಬೆಳ್ಳಾಡು ಗ್ರಾಮದವರು ಈ ಶಿವಪುರಕ್ಕೆ ವಲಸೆ ಬಂದರೆಂದು ತಿಳಿದು ಬಂದಿದೆ[೧೦೦]. ಇವನಿಗೂ ಗಂಡು ಸಂತಾನವಿಲ್ಲದ ಕಾರಣ ದಾದೇನಾಯಕನ ಸಂತತಿ ಇವನೊಂದಿಗೆ ಮುಕ್ತಾಯವಾಯಿತು.

**ಮುಮ್ಮಡಿನಾಯಕ**

ಈತನು ಅಧಿಕಾರಕ್ಕೆ ಬರುವ ಮುನ್ನ ಸ್ವಲ್ಪ ಸ್ಪರ್ಧೆಯನ್ನು ಎದುರಿಸಬೇಕಾಯಿತು. ಏಕೆಂದರೆ ವೀರಮುಮ್ಮಡಿನಾಯಕನಿಗೆ ಪುತ್ರ ಸಂತಾನವಿಲ್ಲದ ಕಾರಣ ಓಬಣ್ಣನಾಯಕನ ಮೊಮ್ಮಗ ಮುಮ್ಮಡಿನಾಯಕನನ್ನು ಅಧಿಕಾರಕ್ಕೆ ತರಲಾಯಿತು. ಆದರೆ ಓಬಣ್ಣನಾಯಕನ ಗೋಣಿಪ್ಪ ಮತ್ತು ಓಬಣ್ಣ ಎಂಬ ಇಬ್ಬರು ಮಕ್ಕಳಲ್ಲಿ ಎರಡನೆಯ ಮಗ ಓಬಣ್ಣನಾಯಕನ ಮಕ್ಕಳಾದ ಎರಡನೆಯ ಗೋಣಿಪ್ಪ, ಚೊಕ್ಕಪ್ಪ, ದುರ್ಗಣ್ಣ ಮತ್ತು ಬಸವಂತಪ್ಪನಾಯಕನೆಂಬ ನಾಲ್ಕು ಜನ ಮಕ್ಕಳಲ್ಲಿ ಸ್ಪರ್ಧೆ ಉಂಟಾಯಿತು. ಇವರಲ್ಲಿ ಎರಡನೆಯವನಾದ ಚೊಕ್ಕಪ್ಪನಿಗೆ 'ಮುಮ್ಮಡಿನಾಯಕ' ಎಂದು ನಾಮಕರಣ ಮಾಡಿ ಕ್ರಿ.ಶ.೧೬೬೮ರಲ್ಲಿ ಪಟ್ಟಕ್ಕೆ ತರಲಾಯಿತು.

ಕುಮಾರರಾಮನ ಅಜ್ಜನ ಹೆಸರು ಮುಮ್ಮಡಿಸಿಂಗನೆಂದು ಅವನನ್ನು 'ಮುಮ್ಮಡಿ' ಎಂದೇ ಕರೆದಿರುವುದರಿಂದ ಹರಪನಹಳ್ಳಿ ಪಾಳೆಯಗಾರರನ್ನು ಈ ಕುಮಾರರಾಮನ ವಂಶಸ್ಥರೆಂದು ಹೇಳಲಾಗುತ್ತದೆ. ಏಕೆಂದರೆ 'ಮುಮ್ಮಡಿ' ಎಂಬ ಹೆಸರು ಅನೇಕ ಪಾಳೆಯಗಾರರ ಹೆಸರಿನೊಂದಿಗೆ ಸೇರಿದೆ[೧೦೧]. ಇವನು ಕೂಡ ಸೈನ್ಯದ ಬಲವರ್ಧನೆಗೆ ಶಿಸ್ತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಸೈನ್ಯವನ್ನು ಬಲಪಡಿಸಿಕೊಂಡು ಅನೇಕ ಕೋಟೆಗಳನ್ನು, ಪ್ರದೇಶಗಳನ್ನು ವಶಪಡಿಸಿಕೊಂಡು ಹರಪನಹಳ್ಳಿ ಸೀಮೆಯನ್ನು ವಿಸ್ತಾರಗೊಳಿಸಿದನು. ಈತನ ಕಾಲದಲ್ಲಿ ಹಿಂದಿನ ಐದು ಜನ ನಾಯಕರ ರಾಜ್ಯಪಾಲನೆಯ ಫಲವಾಗಿ ಶಾಂತಿ ನೆಲೆಗೊಂಡು ರಾಜ್ಯವು ೪೬೦ ಹಳ್ಳಿಗಳ ಕಂದಾಯದಿಂದ ಎಂಟು ಲಕ್ಷಕ್ಕೆ ಮೀರಿ ವರಹಗಳ ವರಮಾನ ಬರುವಷ್ಟು ವಿಸ್ತಾರವಾಗಿತ್ತೆಂದು ತಿಳಿಯುತ್ತದೆ[೧೦೨]. ಅಂದರೆ ಇವನ ರಾಜ್ಯ ಹರಪನಹಳ್ಳಿಯಿಂದ ಪಶ್ಚಿಮ ದಿಕ್ಕಿಗೆ ಹಿರೇಕುರುವತ್ತಿ ಮತ್ತು ಮೈಲಾರ ಗ್ರಾಮಗಳಿಂದ ಪೂರ್ವಕ್ಕೆ ನಾರಾಯಣದೇವರಕೆರೆಯವರೆಗೆ ವಿಸ್ತರಿಸಿತ್ತು. ಹೀಗೆ ಇವನು ಒಬ್ಬ ಸಮರ್ಥ ರಾಜನಾಗಿ ಇಪ್ಪತ್ತು ವರ್ಷಗಳ ಕಾಲ ರಾಜ್ಯಭಾರ ಮಾಡಿ ಕ್ರಿ.ಶ.೧೬೮೭ರಲ್ಲಿ ಮರಣ ಹೊಂದಿದನು.

**ಒಂದನೆಯ ಬಸವಂತನಾಯಕ**

ಮುಮ್ಮಡಿನಾಯಕನಿಗೆ ಪುತ್ರ ಸಂತಾನವಿಲ್ಲದಿದ್ದರಿಂದ ಇವನ ಕೊನೆಯ ತಮ್ಮನಾದ ಬಸವಂತನಾಯಕನು ಕ್ರಿ.ಶ. ೧೬೮೭ರಲ್ಲಿ ಪಟ್ಟಕ್ಕೆ ಬಂದನು. ಇವನನ್ನು ಶ್ರೀಕರ ಬಸಪ್ಪನಾಯಕ, ಇಕ್ಕಡಿಬಸಪ್ಪನಾಯಕ, ಕೊಟ್ರಬಸಪ್ಪನಾಯಕನೆಂತಲೂ ಕರೆಯಲಾಗಿದೆ. ಇವನು ಕೊಟ್ರಬಸಪ್ಪ ನಾಯಕನೆಂದು ಹೆಸರು ಪಡೆದಿದುದಕ್ಕೆ ಹರಪನಹಳ್ಳಿಯಲ್ಲಿ ದೊರೆತ ಒಂದು ದಾಖಲೆ ಈ ರೀತಿ ತಿಳಿಸುತ್ತದೆ. ಕಲ್ಯಾಣ ಪ್ರಾಂತ್ಯದಿಂದ ಬಂದ ಮಹಾಮಹಿಮರಾದ ಗಂಗಾಧರಸ್ವಾಮಿ ಒಡೆಯರು ಬಸವಂತಪ್ಪನಾಯಕನಿಗೆ ಮಹಾಮಹಿಮೆಗಳನ್ನು ತೋರಿಸಿ ಲಿಂಗಾಂಗ ಸಾಮರಸ್ಯವನ್ನು ಬೋಧಿಸಿದರು. ಆಗ ಬಸವಂತಪ್ಪನಾಯಕನು ತನ್ನನ್ನು ಲಿಂಗಮಯಿಯನ್ನಾಗಿ ಮಾಡಬೇಕೆಂದು ಸ್ವಾಮಿಗಳನ್ನು ಬೇಡಿಕೊಂಡಾಗ ನಾಯಕರನ್ನು ಹಂಪೆಗೆ ಕರೆದುಕೊಂಡು ಹೋಗಿ ಲಿಂಗದೀಕ್ಷೆ ನೀಡಿ

'ಕೊಟ್ರಪ್ಪನಾಯಕ' ಎಂದು ಹೆಸರಿಟ್ಟರಂತೆ[೧೦೩]. ಆದರೆ ಇದರ ಬಗ್ಗೆ ವಾದವಿವಾದಗಳಿವೆ. ಮೊದಲನೆಯದಾಗಿ ಹರಪನಹಳ್ಳಿ ಪಾಳೆಯಗಾರರಿಗೂ ಮತ್ತು ಕೆಳದಿ ನಾಯಕರಿಗೂ ತುಂಬಾ ಸ್ನೇಹ ಸಂಬಂಧವಿದ್ದು ಕೆಳದಿ ಅರಸರು ವೀರಶೈವರಾಗಿದ್ದರಿಂದ ಅವರ ಸ್ನೇಹ ಪ್ರಭಾವಕ್ಕೆ ಒಳಗಾಗಿ ಹರಪನಹಳ್ಳಿ ಅರಸರು ವೀರಶೈವ ದೀಕ್ಷೆ ಪಡೆದಿರಬೇಕೆಂದು ಕೆಲವರ ಊಹೆಯಾದರೆ ಹರಪನಹಳ್ಳಿ ಅರಸರು ಕೊಟ್ಟೂರಿನ ಗುರುಬಸವೇಶ್ವರಸ್ವಾಮಿಗಳ ಭಕ್ತರಾಗಿದ್ದು ಕೊಟ್ರೇಶನ ಪ್ರಭಾವದಿಂದ ವೀರಶೈವರಾಗಿರಬೇಕೆಂದು ಮತ್ತೆ ಕೆಲವರ ವಾದವಾಗಿದೆ. ಪಾಳೆಯಗಾರರು ಕೊಟ್ರಪ್ಪ, ಮರಿಕೊಟ್ರಪ್ಪ ಎಂಬ ಹೆಸರುಗಳನ್ನು ಇಟ್ಟುಕೊಂಡಿದ್ದರು.

ನಾಯಕ ಒಂದು ದಿನ ಬಾಗಳಿಯ ಕಲ್ಲೇಶ್ವರ ದೇವಾಲಯದಲ್ಲಿ ಬಾಗಳಿಯ ಗೌಡನಾದ ದೊಡ್ಡಸಿದ್ಧನಗೌಡನೊಂದಿಗೆ ಜೂಜಾಟ ಪ್ರಾರಂಭಿಸಿ ಗೌಡ ಸೋತರೆ ಅವನು ತನ್ನ ಇಬ್ಬರು ತಂಗಿಯರಾದ ಲಕ್ಕವ್ವ ಮತ್ತು ಮಾದವ್ವರನ್ನು ಅರಸನಿಗೆ ಕೊಟ್ಟು ವಿವಾಹ ಮಾಡಿಕೊಡಬೇಕೆಂದು ಪಣ ಹಾಕಿದರು. ಆಗ ಗೆಲವು ಅರಸನ ಪಾಲಾದಾಗ ಬೇಡರಿಗೆ ತನ್ನ ತಂಗಿಯರನ್ನು ವಿವಾಹ ಮಾಡಿಕೊಡಲು ಸಮಸ್ಯೆಯಾಗಿದೆ ಎಂಬ ಗೌಡನ ಇಂಗಿತವನ್ನು ಅರಿತ ನಾಯಕ ವೀರಶೈವ ದೀಕ್ಷೆ ಪಡೆದನೆಂದೂ ಹೇಳಲಾಗಿದೆ. ಗೌಡನೊಂದಿಗೆ ಜೂಜಾಡುತ್ತಿದ್ದಾಗ ಶಿವನಪ್ಪನೆಂಬ ತಳವಾರ ಚಿಗಟೇರಿ ಗೌಡರಿಂದ ಓಲೆಯನ್ನು ತೆಗೆದುಕೊಂಡು ಬಂದು ನಾಯಕನಿಗೆ ಕೊಟ್ಟನು. ಆಗ ನಾಯಕ ಜೂಜಾಟದಲ್ಲಿ ಸೋಲುವ ಹಂತದಲ್ಲಿದ್ದಾಗ ಶಿವನಪ್ಪನ ಸಹಾಯದಿಂದ ಗೆಲುವು ಸಾಧಿಸಿದನು. ಪರಿಣಾಮವಾಗಿ ಶಿವನಪ್ಪನಿಗೆ ಚಿಗಟೇರಿಯನ್ನು ಬಿಟ್ಟು ಕೊಟ್ಟು ಚಿಗಟೇರಿ ಕೋಟೆಗೆ ಅರಸನೆಂದು ಸಾರಿದನು. ಅಂದಿನಿಂದ ಶಿವನಪ್ಪ ಹರಪನಹಳ್ಳಿಯವರ ಸಾಮಂತನಾಗಿ ಆಳ್ವಿಕೆ ನಡೆಸಿದನು.

ಬಸವಂತಪ್ಪನಾಯಕ ಹರಪನಹಳ್ಳಿಯ ಪ್ರಸನ್ನ ವೆಂಕಟರಮಣಸ್ವಾಮಿಗೆ ಬಾಗಳಿಯ ಒಂದು ಗದ್ದೆಯನ್ನು ಆ ದೇವರ ಪೂಜಾಕಾರ್ಯಕ್ಕೆ ದತ್ತಿ ನೀಡಿದನು. ಶ್ರೀಕೂಡ್ಲಿ ಶಂಕರಭಾರತಿಸ್ವಾಮಿಗಳ ಉದ್ಗಟ್ಟಮಠಕ್ಕೆ ನಿಟ್ಟೂರು ಬಸಾಪುರ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟು ದತ್ತಿ ಬರೆಸಿದನು. ಕೂಡ್ಲಿಗಿ ತಾಲ್ಲೂಕಿನ ಚಿಕ್ಕಕೆರೆ ಗ್ರಾಮದ ಪೂರ್ವದಲ್ಲಿ ಶ್ರೀಕರಬಸಪ್ಪನಾಯಕನ ಶಿಲಾಶಾಸನ ದೊರೆತಿದೆ[೧೦೪]. ಕ್ರಿ.ಶ. ೧೬೯೯ರಲ್ಲಿ ಪುರೋಹಿತರಲ್ಲಿ ಕಲಹವುಂಟಾದಾಗ ಅವರಿಗೆ ಸಲ್ಲುವ ಆದಾಯವನ್ನು ಹಂಚಿ ನ್ಯಾಯ ನಿರ್ಣಯಿಸಿದನು. ಕ್ರಿ.ಶ.೧೭೦೫ರಲ್ಲಿ ಬಾಗಳಿಯ ದೊಡ್ಡಸಿದ್ಧನಗೌಡ ಕೊಲ್ಲಿಸಿದನು.

**ಮರಿಕೊಟ್ರಪ್ಪನಾಯಕ**

ದಿನದಿಂದ ದಿನಕ್ಕೆ ವಿಸ್ತಾರಗೊಳ್ಳುತ್ತಿದ್ದ ಹರಪನಹಳ್ಳಿ ಸಂಸ್ಥಾನಕ್ಕೆ ಕೀರ್ತಿ ತಂದವರ ಪೈಕಿ ಇವನೂ ಒಬ್ಬನಾಗಿದ್ದಾನೆ. ಇವನ ರಾಜ್ಯ ಹೊಸಪೇಟೆಯ ಹೊಸೂರು ಗ್ರಾಮದವರೆಗೂ ಪಶ್ಚಿಮಕ್ಕೆ

ತುಂಗಭದ್ರಾ ನದಿಯ ಇಕ್ಕೆಲಗಳ ಹಳ್ಳಿಗಳವರೆಗೂ ವಿಸ್ತರಿಸಿತ್ತು. ಹೀಗಾಗಿ ಈ ದೊರೆಗಳು ಹೊಸೂರು ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆ ಕೊಡುಗೆಗಳನ್ನು ನೀಡಿ ಹೊಸಪೇಟೆಯನ್ನು ತಮ್ಮ ತೆಕ್ಕೆಯಲ್ಲಿ ಉಳಿಸಿಕೊಂಡಿದ್ದರು. ಇವನ ಕಾಲದಲ್ಲಿ ಹೇಳಿಕೊಳ್ಳುವಂತಹ ದೊಡ್ಡ ಯುದ್ಧಗಳೇನೂ ನಡೆಯಲಿಲ್ಲ. ಪಟ್ಟಕ್ಕೆ ಬಂದ ಮೊದಲ ವರ್ಷದಲ್ಲಿ ಹಳ್ಳಿಗಳಲ್ಲಿ ಉಂಟಾಗುತ್ತಿದ್ದ ಚಿಕ್ಕ-ಚಿಕ್ಕ ಜಗಳಗಳನ್ನು ನ್ಯಾಯವಾಗಿ ನಿವಾರಿಸುತ್ತಿದ್ದನು. ದರೋಡೆಕೋರರನ್ನು, ಪುಡಾರಿಗಳನ್ನು ಹಿಡಿದು ಶಿಕ್ಷಿಸಿ ಪ್ರಜೆಗಳಿಗೆ ನೆಮ್ಮದಿ ನೀಡುತ್ತಿದ್ದ. ಇವನ ಕಾಲದಲ್ಲಿ ಹರಪನಹಳ್ಳಿ ಹಾಗೂ ಹೂವ್ವಿನಹಡಗಲಿ ಮುಂತಾದ ತಾಲ್ಲೂಕುಗಳಲ್ಲಿ ಹೊಸ ಗ್ರಾಮಗಳು ಉದಯವಾದವು. ಅವುಗಳಲ್ಲಿ ದಾನವ್ವ, ಧರ್ಮವ್ವ, ಬಸವ್ವ ಎಂಬ ರಾಣಿಯರ ಹೆಸರಿನಲ್ಲಿ ದಾನವ್ವಹಳ್ಳಿ, ಧರ್ಮಸಾಗರ, ನಾಗತಿಬಸಾಪುರ, ನೀರಿಲ್ಲದ ಬಸಾಪುರಗಳು ಪ್ರಮುಖವಾಗಿವೆ[೧೦೫].

ನಾಯಕ ಕಾಲಕ್ರಮೇಣ ಆಡಳಿತದಲ್ಲಿ ಆಸಕ್ತಿ ಕಳೆದುಕೊಂಡು ಜೂಜು ಹಾಗೂ ಸ್ತ್ರೀ ವ್ಯಾಮೋಹಗಳಿಗೆ ಒಳಗಾಗಿ ಪ್ರಜೆಗಳ ಹಿತರಕ್ಷಣೆಯನ್ನು ಮರೆತನು. ಹೆಚ್ಚು ಕಾಲ ನಾರಾಯಣದೇವರಕೆರೆಯ ಅರಮನೆಯಲ್ಲಿಯೇ ವಾಸಿಸುತ್ತಿದ್ದನು. ಈ ಸಂದರ್ಭ ಚಿತ್ರದುರ್ಗದ ಭರಮಣ್ಣನಾಯಕ ತನ್ನ ಗೂಢಾಚಾರರನ್ನು ಹರಪನಹಳ್ಳಿಗೆ ಕಳುಹಿಸಿ ನಾಯಕ ನಾರಾಯಣದೇವರಕೆರೆ ಅರಮನೆಯಲ್ಲಿ ಬೀಡು ಬಿಟ್ಟಿರುವುದನ್ನು ತಿಳಿದುಕೊಂಡು ಅಪಾರ ಸೈನ್ಯದೊಂದಿಗೆ ಹರಪನಹಳ್ಳಿ ಪಟ್ಟಣವನ್ನು ಮುತ್ತಿ ಶ್ರಮವಿಲ್ಲದೆ ವಶಪಡಿಸಿಕೊಂಡನು. ನಾರಾಯಣದೇವರಕೆರೆಯಿಂದ ರಾಜ ಹರಪನಹಳ್ಳಿ ತಲುಪುವದರೊಳಗೆ ಚಿತ್ರದುರ್ಗ ಸೇನೆ ಹರಪನಹಳ್ಳಿ ಕೋಟೆಯನ್ನು ವಶಪಡಿಸಿಕೊಂಡಿತ್ತು. ರಾಜನ ಈ ವರ್ತನೆಯಿಂದ ಸೈನಿಕರು ಸರದಾರರಿಗೆ ಅರಸನ ಬಗ್ಗೆ ಅತೃಪ್ತಿಯುಂಟಾಯಿತು. ಈ ಯುದ್ಧದ ಸೋಲಿನ ನಂತರ ದಿವಾನ ಹಂಪರಸಪ್ಪ ಸೇನಾ ಪ್ರಮುಖರು ಒಟ್ಟುಗೂಡಿ ದುರ್ಗದ ಅರಸನೊಂದಿಗೆ ಒಪ್ಪಂದ ಮಾಡಿಕೊಂಡು ಅವರಿಗೆ ಉಚ್ಚಂಗಿದುರ್ಗದ ಬಳಿಯಿರುವ ಹಿರೇಮೇಗಳಗೇರಿ, ಚಿಕ್ಕಮೇಗಳಗೇರಿ, ರಾಮಘಟ್ಟ, ಗಡಿಗುಡಾಳು, ಅಣಜಿಗೇರಿ, ಕಂಚಿಕೇರಿ ಕೋಟೆಗಳನ್ನು ಬಿಟ್ಟುಕೊಟ್ಟರು[೧೦೬]. ಈ ಘಟನೆಯಿಂದ ನಾಯಕನ ಖಜಾನೆ ಬರಿದಾಯಿತು. ಅಲ್ಲದೇ ರಾಜ್ಯದ ಗೌಡರು ಕಂದಾಯ ಸಂಗ್ರಹಿಸಿ ಕಾಲಕಾಲಕ್ಕೆ ತಂದು ಕೊಡುತ್ತಿರಲಿಲ್ಲ. ಮರಿಕೊಟ್ರಪ್ಪನಾಯಕನು ಕ್ರಿ.ಶ.೧೭೧೫ರಲ್ಲಿ ಮರಣ ಹೊಂದಿದನು.

**ಎರಡನೆಯ ಬಸವಂತನಾಯಕ**

ತನ್ನ ತಂದೆ ಮರಿಕೊಟ್ರಪ್ಪನಾಯಕನ ನಂತರ ಕ್ರಿ.ಶ.೧೭೧೫ರಲ್ಲಿ ಪಟ್ಟಕ್ಕೆ ಬಂದು ಕೇವಲ ಒಂದು ವರ್ಷ ಮಾತ್ರ ಆಳ್ವಿಕೆ ನಡೆಸಿದನು. ಇವನನ್ನು ಇಕ್ಕಡಿಬಸಪ್ಪನಾಯಕನೆಂತಲೂ ಕರೆಯಲಾಗಿದೆ. ಕಡಿಮೆ ಅವಧಿ ಆಳ್ವಿಕೆ ನಡೆಸಿದರೂ ಗುಣ ಮತ್ತು ಚಾರಿತ್ರ್ಯದಿಂದ ಉತ್ತಮ ಅರಸನಾಗಿದ್ದನು. ಮೌರ್ಯರ ಅಶೋಕ ಮಹಾಶಯನಂತೆ ದಯಾಶೀಲನಾಗಿದ್ದು ಸಾಲುಮರಗಳನ್ನು ನೆಡುವುದು,

ಪ್ರಯಾಣಿಕರ ಅನುಕೂಲಕ್ಕೆ ರಸ್ತೆಯ ಪಕ್ಕದಲ್ಲಿ ಅರವಟ್ಟಿಗೆಗಳನ್ನು ನಿರ್ಮಾಣ ಮಾಡುವುದು, ಕೆರೆ, ಕಟ್ಟೆ, ಬಾವಿಗಳನ್ನು ನಿರ್ಮಿಸುವುದು ಮುಂತಾದ ಸಾರ್ವಜನಿಕ ಉಪಯೋಗಿ ಕಾರ್ಯಗಳನ್ನು ಮಾಡಿದನು. ದೈವೀಭಕ್ತನೂ ಆಗಿದ್ದನು. ಆದರೆ ಕ್ರಿ.ಶ.೧೭೧೬ರಲ್ಲಿ ಅಕಾಲ ಮರಣಕ್ಕೆ ತುತ್ತಾದನು. ಉಳಿದಂತೆ ಈ ನಾಯಕನ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

**ಬಾಗಳಿಹರಿಯಮ್ಮಾಜಿ**

ತನ್ನ ಪತಿ ಎರಡನೆಯ ಬಸವಂತನಾಯಕನ ಅಕಾಲ ಮರಣದಿಂದ ಅನಿವಾರ್ಯವಾಗಿ ಹರಿಯಮ್ಮಾಜಿ ನಾಗತಿ ಅಧಿಕಾರಕ್ಕೆ ಬಂದಳು. ಹರಪನಹಳ್ಳಿ ಪಾಳೆಯಗಾರರಲ್ಲಿ ಏಕೈಕ ರಾಣಿಯಾಗಿ ರಾಜ್ಯಭಾರ ಮಾಡಿದಳು. ಇವಳು ತನ್ನನ್ನು 'ಬಾಗಳಿ ಹರಿಯಮ್ಮಾಜಿ' ಎಂದು ಕರೆದುಕೊಂಡಿದ್ದಾಳೆ. ಶಾಸನಗಳಲ್ಲೂ ಇದೇ ಉಲ್ಲೇಖವಿದೆ. ಇವಳ ದಾನಶಾಸನವೊಂದರಲ್ಲಿ ಶ್ರೀರಂಗರಾಯದೇವ ಮಹಾಶಯ ಚಂದ್ರಗಿರಿದುರ್ಗದಲ್ಲಿ ರಾಜ್ಯವಾಳುತ್ತಿದ್ದಾಗ ಮನ್ನೆಯವರಾದ ಬಾಗುಳಿಹರಿಯಮ್ಮಾಜಿ ಅರಮನೆ ಪುರೋಹಿತರಾದ ಶ್ರೀನಾಗದೇವಭಟ್ಟರಿಗೆ ಅಲಗಿಲವಾಡದಲ್ಲಿ ಗದ್ದೆಯನ್ನು ದಾನ ಮಾಡಿದ ವಿಚಾರವಿದೆ[೧೦೭]. ವಿಜಯನಗರದ ರಾಮದೇವ ಮಹಾಶಯರಾಯರು 'ರಾಣಿ' ಎಂದು ಮಾನ್ಯ ಮಾಡಿದ್ದಾರೆ. ಉತ್ತಮ ಆಡಳಿತಗಾರಳಾಗಿದ್ದು ಶೂರಳು ಮತ್ತು ಯುಕ್ತಶಾಲಿನಿಯೂ ಆಗಿದ್ದಳು. ಆಡಳಿತದಲ್ಲಿ ಹಿಡಿತವನ್ನು ಸಾಧಿಸಿ ಸೈನ್ಯದಲ್ಲಿ ಶಿಸ್ತನ್ನುಂಟು ಮಾಡಿದಳು. ಸಂದರ್ಭ ಬಂದರೆ ತಾನೇ ಖಡ್ಗ ಹಿಡಿದು ಯುದ್ಧ ಮಾಡುತ್ತಿದ್ದಳು. ನೆರೆಹೊರೆಯ ಅರಸರೊಂದಿಗೆ ಉತ್ತಮ ಬಾಂಧವ್ಯವನ್ನು ಸ್ಥಾಪಿಸಿ ರಾಜ್ಯದಲ್ಲಿ ಶಾಂತಿ, ನೆಮ್ಮದಿಯನ್ನು ಉಂಟು ಮಾಡಿದಳು. ಯಾವುದೇ ಸಮಸ್ಯೆಯನ್ನಾದರೂ ಮಂತ್ರಿಗಳ ಹಾಗೂ ಅಧಿಕಾರಗಳ ಸಲಹೆ-ಸೂಚನೆಗಳ ಮೂಲಕ ಬಗೆಹರಿಸುತ್ತಿದ್ದಳು. ಅಲಗಿಲವಾಡದ ಕೋಟೆಗೆ ಬಸಪ್ಪನಾಯಕನನ್ನು ದಳವಾಯಿಯಾಗಿ ನೇಮಿಸಿದಳು.

ತನ್ನ ಪತಿಯ ಅಥವಾ ಪೂರ್ವಜರಂತೆ ದಾನ-ಧರ್ಮ ಕಾರ್ಯಗಳನ್ನು ಕೈಗೊಂಡಳು. ಜೋಯಿಸಪ್ರಸನ್ನಭಟ್ಟರಿಗೆ ಕ್ರಿ.ಶ.೧೭೧೦ರಲ್ಲಿ ಬಾಗುಳಿಯಲ್ಲಿ ಗದ್ದೆಯನ್ನು ದಾನಕೊಟ್ಟು ಶಾಸನ ಹಾಕಿಸಿದ್ದಾಳೆ. ಹಾಗೆಯೇ ಅದೇ ವರ್ಷ ಕೊರೆಗಲ್ಲು ಕಾಲುವೆ ಕಟ್ಟೆಯನ್ನು ಕಟ್ಟಿಸಿ ಅದರ ಮಹೋತ್ಸವ ಕಾಲದಲ್ಲಿ ಪುರೋಹಿತರು ಹಾಗೂ ಜೋಯಿಸರಾದ ದೇವೋತ್ತಮಭಟ್ಟರು, ಹನುಮಂತಭಟ್ಟರು, ಪದ್ಮನಾಭಭಟ್ಟರು ಹಾಗೂ ನರಸಿಂಹಭಟ್ಟರಿಗೆ ಆನ್ವೇರಿಯಲ್ಲಿ ನೀರಾವರಿ ಗದ್ದೆಯನ್ನು ದಾನ ಕೊಟ್ಟು ಶಾಸನ ಹಾಕಿಸಿದ್ದಾಳೆ[೧೦೮]. ತನ್ನ ಪತಿ ಪ್ರಾರಂಭಿಸಿದ ಹಾವೇರಿ ಜಿಲ್ಲೆ ರಾಣೆಬೆನ್ನೂರಿನಿಂದ ಈಶಾನ್ಯಕ್ಕೆ ೧೮ ಕಿ.ಮೀ ದೂರದಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲೆ ಇರುವ ಉದ್ಗಟ್ಟ ಗ್ರಾಮದ ಚತುರ್ಥ ನರಸಿಂಹಭಾರತಿಸ್ವಾಮಿಗಳ ಮಠವನ್ನು ಪೂರ್ಣಗೊಳಿಸಿದಳು. ಆದರೆ ಮಠದ ಪ್ರಾರಂಭೋತ್ಸವ ಕಾಲಕ್ಕಾಗಲೇ ರಾಣಿ ಕ್ರಿ.ಶ.೧೭೨೧ರಲ್ಲಿ ಮೃತಳಾದಳು. ಇವಳ ಹೆಸರಿನಲ್ಲಿ

ಹರಪನಹಳ್ಳಿಯಿಂದ ಉಚ್ಚಂಗಿದುರ್ಗದ ಮಾರ್ಗದಲ್ಲಿ 'ಹರೇನಹಳ್ಳಿ, ಹರಿಯಮ್ಮನಹಳ್ಳಿ' ಎಂಬ ಹಳ್ಳಿಯನ್ನು ಸ್ಥಾಪಿಸಲಾಗಿದೆ.

ಹೀಗೆ ತನ್ನ ಪತಿಯ ಮರಣದ ನಂತರ ಐದು ವರ್ಷ ಸಮರ್ಥವಾಗಿ ಆಳ್ವಿಕೆ ನಡೆಸಿ ಹರಪನಹಳ್ಳಿ ಸಂಸ್ಥಾನಕ್ಕೆ ಅಮೂಲ್ಯ ಸೇವೆ ಸಲ್ಲಿಸಿದಳು. ಈಕೆಗೆ ಮಕ್ಕಳಿಲ್ಲದ ಕಾರಣ ಓಬಣ್ಣನಾಯಕನ ಸಂತತಿಯವನಾದ ಮುದಿಬಸಪ್ಪನಾಯಕನನ್ನು ದತ್ತು ತೆಗೆದುಕೊಂಡಳು.

**ಮುದಿಬಸಪ್ಪನಾಯಕ**

ಮುದಿಬಸಪ್ಪನಾಯಕನು ಬಸವಂತನಾಯಕ ಮತ್ತು ಹರಿಯಮ್ಮಾಜಿಯ ದತ್ತುಪುತ್ರ ಹೊಂಬಣ್ಣ (ಓಬಣ್ಣ)ನ ಸಂತತಿ ಎಂದರೆ ಗೋಣೆಪ್ಪನ ಮೊಮ್ಮಗನಿರಬಹುದು. ಇವನ ಮೊದಲ ಹೆಸರು 'ವಡಚನಾಳು ಗೋಣೆಪ್ಪ'. ಹರಿಯಮ್ಮಾಜಿಯ ಮರಣದ ನಂತರ ಕ್ರಿ.ಶ.೧೭೨೧ರಲ್ಲಿ ಪಟ್ಟಕ್ಕೆ ಬಂದನು. ಕುಂಚೂರು ಗ್ರಾಮದ ಬಸವ ಎಂಬುವವನನ್ನು ಹೊಳಲು ಗ್ರಾಮದ ದಳವಾಯಿಯನ್ನಾಗಿ ನೇಮಿಸಿದನು. ಇವನು ಹರಪನಹಳ್ಳಿಯ ಪಶ್ಚಿಮದ ಗಡಿಯನ್ನು ಕಾಯುತ್ತಿದ್ದನು. ಆದರೆ ಹೊಳಲು ಗ್ರಾಮದ ಬ್ರಾಹ್ಮಣರಿಗೆ ಹಿಂಸೆ ಮಾಡಿದನೆಂದು ತಿಳಿದು ಬಂದಿದೆ. ಈ ವಿಷಯ ತಿಳಿದ ಅರಸ ಹರಪನಹಳ್ಳಿಗೆ ಬಂದು ತನ್ನನ್ನು ಕಾಣುವಂತೆ ಬಸವದಳವಾಯಿಗೆ ಓಲೆ ಕಳುಹಿಸಿದನು. ಆದರೆ ಅದನ್ನು ತಿರಸ್ಕರಿಸಿದ್ದರಿಂದ ತಾನೇ ಸೈನ್ಯದೊಡನೆ ಬಂದು ಹೊಳಲುಕೋಟೆಗೆ ಮುತ್ತಿಗೆ ಹಾಕಿ ದಳವಾಯಿಯನ್ನು ಸಂಹರಿಸಿದನು. ಮುತ್ತಿಗೆಯ ಸಂದರ್ಭದಲ್ಲಿ ರಮಣಭಟ್ಟರು ಅರಸನ ಸಮೀಪದಲ್ಲಿಯೇ ಇದ್ದು ಅರಸರಿಗೆ ಜಯವಾಗಲಿ ಎಂದು ಜಪಮಾಡಿದರಂತೆ. ಅದರಂತೆ ವಿಜಯಶಾಲಿಯಾದ ಅರಸ ರಮಣಭಟ್ಟರಿಗೆ ಡಣಾಯಕನ ಕೆರೆ, ಮಗಿಮಾವಿನಹಳ್ಳಿಕೆರೆ, ಮಾಗಾಣಿಯಲ್ಲಿ ಗದ್ದೆ ಬೀಜುವರಿ ಒಂದು ವಕ್ಕಳವನ್ನು ಸರ್ವಮಾನ್ಯವಾಗಿ ದಾನ ನೀಡಿದನು[೧೯]. ಹಾಗೆಯೇ ಕ್ರಿ.ಶ.೧೭೩೯ರಲ್ಲಿ ಮೈದೂರು ಗ್ರಾಮದ ಆದಾಯವನ್ನು ನಾಲ್ಕು ಭಾಗ ಮಾಡಿ ಒಂದು ಭಾಗವನ್ನು ಸ್ಥಿತಿ ಆಶೇಷ ವಿದ್ವಾನ್ ಮಹಾಜನಗಳಿಗೆ ಕೊಟ್ಟು ಒಂದು ನಿರೂಪ ಹೊರಡಿಸಿದನು.

ಹೊಳಲು ಕೋಟೆಯ ವಿಜಯದ ನಂತರ ಹೊಸಪೇಟೆ ಹತ್ತಿರದ ಹುಲಿಗಿ ಕೋಟೆಗೆ ಮುತ್ತಿಗೆ ಹಾಕಿದನು. ಈ ಕೋಟೆ ಚಿಕ್ಕದಾದರೂ ಭದ್ರವಾಗಿತ್ತು. ಅದರ ಕಾವಲುಪಡೆ ಮತ್ತು ಸೈನಿಕರು ಮಹಾಪರಾಕ್ರಮಿಗಳಾಗಿದ್ದರಿಂದ ಅವರನ್ನು ಸೋಲಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಆದರೆ ರಾತ್ರಿಯ ವೇಳೆ ಮುತ್ತಿಗೆ ಹಾಕಿ ಹತ್ತು ದಿನಗಳ ಕಾಲ ಹಗಲು-ರಾತ್ರಿ ಹೋರಾಡಿ ವಶಪಡಿಸಿಕೊಂಡನು. ಈ ಸಂದರ್ಭದಲ್ಲಿ ಜಯ ದೊರಕಲೆಂದು ಕೈವೋಲೆ ಬರೆದುಕೊಟ್ಟ ರಮಣಭಟ್ಟರಿಗೆ ಹೊಸೂರು ಗ್ರಾಮದಲ್ಲಿ ಒಂದು ಭೂಮಿಯನ್ನು ದಾನ ನೀಡಿದನು.

### ೧ನೇ ವೀರಬಸಪ್ಪನಾಯಕ

ಕ್ರಿ.ಶ.೧೭೪೧ರಲ್ಲಿ ಮುದಿಬಸಪ್ಪನಾಯಕನ ಮರಣದ ನಂತರ ಅವನ ನಾಲ್ಕು ಜನ ಮಕ್ಕಳಲ್ಲಿ ಹಿರಿಯವನಾದ ಮೊದಲವೀರಬಸಪ್ಪನಾಯಕ ಅಧಿಕಾರಕ್ಕೆ ಬಂದನು. ಆದರೆ ಇವನ ಅಕಾಲ ಮರಣದಿಂದ ರಾಜ್ಯದ ಬಗೆಗಿದ್ದ ಭವ್ಯ ಕನಸುಗಳು ಭಗ್ನವಾದವು. ಹಾಗಾಗಿ ಕೇವಲ ಒಂದು ವರ್ಷ ಮಾತ್ರ ರಾಜ್ಯಭಾರ ಮಾಡಿದನು. ಪಟ್ಟಕ್ಕೆ ಬಂದ ವರ್ಷವೇ ಬಿದುರುಹಳ್ಳಿ (ಉತ್ತಂಗಿ)ಕೋಟೆಗೆ ಮುತ್ತಿಗೆ ಹಾಕುವ ಪ್ರಸಂಗವುಂಟಾಯಿತು. ಏಕೆಂದರೆ ಆ ಭಾಗದ ಎಲ್ಲಾ ಕೋಟೆಗಳು ಹರಪನಹಳ್ಳಿ ರಾಜ್ಯಕ್ಕೆ ಸೇರಿ ಬಿದಿರುಹಳ್ಳಿ ಕೋಟೆಯೊಂದು ಮಾತ್ರ ಉಳಿದಿತ್ತು. ಈ ಕೋಟೆ ಭದ್ರವಾಗಿದ್ದು ಅಲ್ಲಿನ ಅರಸ ಮಲ್ಲಪ್ಪ ಸ್ವತಂತ್ರನಾಗಿದ್ದನು. ಆದರೂ ಕ್ರಿ.ಶ.೧೭೪೧ರಲ್ಲಿ ಬಿದಿರುಹಳ್ಳಿಗೆ ವಿಜಯಯಾತ್ರೆ ಕೈಗೊಂಡನು. ಜೊತೆಗೆ ಪುರೋಹಿತ ರಮಣಭಟ್ಟರು ಹೊರಟರು. ವೀರಬಸಪ್ಪ ಮಲ್ಲಪ್ಪನೊಂದಿಗೆ ಎಂಟು ದಿನಗಳ ಕಾಲ ಯುದ್ಧ ಮಾಡಿದರೂ ಕೋಟೆ ವಶವಾಗಲಿಲ್ಲ. ಮಲ್ಲಪ್ಪನ ಸೈನಿಕರು ಚೋರಗುಂಡಿಯ ಮೂಲಕ ಹೊರಹೋಗಲು ಪ್ರಯತ್ನಿಸಿದಾಗ ವೀರಬಸಪ್ಪನಾಯಕನ ಸೈನಿಕರು ಅವರನ್ನು ಹಿಡಿದು ಅವರ ನೆರವಿನಿಂದ ಮತ್ತೊಮ್ಮೆ ಕೋಟೆಗೆ ಮುತ್ತಿಗೆ ಹಾಕಿದರು. ಆಗ ಅಲ್ಪ ಸೈನ್ಯವನ್ನು ಹೊಂದಿದ್ದ ಮಲ್ಲಪ್ಪ ಶಾಂತಿ ಧ್ವಜವನ್ನು ಹಾರಿಸಿ ಒಪ್ಪಂದಕ್ಕೆ ಮುಂದಾದನು. ಆಗ ಕೋಟೆ ವೀರಬಸಪ್ಪನಾಯಕನ ವಶವಾಯಿತು. ಮಲ್ಲಪ್ಪ ಪ್ರತಿ ವರ್ಷ ನೂರು ವರಹ ಕಪ್ಪ ಕೊಡಲು ಒಪ್ಪಿದನು. ವೀರಬಸಪ್ಪನಾಯಕ ಈ ಸಂದರ್ಭದಲ್ಲಿ ತನಗೆ ಜಯವಾಗಲೆಂದು ಆಶೀರ್ವದಿಸಿದ ರಮಣಭಟ್ಟರಿಗೆ ಚಿತ್ರಹಳ್ಳಿ ಗ್ರಾಮದ ಕೆರೆಯ ಮಾಗಣಿಯಲ್ಲಿ ಭೂಮಿಯನ್ನು ದಾನ ನೀಡಿದನು[೧೧೦].

ಈ ವಿಜಯದ ಸಿಹಿ ಕ್ಷಣದ ಹಿಂದೆನೇ ನಾಯಕನ ಜೀವನದಲ್ಲಿ ಕಹಿ ಘಟನೆ ನಡೆಯಿತು. ಅಂದರೆ ತನ್ನ ಆರು ವರ್ಷದ ಪುಟ್ಟರಸನೆಂಬ ಮಗನಿಗೆ ಮಲರೋಗ ತಗುಲಿ ಮೃತನಾದನು. ತನ್ನ ಮಗನ ಸಮಾಧಿ ಮೇಲೆ ಒಂದು ಮಠ ಕಟ್ಟಿಸಿ ಇಳಿದು ತುಂಬುವ ಒಂದು ಬಾವಿಯನ್ನು ತೋಡಿಸಿದನು. ಇದು ಸೊಂಡೂರು ಕೆರೆಯ ಸಮೀಪದಲ್ಲಿದೆ. ಈ ಮಠಕ್ಕೆ 'ಪುಟ್ಟರಸನಮಠ' ಎಂದು ಕರೆಯಲಾಗಿದ್ದು ಈಗಲೂ ಅದನ್ನು ನೋಡಬಹುದಾಗಿದೆ. ಆದರೆ ಈಗ ಬಾವಿಯನ್ನು ಮುಚ್ಚಲಾಗಿದೆ[೧೧೧].

ವೀರಬಸಪ್ಪನಾಯಕನ ಮತ್ತೊಂದು ಪ್ರಮುಖ ಘಟನೆಯೆಂದರೆ ಚಿತ್ರದುರ್ಗದ ಹಿರೆಮದಕರಿನಾಯಕನೊಂದಿಗಿನ ಯುದ್ಧ ಹಿರೆಮದಕರಿನಾಯಕನ ಉಪಟಳವನ್ನು ತಾಳಲಾರದೆ ಕೆಳದಿ ಬಸಪ್ಪನಾಯಕನ ಸಹಾಯ ಕೋರಿದನು. ಆಗ ಕೆಳದಿ ನಾಯಕರು ಸವಣೂರು, ರಾಯದುರ್ಗದವರ ಸಹಾಯದಿಂದ ಮದಕರಿನಾಯಕನ ಕೆಲವು ಕೋಟೆಗಳನ್ನು ಗೆದ್ದುಕೊಂಡರು. ಆದರೆ ವೀರಬಸಪ್ಪನಾಯಕ ಕ್ರಿ.ಶ.೧೭೪೨ರಲ್ಲಿ ಅಕಾಲ ಮರಣಕ್ಕೆ ತುತ್ತಾದನು. ಇವನ ಸಮಾಧಿ ಕುರುಬರ ಕೇರಿಯಲ್ಲಿದ್ದು ಅದನ್ನು 'ಅರಸಿನಮಠ' ಎಂದು ಕರೆಯಲಾಗುತ್ತಿದೆ. ಈ ಸಮಾಧಿಯ ಮೇಲೆ

ಬಸವಣ್ಣನ ಪ್ರತಿಮೆ ಇದೆ. ಇನ್ನು ಕೆಲವು ರಾಜಮನೆತನಗಳವರ ಸಮಾಧಿಗಳಿದ್ದು ಅವುಗಳ ಮೇಲೆ ಉತ್ತರಾಭಿಮುಖವಾಗಿ ಬಸವಣ್ಣ ಪ್ರತಿಮೆಗಳನ್ನು ಇರಿಸಲಾಗಿದೆ[೧೧೨].

**೧ನೇ ಸೋಮಶೇಖರನಾಯಕ**

ತನ್ನ ತಂದೆ ವೀರಬಸಪ್ಪನಾಯಕನ ಮರಣದ ನಂತರ ೧ನೇ ಸೋಮಶೇಖರನಾಯಕ ಕ್ರಿ.ಶ.೧೭೪೨ರಲ್ಲಿ ಅಧಿಕಾರಕ್ಕೆ ಬಂದನು. ಚಂದ್ರಗಿರಿದುರ್ಗದಲ್ಲಿ ಆಳುತ್ತಿದ್ದ ರಂಗರಾಯದೇವ ಮಹಾರಾಯರಿಗೆ ಸೋಮಶೇಖರನಾಯಕನು ಬಲಗೈಯಂತಿದ್ದನು. ಹರಪನಹಳ್ಳಿ ನಾಯಕರ ಇತಿಹಾಸದಲ್ಲಿ ಸೋಮಶೇಖರನಾಯಕನ ಹೆಸರು ಚಿರಸ್ಥಾಯಿಯಾಗಿದೆ. ಏಕೆಂದರೆ ಇವನ ಕಾಲದಲ್ಲಿ ಹರಪನಹಳ್ಳಿ ಮಹಾಪರಿವರ್ತನೆಯ ಸ್ಥಿತ್ಯಂತರವನ್ನು ಕಂಡಿತು. ಈತನ ಕಾಲ ಕೋಗಿಲೆಗೆ ವಸಂತಕಾಲದಷ್ಟು ಸುಖಮಯವಾಗಿತ್ತೆಂದು ತಿಳಿದು ಬರುತ್ತದೆ. ಹರಪನಹಳ್ಳಿ ಪಾಳೆಯಗಾರರಲ್ಲಿ ಪ್ರಸಿದ್ಧನೂ, ವೀರನೂ, ಶೂರನೂ ಆಗಿದ್ದು ರಾಜ್ಯವನ್ನೂ ಬಹುವಾಗಿ ವಿಸ್ತರಿಸಿದನು. ಗುತ್ತಿಯ ಮುರಾರಿರಾಯನು ಸೋಮಶೇಖರನಾಯಕನ ಏಳಿಗೆಯನ್ನು ಸಹಿಸಲಾರದೆ ಚಿತ್ರದುರ್ಗದ ನಾಯಕನಿಂದ ಸೋಮಶೇಖರನಾಯಕನಿಗೆ ವಿರೋಧ ಉಂಟಾದ ಸಮಯವನ್ನು ಅರಿತು ಕೊಟ್ಟೂರು ಗ್ರಾಮಕ್ಕೆ ಮುತ್ತಿಗೆ ಹಾಕಿದನು. ಈತನು ಸಿದ್ಧೋಜಿಯ ಮಗನಾಗಿದ್ದರಿಂದ ಸಿದ್ಧೋಜಿ ಮುರಾರಿರಾಯನೆಂತಲೂ ಕರೆಯಲಾಗಿದೆ. ಸೋಮಶೇಖರ ನಾಯಕನು ವಂಶವಳ್ಳಿ, ಚಿತ್ರದಹಳ್ಳಿ, ಸಾದರದಿನ್ನೆಗಳಲ್ಲಿ ಸೇನಾವ್ಯೂಹ ರಚಿಸಿ ಯುದ್ಧಕ್ಕೆ ಸನ್ನದ್ಧನಾದನು. ನಾಯಕನ ರಾಣಿ ಸೋಮಮ್ಮಾಜಿ[೧೧೩] ಕೊಟ್ಟೂರೇಶ್ವರನ ಪ್ರಾರ್ಥನೆ ಮಾಡಿ ಅವನಿಂದ ಪ್ರಸಾದ ಸ್ವೀಕರಿಸಿ ಯುದ್ಧಕ್ಕೆ ಹೊರಟರು. ಘೋರಯುದ್ಧ ನಡೆದು ಮುರಾರಿಗೆ ಸೋಲುಂಟಾಯಿತು. ಅವಮಾನಿತನಾದ ಮುರಾರಿ ಮದಕರಿ ನಾಯಕನನ್ನು ಸಹಾಯಕ್ಕೆ ಕರೆತಂದನಾದರೂ ಸೋಮಶೇಖರನಾಯಕನ ಶೌರ್ಯದ ಮುಂದೆ ಮದಕರಿ ನಾಯಕನು ಹಿಮ್ಮೆಟ್ಟಬೇಕಾಯಿತು[೧೧೪].

ಮುರಾರಿರಾಯನೊಂದಿಗಿನ ವಿಜಯದ ಮಹೋತ್ಸವವನ್ನು ಹರಪನಹಳ್ಳಿ ನಾಯಕರು ಉಚ್ಚಂಗಿದುರ್ಗದಲ್ಲಿ ವಿಜಯದಶಮಿ ಹಬ್ಬದಂದು ಬನ್ನಿ ಮುಡಿಯುವ ಮೂಲಕ ಆಚರಿಸಲು ಹೊರಟರು. ಉತ್ಸವಾಂಬೆಯ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ಅಂಗರಕ್ಷಕರೊಂದಿಗೆ ಹೊರಟಾಗ ಚಿತ್ರದುರ್ಗದ ನಾಯಕರು ಪೂರ್ವ ನಿಯೋಜಿನಂತೆ ದಾಳಿಮಾಡಿ ಉಚ್ಚಂಗೆಮ್ಮನ ಉತ್ಸವಮೂರ್ತಿಯನ್ನು ಅಪಹರಿಸಿ ತೆಗೆದುಕೊಂಡು ಹೋಗಿ ತಮ್ಮ ದುರ್ಗದಲ್ಲಿ ಪ್ರತಿಷ್ಠಾಪಿಸಿದರು. ಈ ಎಲ್ಲಾ ಕಾರಣಗಳಿಂದ ಸೋಮಶೇಖರನಾಯಕನು ಅನೇಕ ದಿಗ್ವಿಜಯಗಳನ್ನು ಕೈಗೊಳ್ಳುತ್ತಾನೆ. ಅವುಗಳಲ್ಲಿ ಮಾಯಕೊಂಡ, ಹಾಲಘಟ್ಟ, ಕೂಲಹಳ್ಳಿ ಯುದ್ಧಗಳು ಪ್ರಮುಖವಾಗಿವೆ[೧೧೫]. ಚಿತ್ರದುರ್ಗದವರೊಂದಿಗೆ ಹರಪನಹಳ್ಳಿಯವರ ಹಗೆತನ ಮುಂದುವರೆಯುತ್ತದೆ.

**ಮಾಯಕೊಂಡ ಯುದ್ಧ**

ಚಿತ್ರದುರ್ಗ ಹಾಗೂ ಹರಪನಹಳ್ಳಿ ನಾಯಕರಿಗೂ ರಂಗಣ್ಣನಾಯಕನ ಕಾಲದಿಂದಲೂ ದ್ವೇಷವಿತ್ತು. ಜೊತೆಗೆ ಉಚ್ಚಂಗೆಮ್ಮನ ಉತ್ಸವಮೂರ್ತಿಯನ್ನು ಮೋಸದಿಂದ ತೆಗೆದುಕೊಂಡು ಹೋಗಿದ್ದರಿಂದ ದ್ವೇಷ ಮತ್ತಷ್ಟು ಪ್ರಕೋಪಕ್ಕೆ ಹೋಗಿ ಮಾಯಕೊಂಡದ ಯುದ್ಧವಾಗಿ ಪರಿಣಮಿಸಿತು. ಇದು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಆದಂತಹ ಅತ್ಯಂತ ಪ್ರಮುಖವಾದ ಯುದ್ಧವಾಗಿದೆ. ಇದೇ ಸಮಯಕ್ಕೆ ರಾಯದುರ್ಗ ಹಾಗೂ ಬಿದನೂರು ನಾಯಕರಿಗೂ ಚಿತ್ರದುರ್ಗ ನಾಯಕರ ಮೇಲೆ ದ್ವೇಷವಿತ್ತು. ಹಾಗಾಗಿ ಅವರು ಸೋಮಶೇಖರನಾಯಕನಿಗೆ ಸಹಾಯಹಸ್ತ ನೀಡಲು ಮುಂದಾದರು. ಸವಣೂರು ನವಾಬ ಮೊದಲ ಮಜೀದ್‌ಖಾನ, ರಾಯದುರ್ಗದ ಪೆದ್ದತಿಮ್ಮಪ್ಪ ನಾಯಕನ ಮಗ ಕೊನೇಟಿನಾಯಕರು ಅಶ್ವದಳ ಮತ್ತು ಕಾಲ್ದಳಗಳೊಂದಿಗೆ ಆಗಮಿಸಿದರು. ಕೆಳದಿ ಬಸಪ್ಪನಾಯಕ ತನ್ನ ಅಪಾರ ಸೈನ್ಯವನ್ನು ಸಬುನೀಸ ಕೃಷ್ಣಪ್ಪನೊಡನೆ ಕಳುಹಿಸಿದನು[೧೧೬]. ಆಗ ಹಿರೇಮದಕರಿ ನಾಯಕ ಸೈನ್ಯದೊಂದಿಗೆ ದಾವಣಗೆರೆ ಬಳಿಯ ಮಾಯಕೊಂಡಕ್ಕೆ ಬಂದಿಳಿದರು. ಉಭಯ ಪಕ್ಷಗಳ ನಡುವೆ ಕ್ರಿ.ಶ.೨೪-೦೩-೧೭೪೮ರಲ್ಲಿ ಮಾಯಕೊಂಡದಲ್ಲಿ ಯುದ್ಧ ನಡೆಯಿತು. ಘೋರಯುದ್ಧದಲ್ಲಿ ಚಿತ್ರದುರ್ಗದ ಸೈನ್ಯದ ಶೌರ್ಯದ ಮುಂದೆ ಬಿದನೂರು ಹಾಗೂ ರಾಯದುರ್ಗದವರ ಸೈನ್ಯ ನುಚ್ಚು ನೂರಾಗಿ ಹತಾಶರಾಗಿ ಹಿಂದಕ್ಕೆ ಸರಿದರು. ಆಗ ಸೋಮಶೇಖರನಾಯಕನಿಗೂ ಹಿರೆಮದಕರಿನಾಯಕನಿಗೂ ಪಟ್ಟದಾನೆಗಳ ಮೇಲೆ ಖಡ್ಗಯುದ್ಧ ಪ್ರಾರಂಭವಾಯಿತು[೧೧೭]. ಕೊನೆಗೆ ಖಡ್ಗಯುದ್ಧ ಪ್ರವೀಣನಾದ ಮೊದಲ ಸೋಮಶೇಖರ ನಾಯಕ ಹಿರೇಮದಕರಿ ನಾಯಕನನ್ನು ಖಡ್ಗದಿಂದ ಸಂಹರಿಸಿದನು. ಹತನಾದ ಮದಕರಿನಾಯಕನ ಸಮಾಧಿಯನ್ನು ಈಗಲೂ ಮಾಯಕೊಂಡದಲ್ಲಿ ಕಾಣಬಹುದು. ಸೋಮಶೇಖರ ನಾಯಕನಿಗೆ ಸಾಧ್ವಿ ಅರಸ ಖಡ್ಗಯುದ್ಧ ಪ್ರವೀಣ ಎಂದು ಕರೆದು ಪತ್ರ ಬರೆದಿರುವರು. ಆ ಕಾಲದಲ್ಲಿ ಹರಪನಹಳ್ಳಿ ಖಡ್ಗಗಳಿಗೆ ಹೆಚ್ಚು ಬೇಡಿಕೆ ಮಹತ್ವವಿತ್ತು[೧೧೮].

ಮದಕರಿನಾಯಕನ ಮರಣದ ನಂತರ ಮಗ ಕಸ್ತೂರಿರಂಗಪ್ಪ ನಾಯಕ ಹರಪನಹಳ್ಳಿಯವರ ಮೇಲೆ ಸೆಡ್ಡು ಹೊಡೆದು ಯುದ್ಧಕ್ಕೆ ಬಂದನು. ರಂಗಪ್ಪ ಗುತ್ತಿಯ ಮುರಾರಿರಾಯನ ಸಹಾಯ ಕೋರಿದಾಗ ಹರಪನಹಳ್ಳಿಯವರ ವಿನಂತಿಯ ಮೇರೆಗೆ ಅವನು ಸಹಾಯ ಮಾಡಲಿಲ್ಲ. ಜೊತೆಗೆ ಬಿದನೂರಿನವರು ಹರಪನಹಳ್ಳಿಯವರೊಂದಿಗೆ ಕೈಜೋಡಿಸಿದ್ದರಿಂದ ರಂಗಪ್ಪ ಸೋತನು. ರಂಗಪ್ಪ ನಾಯಕನ ಮರಣದ ನಂತರ ಎರಡನೆಯ ಮದಕರಿನಾಯಕ ಯುದ್ಧ ಮುಂದುವರೆಸಿ ನಾಲ್ಕು ತಿಂಗಳು ದರೋಡೆ ನಡೆಸಿದ. ಆಗ ಉಜ್ಜನಿಕೋಟೆ, ತೂಲಹಳ್ಳಿಗಳು ಹರಪನಹಳ್ಳಿಯವರ ವಶವಾದವು. ಅಲ್ಲದೆ ಅಪಾರ ಸಂಪತ್ತನ್ನು ಭಂಡಾರಕ್ಕೆ ಸಾಗಿಸಿದನು[೧೧೯].

ಮಾಯಕೊಂಡದ ವಿಜಯಯಾತ್ರೆಯ ನೆನಪಿಗಾಗಿ ಉಪರಾಜಧಾನಿ ಹೊಸಪೇಟೆಯಲ್ಲಿ ಆನೆಯ ಮೇಲೆ ಮೆರವಣಿಗೆಯನ್ನು ಮಾಡಿಸಿಕೊಂಡನೆಂದು ತಿಳಿದು ಬರುತ್ತದೆ. ಅದರ ಸ್ಮಾರಕವಾಗಿ

ಆನೆಯ ಮೇಲೆ ಸವಾರಿ ಮಾಡುತ್ತಿರುವ ಚಿತ್ರವನ್ನು ಶಿಲೆಯ ಮೇಲೆ ಕೆತ್ತಿಸಲಾಯಿತು. ಈತನ ಆಳ್ವಿಕೆಯಲ್ಲಿ ಜಿಗಳಿಕಟ್ಟೆ, ವಿರೂಪಾಕ್ಷಪುರ, ವಿಜಯಪುರ, ನಾಗಲಾಪುರ, ಹಂದಿಗನೂರು ಗ್ರಾಮಗಳನ್ನು ಒಂದುಗೂಡಿಸಿ ಹೊಸಪೇಟೆಯನ್ನಾಗಿ ಮಾಡಲಾಯಿತೆಂದು ಹೇಳಲಾಗಿದೆ[೧೨೦].

**ಹಾಲಘಟ್ಟ ಯುದ್ಧ**

ಹಾಲಘಟ್ಟನಾಯಕನ ವಶದಲ್ಲಿದ್ದ ಹಾಲಘಟ್ಟಕೋಟೆಯನ್ನು ಸೋಮಶೇಖರನಾಯಕನು ಮುಟ್ಟುವುದಕ್ಕೆ ಪ್ರಮುಖ ಕಾರಣ ತುಂಬಿದ ಸಭೆಯಲ್ಲಿ ಹಾಲಘಟ್ಟನಾಯಕನು ಸೋಮಶೇಖರನಾಯಕನನ್ನು ವಿನಾಕಾರಣ ಅವಮಾನ ಮಾಡಿ ಧಿಕ್ಕರಿಸಿದ್ದು. ಇದು ಚಿತ್ರದುರ್ಗದ ನಾಯಕರ ಕುಹಕತನದಿಂದ ಇರಬೇಕೆಂದು ಭಾವಿಸಿ ನಾಯಕನು ದಂಡೆತ್ತಿ ಹೋದನು. ಆದರೆ ಆ ಕೋಟೆಯ ಅಧಿದೇವತೆ ದುರ್ಗಿಯು ಸ್ವಪ್ನದಲ್ಲಿ ಬಂದು 'ರಾಯನೆ ನೀನು ನಿನ್ನ ಪ್ರಾಣ ಸ್ನೇಹಿತರಲ್ಲಿ ಒಬ್ಬರನ್ನು ಬಲಿಕೊಟ್ಟರೆ ಮಾತ್ರ ಕೋಟೆಯನ್ನು ನಿನಗೆ ಸ್ವಾಧೀನ ಮಾಡುವೆನೆಂದು ನುಡಿದಳಂತೆ[೧೨೧]. ಪರಿಣಾಮವಾಗಿ ತನ್ನ ಪ್ರಾಣಸ್ನೇಹಿತರಾದ ಸಂಜೀವ ನಾಯಕ ಮತ್ತು ಕೆಂಚನಾಯಕರನ್ನು ಹರಪನಹಳ್ಳಿಯನ್ನು ಕಾಯಲು ಬಿಟ್ಟು ತಾನು ಬೃಹತ್ ಸೈನ್ಯದೊಂದಿಗೆ ಹೊರಟನು. ಆದರೆ ಸೋಮಶೇಖರನಾಯಕನಿಗೆ ಜಯವಾಗದೇ ಉಚ್ಚಂಗಿದುರ್ಗಕ್ಕೆ ಹಿಂದಿರುಗಿದನು. ಈ ಸುದ್ದಿಯನ್ನು ಕೇಳಿದ ಶೂರ ಕೆಂಚಪ್ಪನಾಯಕ ತನ್ನ ಸೈನ್ಯವನ್ನು ತೆಗೆದುಕೊಂಡು ಹರಿಹರದ ಮಾರ್ಗವಾಗಿ ಹೋಗಿ ಹಾಲಘಟ್ಟಕೋಟೆಯನ್ನು ವಶಪಡಿಸಿಕೊಂಡನು. ಕೋಟೆಯ ಮೇಲೆ ಹರಪನಹಳ್ಳಿ ಪತಾಕೆ ಚಿಹ್ನೆಯಾದ ಹನುಮಧ್ವಜವನ್ನು ಏರಿಸಿ ಕೋಟೆಯ ಮುಂಭಾಗದಿಂದ ಇಳಿದು ಬರುತ್ತಿದ್ದಾಗ ವಿಜಯದ ಆನಂದದಲ್ಲಿ ದಳವಾಯಿಯು ಎಸೆದ ಈಟಿಯು ಕೆಂಚಪ್ಪನಾಯಕನಿಗೆ ತಗುಲಿ ಸತ್ತನು. ಅಸ್ಲಾಡಿ ಜೋಗನೂ ಸಹ ಹರಪನಹಳ್ಳಿಯ ಗಡಿಯ ಪ್ರದೇಶದಲ್ಲಿ ಪ್ರಾಣವನ್ನು ತ್ಯಜಿಸಿದನು. ಹರಪನಹಳ್ಳಿಗೆ ಆಗಮಿಸಿದ ಸೋಮಶೇಖರನಾಯಕನು ತನಗಾಗಿ ಪ್ರಾಣವನ್ನು ಅರ್ಪಿಸಿದ ಮಿತ್ರ ದಳವಾಯಿ ಕೆಂಚಪ್ಪನಾಯಕನ ಖಡ್ಗವನ್ನು ಮೆರವಣಿಗೆ ಮಾಡಿಸಿ ಕೆಂಚನಾಯಕನ ಶರೀರವನ್ನು ಅಯ್ಯನಕೆರೆ ದಂಡೆಯ ಮೇಲೆ ಕಾಳಮ್ಮನ ಗುಡಿಯ ಹಿಂದೆ ಅವನ ವೀರಪತ್ನಿ ಶರೀರ ಸಹಿತ ಆತನ ಜೊತೆಯಲ್ಲಿಯೇ ಹೂತು ಎರಡು ವೀರಗಲ್ಲುಗಳನ್ನು ನೆಟ್ಟನು. ಇದು ಹಾಲಘಟ್ಟ ಯುದ್ಧವೆಂದು ಪ್ರಸಿದ್ಧಿಯಾಯಿತು[೧೨೨]. ಈ ವೀರಗಲ್ಲುಗಳು ಈಗ ಕಾಣಸಿಗುವುದಿಲ್ಲ.

**ಕೂಲಹಳ್ಳಿ ಯುದ್ಧ**

ಹರಪನಹಳ್ಳಿ ಕೋಟೆಯ ಪಕ್ಕದಲ್ಲಿರುವ ಹಿರೇಕೆರೆಯ ಪೂರ್ವದಿಕ್ಕಿನ ಕೋಡಿಯಿಂದ ಬೇಡರಕೇರಿಯ ಪ್ರದೇಶದಲ್ಲಿರುವ ಬೈಲಿಗೆ 'ಕೂಲಹಳ್ಳಿ ಬೈಲು/ಬಯಲು' ಎಂದು ಕರೆಯಲಾಗಿದೆ. ಕೆಲವರ ಮಾತಿಗೆ ಕಟ್ಟುಬಿದ್ದ ಸೋಮಶೇಖರನಾಯಕ ಕೂಲಹಳ್ಳಿ ಗೋಣಿಬಸಪ್ಪನ ಮಠವನ್ನು ನಿರ್ಮಿಸಲು ತೀರ್ಮಾನಿಸಿ ಮಠವನ್ನು ನಿರ್ಮಿಸಿದನು. ಇದರಲ್ಲಿ ಜಂಗಮರು, ಯುದ್ಧವೀರರು

ಸೇರಿಕೊಂಡರು. ಆದರೆ ಚಿತ್ರದುರ್ಗದ ಸೈನಿಕರು ಜಂಗಮರ ವೇಷದಲ್ಲಿ ಪರಿಚಾರಕರಾಗಿ ಮಠದಲ್ಲಿ ಸೇರಿಕೊಂಡಿದ್ದರು. ಸಂಜೀವನಾಯಕನು ಗುಡಿಸಲಿನಲ್ಲಿ ವಾಸ ಮಾಡುತ್ತಾ ಜಂಗಮರ ಮೇಲೆ ಗೂಢಚಾರಿಕೆಯನ್ನು ಮಾಡುತ್ತಿದ್ದನು. ಸೋಮಶೇಖರನ ರಾಣಿ ಬಸಮ್ಮಾಜಿಯು ರಾಜ್ಯದ ಕಲಾಪಗಳನ್ನು ವೀಕ್ಷಿಸುತ್ತಿದ್ದಳು.

ಒಂದು ದಿನ ಸಂಜೀವನಾಯಕನು ಬೇಟೆಗೆ ಹೋಗಿ ಸಂಜೆ ಮರಳಿ ಬೇಗ ಬರಲಿಲ್ಲ. ಈ ಸಮಯವನ್ನು ಉಪಯೋಗಿಸಿಕೊಂಡು ಮುಂಚಿತವಾಗಿಯೇ ಬಂದು 'ಕಲ್ಲಾಗಿನ ದುರುಗವ್ವ'ನ ಗುಡಿಯ ತಗ್ಗು ಪ್ರದೇಶಗಳಲ್ಲಿ ಅಡಗಿದ್ದ ಚಿತ್ರದುರ್ಗ ನಾಯಕರ ಸೈನ್ಯವು ಮಿಂಚಿನ ವೇಗದಲ್ಲಿ ಕೂಲಹಳ್ಳಿ ಬೈಲಿಗೆ ಬಂದು ಮಠದ ಹಿಂಭಾಗದಲ್ಲಿ ಕತ್ತಲಿನಲ್ಲಿ ಅಡಗಿಕೊಂಡು ಗಲಭೆಯನ್ನು ಎಬ್ಬಿಸಿದರು. ಆಗ ಸಂಜೀವನಾಯಕನ ಹೆಂಡತಿ ಗಂಡುಗಚ್ಚೆಯನ್ನು ಹಾಕಿ ತನ್ನ ಗೆಳತಿಯರೊಂದಿಗೆ ಹೋರಾಡಿ ಮೃತಳಾದಳು. ಅದೇ ಸಮಯಕ್ಕೆ ಬೇಟೆಯಿಂದ ಹಿಂದಿರುಗಿದ ಸಂಜೀವನಾಯಕ ತನ್ನ ಸೈನ್ಯದ ಸಹಾಯದಿಂದ ಶತ್ರು ಸೈನ್ಯವನ್ನು ಎದುರಿಸಿ ಹಿಮ್ಮೆಟ್ಟಿಸಿದನು. ಸೋಮಶೇಖರನಾಯಕ ಆ ಜಾಗದಲ್ಲಿ ವೀರರ ಶಿಲಾಪ್ರತಿಮೆಯನ್ನು ಯುದ್ಧದ ಜಯಸ್ಮಾರಕವಾಗಿ ಸ್ಥಾಪಿಸಿದನು. ಇದು 'ಕೂಲಹಳ್ಳಿಯುದ್ಧ'ವೆಂದು ಹೆಸರಾಗಿದೆ[೧೨೩]. ಈ ಕೂಲಹಳ್ಳಿ ಬಯಲು ಈಗಲೂ ಇದೆ.

ಆನಂತರ ಹರಪನಹಳ್ಳಿಯ ರಾಜ್ಯದ ಮೇಲೆ ಯುದ್ಧ ಮಾಡುವವರೇ ಇಲ್ಲದಂತಾಗಿ ಸುಮಾರು ಹತ್ತು-ಹನ್ನೆರಡು ವರ್ಷಗಳ ಕಾಲ ಸಾಮ್ರಾಜ್ಯದಲ್ಲಿ ಶಾಂತಿ, ನೆಮ್ಮದಿ ಇತ್ತೆಂದು ತಿಳಿದು ಬರುತ್ತದೆ. ಒಂದನೆಯ ಸೋಮಶೇಖರನಾಯಕ ಹರಪನಹಳ್ಳಿ ಸಂಸ್ಥಾನದ ಪ್ರಖ್ಯಾತ ಅರಸನಾಗಿ ಏನೆಲ್ಲಾ ಸಾಧನೆಗಳನ್ನು ಮಾಡಿದರೂ ನೋವಿನಿಂದ ಹೊರತಾಗಿರಲಿಲ್ಲ.

ಇವರಿಗೆ ಜಂಬಣ್ಣನೆಂಬ ಮಗನಿದ್ದು ಪುಟ್ಟರಸ ಎಂದು ಕರೆಯಲಾಗುತ್ತಿತ್ತು. ತಂದೆಯಂತೆ ಪುಟ್ಟರಸನು ಯುದ್ಧ ವೀರನಾಗಿದ್ದು ಕೆಲವು ಯುದ್ಧಗಳಲ್ಲಿ ತಂದೆಯೊಂದಿಗೆ ಭಾಗವಹಿಸಿ ಜಯ ತಂದು ನಾಡಿಗೆ ಕೀರ್ತಿ ತಂದಿದ್ದ. ಬಾಲ್ಯವಿವಾಹಕ್ಕೆ ಒಳಗಾದ ಜಂಬಣ್ಣ ರೇವಕ್ಕ ಎಂಬ ಸುಂದರ ಕನ್ಯೆಯನ್ನು ವಿವಾಹವಾದನು. ಆದರೆ ಸ್ವಲ್ಪ ಕಾಲ ಮಾತ್ರ ದಾಂಪತ್ಯ ಜೀವನ ನಡೆಸಿ ಹದಿನೆಂಟನೆಯ ವಯಸ್ಸಿನಲ್ಲಿ ಕರಿಮೈಲಿ ಬೇನೆಗೆ ತುತ್ತಾಗಿ ಮರಣ ಹೊಂದಿದನು. ಈತನ ಸಮಾಧಿಯನ್ನು ಅರಸೀಕೆರೆ ಗ್ರಾಮದ ಕೆರೆ ಏರಿ ಮೇಲೆ ನೋಡಬಹುದು. ಈ ಅಘಾತದಿಂದ ಚೇತರಿಸಿಕೊಳ್ಳದ ಸೋಮಶೇಖರನಾಯಕ ಕ್ರಿ.ಶ.೧೭೬೬ರಲ್ಲಿ ಮರಣ ಹೊಂದಿದನು[೧೨೪]. ಹರಪನಹಳ್ಳಿಗೆ ಅಧಿಕಾರಕ್ಕೆ ಪಟ್ಟದರಸಿ ಸೋಮಮ್ಮಾಜಿ ಪತಿಯ ಹತ್ತಿರದ ಸಂಬಂಧಿಯ ಮಗನಾದ ಅಡವಿ ಬೊಮ್ಮಣ್ಣನನ್ನು ದತ್ತು ತೆಗೆದುಕೊಂಡು ಅವನಿಗೆ ವೀರಬಸಪ್ಪ ಎಂದು ಹೆಸರಿಟ್ಟಳು. ಇವನೇ ಎರಡನೆಯ ವೀರಬಸಪ್ಪ.

**೨ನೇ ವೀರಬಸಪ್ಪನಾಯಕ**

ದತ್ತುಪುತ್ರ ಎರಡನೆಯ ವೀರಬಸಪ್ಪನಾಯಕನು ಹೆಚ್ಚು ಕಾಲ ಬದುಕಲಿಲ್ಲ. ಜೊತೆಗೆ ಅಸಮರ್ಥನೂ ಸುಖಲೋಲುಪನೂ ಆಗಿದ್ದರಿಂದ ಹೊಳಲು ಅಗ್ರಹಾರ ದಳವಾಯಿ ಬಸಪ್ಪನಾಯಕ ಬ್ರಾಹ್ಮಣರಿಗೆ ಹಿಂಸೆ ನೀಡ ತೊಡಗಿದನು. ಅಲ್ಲದೆ ಅರಸ ದುರ್ಬಲನಾದ ಸಮಯವನ್ನರಿತು ಮತ್ತೆ ದಂಗೆ ಎದ್ದನು. ಇದನ್ನು ಸಹಿಸದ ಸೋಮಮ್ಮಾಜಿ ತಾನೇ ಕುದುರೆಯೇರಿ ಬೃಹತ್ ಸೈನ್ಯದೊಂದಿಗೆ ಬಸಪ್ಪನಾಯಕನ ವಿರುದ್ಧ ದಂಡೆತ್ತಿ ಹೋಗಿ ದಳವಾಯಿಯನ್ನು ಸೋಲಿಸಿದಳು. ಇದರೊಂದಿಗೆ ವಿರೋಧಿಗಳು ದಂಗೆ ಎದ್ದು ಹರಪನಹಳ್ಳಿಯನ್ನು ಮಣ್ಣುಮುಕ್ಕಿಸುವ ಕನಸು ಭಗ್ನಗೊಂಡಿತು. ಇದಾದ ಕೆಲ ಸಮಯದ ನಂತರ ವೀರಬಸಪ್ಪನು ಮರಣ ಹೊಂದಿದನು. ಇವನಿಗೂ ಪುತ್ರ ಸಂತಾನವಿಲ್ಲದಿದ್ದರಿಂದ ಸೋಮಮ್ಮಾಜಿ ಗೊಡಚನಾಳು ಗ್ರಾಮದಿಂದ ಮತ್ತೊಬ್ಬನನ್ನು ದತ್ತು ತೆಗೆದುಕೊಂಡು ಬಸಪ್ಪನಾಯಕನೆಂದು ಹೆಸರಿಟ್ಟು ಪಟ್ಟ ಕಟ್ಟಿದಳು. ಎರಡನೆಯ ವೀರಬಸಪ್ಪನ ಕಾಲದಲ್ಲಿ ನಾರಾಯಣದೇವರಕೆರೆಯ ಜೋಯಿಸರಿಗೆ ಡಣಾಯಕನ ಕೆರೆಯ ಹಿಂದಿನ ಭೂಮಿಯನ್ನು ದಾನ ಕೊಟ್ಟ ವಿಷಯ ಹಾಗೂ ವೀರಭದ್ರೇಶ್ವರ ದೇವರ ಮೂರ್ತಿಯನ್ನು ಪ್ರತಿಷ್ಠಾಪಿಸಿದನೆಂದು ತಿಳಿದು ಬರುತ್ತದೆ[೧೨೫].

**ಬಸಪ್ಪನಾಯಕ**

ಶಾಸನಗಳಲ್ಲಿ ಈತನು ಬಾಗುಳಿ ಬಸಪ್ಪನಾಯಕ ಎಂದು ಕರೆದುಕೊಂಡಿದ್ದಾನೆ. ಮೊದಲನೆಯ ಸೋಮಶೇಖರ ನಾಯಕನಂತೆ ಊರಿನ ಹಿರಿಯರ ಮೇಲೆ ಗೌರವವುಳ್ಳವನೂ ಆಗಿದ್ದನು. ಸೋಮಶೇಖರ ನಾಯಕನಲ್ಲಿಯ ಶೌರ್ಯ ಸಾಹಸಗಳ ಗೌರವಾರ್ಥವಾಗಿ ತನ್ನನ್ನು 'ಸೋಮಶೇಖರನಾಯಕರ ಬಸಪ್ಪನಾಯಕ' ಎಂದೇ ಕರೆದುಕೊಂಡನು. ತನ್ನೆಲ್ಲಾ ದಾನ ಶಾಸನಗಳಲ್ಲಿ ಈ ಹೆಸರನ್ನೇ ಉಲ್ಲೇಖಿಸಿದ್ದಾನೆ. ಇವನಿಗೆ ಕಲಿಯುವ ಭೋಜ ಎಂಬ ಬಿರುದು ಇತ್ತು. ಟಿಪ್ಪುಸುಲ್ತಾನರಿಗೆ ವಿಧೇಯನಾಗಿದ್ದುಕೊಡು ರಾಜ್ಯವನ್ನು ಚೆನ್ನಾಗಿ ಆಳಿದನು. ಕ್ರಿ.ಶ.೧೭೭೩ರಲ್ಲಿ ಶ್ರೀಕೂಡ್ಲಿಶೃಂಗೇರಿ ಮಠದ ನರಸಿಂಹ ಭಾರತಿಸ್ವಾಮಿಗಳಿಗೆ ಸೋಮಲಾಪುರವನ್ನು ದಾನ ನೀಡಿ ತನ್ನ ವಶದಲ್ಲಿದ್ದ ಕುರುವತ್ತಿ ಕೆಂಚಣ್ಣ, ಕೊಟ್ರಣ್ಣ, ಹನುಮಣ್ಣರಿಗೆ ಪೇಟೆದ್ವಾರ ತಿಳಿಸುತ್ತಾ ಗ್ರಾಮಕ್ಕೆ ತೋರಣ ಕಟ್ಟಿಸಿಕೊಟ್ಟು ಹೇಳಿದ ಪ್ರಕಾರ ನಡೆದುಕೊಳ್ಳುವುದಾಗಿ ಒಂದು ಪತ್ರ ಕೊಟ್ಟಿದ್ದಾನೆ[೧೨೬].

ಇವನ ಆಳ್ವಿಕೆಯಲ್ಲಿ ಲಕ್ಷ್ಮೇಶ್ವರ ಕೋಟೆಯ ಮುತ್ತಿಗೆ ಗಮನಾರ್ಹವಾಗಿ ಸುಮಾರು ಮೂರು ಬಾರಿ ಮುತ್ತಿಗೆ ಹಾಕಿದನು. ಖಾನಪ್ಪಗೌಡ ಲಕ್ಷ್ಮೇಶ್ವರ ನಾಡನ್ನು ಆಳುತ್ತಿದ್ದನು. ಮೊದಲ ಮುತ್ತಿಗೆ ಹದಿನೈದು ದಿನಗಳ ಕಾಲ ನಡೆದು ಉಭಯ ಸೈನ್ಯಗಳಿಗೆ ಅಪಾರ ನಷ್ಟ ಉಂಟಾಗಿ ಬಸಪ್ಪನಾಯಕ ಸೋತು ಹಿಂದಿರುಗಿದನು. ನಂತರ ಆರು ತಿಂಗಳ ಬಳಿಕ ಎರಡನೆಯ ಬಾರಿಗೆ ಮುತ್ತಿಗೆ ಹಾಕಿ ಹಗಲು

ರಾತ್ರಿ ನಿರಂತರವಾಗಿ ಹತ್ತು ದಿನಗಳ ಕಾಲ ನಡೆದರೂ ಜಯ ಸಿಗದೆ ಮತ್ತೊಮ್ಮೆ ಬಸಪ್ಪನಾಯಕ ಹಿಂದಿರುಗಬೇಕಾಯಿತು. ಆಗ ಅವನಲ್ಲಿ ಆಹಾರದ ಕೊರತೆಯುಂಟಾಗಿತ್ತು. ನಂತರ ಮೂರು ತಿಂಗಳ ಬಳಿಕ ಮೂರನೆಯ ಬಾರಿಗೆ ಸಾಮಂತ ಅರಸ ವೀರನದುರ್ಗದ ರಾಮಯ್ಯನಾಯಕ ಮತ್ತು ಅವನ ಸೈನ್ಯದೊಂದಿಗೆ ಮುತ್ತಿಗೆ ಹಾಕಿ ಹತ್ತು ದಿನ ಹೋರಾಡಿ ಖಾನಪ್ಪಗೌಡನನ್ನು ಸೋಲಿಸಿ ಕೋಟೆಯನ್ನು ವಶಪಡಿಸಿಕೊಂಡನು. ಖಾನಪ್ಪಗೌಡ ಶಾಂತಿ ಒಪ್ಪಂದ ಮಾಡಿಕೊಂಡು ಬಸಪ್ಪನಾಯಕನಿಗೆ ಕಪ್ಪಕಾಣಿಕೆ ನೀಡಿ ಅತ್ಯಂತ ಗೌರವದಿಂದ ಕಳುಹಿಸಿದನು.

ಬಸಪ್ಪನಾಯಕನ ಶೌರ್ಯವೇ ಅವನಿಗೆ ಮೃತ್ಯುವಾಯಿತು. ಟಿಪ್ಪುಸುಲ್ತಾನನು ಕೊಪ್ಪಳದುರ್ಗನ್ನು ಮುತ್ತಿಗೆ ಹಾಕಿ ವಿಫಲನಾದಾಗ ಬಸಪ್ಪನಾಯಕ ಸೈನ್ಯ ಸಮೇತ ಹೋಗಿ ಕೊಪ್ಪಳದುರ್ಗವನ್ನು ಗೆದ್ದುಕೊಟ್ಟನು. ಆದರೆ ಇದರಿಂದ ಟಿಪ್ಪುಸುಲ್ತಾನನು ಸಂತೋಷಪಡದೆ ಮುಂದಿನ ದಿನಗಳಲ್ಲಿ ನನ್ನ ಪರಮಶತ್ರುವಾಗಬಹುದೆಂದು ಭಾವಿಸಿ ಅಸೂಯೆ ಜೊತೆಗೆ ಭಯಭೀತನಾಗಿ ಬಸಪ್ಪನಾಯಕನನ್ನು ಹಣಿಯುವ ಉಪಾಯವನ್ನು ಮಾಡಿದನು. ಆಗ ಕೊಪ್ಪಳದುರ್ಗವನ್ನು ಗೆದ್ದುಕೊಟ್ಟಿದ್ದಕ್ಕೆ ನಿನಗೆ ಪಾರಿತೋಷಕ ಕೊಡುವುದಾಗಿ ಕುತಂತ್ರದಿಂದ ಹಗರಿಬೊಮ್ಮನಹಳ್ಳಿಗೆ ಕರೆಯಿಸಿಕೊಂಡು ಬಸಪ್ಪನಾಯಕನ ಜೊತೆಗೆ ಅವನ ಬಂಧು ಬಳಗದವರನ್ನು ಸೆರೆ ಹಿಡಿದು ಕ್ರಿ.ಶ.೧೭೮೭ರಲ್ಲಿ ಕಬ್ಬಾಳದುರ್ಗದ ಸೆರೆ ಮನೆಗೆ ತಳ್ಳಿದನು. ನಂತರ ಬಸಪ್ಪನಾಯಕ ಮತ್ತು ಅವನ ಮೂರು ಜನ ಪತ್ನಿಯರನ್ನು ಶ್ರೀರಂಗಪಟ್ಟಣದ ಸೆರೆಮನೆಗೆ ಕಳುಹಿಸಿದನು. ಅಲ್ಲಿ ಐದು ವರ್ಷ ಕಳೆದು ಅಲ್ಲಿಯೇ ದೇಹತ್ಯಾಗ ಮಾಡಿದನು. ಈ ವಿಷಯವನ್ನು ತಿಳಿದ ಬಂಧು ಬಳಗದವರು ಹಾಗೂ ಜನತೆ ದುಃಖತಪ್ತರಾದರು[೧೨೭].

ಬಸಪ್ಪನಾಯಕನನ್ನು ಸೆರೆ ಹಿಡಿದ ನಂತರ ಟಿಪ್ಪುಸುಲ್ತಾನನು ಕೊಟ್ಟೂರು, ನಾರಾಯಣ ದೇವರಕೆರೆ, ಹರಪನಹಳ್ಳಿ, ಉಚ್ಚಂಗಿದುರ್ಗ ಮೊದಲಾದ ಆಯಕಟ್ಟಿನ ಸ್ಥಳಗಳಿಗೆ ಗುಪ್ತವಾಗಿ ಸೈನ್ಯ ಕಳುಹಿಸಿ ಒಂದೇ ದಿನ ಒಮ್ಮೆಲೆ ಮುತ್ತಿಗೆ ಹಾಕಿ ವಶಪಡಿಸಿಕೊಂಡಿದ್ದಲ್ಲದೇ ರಾಣಿ ವಾಸದವರ ಆಭರಣವನ್ನೆಲ್ಲಾ ದೋಚಿಕೊಂಡು ಹೋದನೆಂದು ಹೇಳಲಾಗಿದೆ. ಆದರೆ ಟಿಪ್ಪುಸುಲ್ತಾನನಿಗೆ ಕೂಡ್ಲಿಗಿ ತಾಲ್ಲೂಕಿನ ಹರಪನಹಳ್ಳಿ ರಾಜ್ಯದ ಗಡಿಯಾಗಿದ್ದ ವೀರನ ದುರ್ಗವನ್ನು ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹರಪನಹಳ್ಳಿ ಸಾಮಂತ ರಾಮಯ್ಯನಾಯಕನೊಂದಿಗೆ ಟಿಪ್ಪು ಐದು ದಿನಗಳ ಕಾಲ ಹಗಲಿರುಳು ಹೋರಾಡಿದರೂ ವೀರನದುರ್ಗ ವಶವಾಗದೆ ನಿರಾಸೆಯಿಂದ ಹಿಂದಿರುಗಿದನು. ಮತ್ತೆ ಟಿಪ್ಪು ಈ ಭಾಗಕ್ಕೆ ಬರಲಿಲ್ಲ[೧೨೮].

**೨ನೇ ಸೋಮಶೇಖರನಾಯಕ**

ಬಸಪ್ಪನಾಯಕನ ಅಣ್ಣ ಅಯ್ಯಪ್ಪನಾಯಕನ ಹಿರಿಯ ಪುತ್ರ ಹಾಗೂ ಬಸಪ್ಪನಾಯಕನ ದತ್ತು ಪುತ್ರನಾದ ಎರಡನೆಯ ಸೋಮಶೇಖರನಾಯಕನನ್ನು ಹಂಪರಸಪ್ಪನು ಕ್ರಿ.ಶ.೧೭೮೭ರಲ್ಲಿ ಪಟ್ಟಕ್ಕೆ ತಂದನು. ಆದರೆ ಇವನು ಅಪ್ರಾಪ್ತನಾಗಿದ್ದರಿಂದ ಅರಸೀಕೆರೆಯ ದಿವಾನ ಹಂಪರಸಪ್ಪನು ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಈತನು ಪಟ್ಟಕ್ಕೆ ಬಂದೊಡನೆಯೇ ಹೊಸಪೇಟೆ ತಾಲ್ಲೂಕಿಗೆ ಸೇರಿದ 'ಕುರದಗಡ್ಡೆ' ಎಂಬ ಗ್ರಾಮದಲ್ಲಿ ಕೋಟೆಯನ್ನು ಕಟ್ಟಿಸಿದನು[೧೨೯]. ಸೋಮಶೇಖರನಾಯಕ ಹದಿನಾರು ವರ್ಷದ ಬಾಲಕನಾಗಿದ್ದರಿಂದ ನೀಲಗುಂದದ ಗೌಡರು ತಮ್ಮ ಕನ್ಯೆಯನ್ನು ಕೊಟ್ಟು ವಿವಾಹ ಮಾಡಿ ಕೊಡಲು ಮುಂದಾದರು. ಆದರೆ ಇದು ಯೋಗ್ಯವಲ್ಲವೆಂದು ಭಾವಿಸಿದ ಹಂಪರಸಪ್ಪ ಗುಡೇಕೋಟೆ ಪಾಳೆಯಗಾರರ ಪುತ್ರಿಯರಾದ ಬಸಮ್ಮಾಜಿ ಮತ್ತು ನೀಲಮ್ಮಾಜಿಯರನ್ನು ತಂದು ವಿವಾಹ ಮಾಡಿದರೆ ಅರಮನೆಯ ಹೆಣ್ಣುಮಕ್ಕಳು ಜರೆಮಲಿ ಪಾಳೆಯಗಾರರ ಕನ್ಯೆಯರಾದ ಹಿರೇಬಸಮ್ಮಾಜಿ ಮತ್ತು ಸೋಮಮ್ಮಾಜಿಯರನ್ನು ತಂದು ವಿವಾಹ ಮಾಡಿದರು. ಈ ವೈವಾಹಿಕ ಸಂಬಂಧದ ಮೂಲಕ ಆಡಳಿತ ನಡೆಸಲು ಅನುಕೂಲವಾಯಿತು. ಆದರೆ ಅರಸ ನೀಲಗುಂದದ ಕನ್ಯೆಯ ಮೇಲೆ ವಿಪರೀತ ಪ್ರೀತಿಯನ್ನು ಇಟ್ಟುಕೊಂಡಿದ್ದನು. ಹೀಗಾಗಿ ಕೆಲವರು ಅರಸನ ಮನಸ್ಸು ಕೆಡಿಸಿ ರಾಜಪ್ರಮುಖರಿಗೆ ಶಿಕ್ಷೆಯಾಗುವಂತೆ ಮಾಡಿದರು. ಕೆಲವರು ಪಲಾಯನ ಮಾಡಿದರು. ಶೂರ ಚಿಂತಾಮಣಿಯಪ್ಪ, ರಾಯಸ್ತ ಉಪೇಂದ್ರಪ್ಪ ಮುಂತಾದವರು ಅರಸನ ಗಮನಕ್ಕೆ ಬಾರದೇ ಅಡಗಿದರು. ಕುರದಗಡ್ಡೆ ಕಿಲ್ಲೇದಾರ ಸಾಮಂತ ಭರಮಣ್ಣ, ಹಂಪರಸಪ್ಪರು ಮಾತ್ರ ಇರಲೇಬೇಕಾಗಿದ್ದರಿಂದ ಅರಮನೆಯಲ್ಲೇ ಉಳಿದುಕೊಂಡರು[೧೩೦].

ಟಿಪ್ಪು ಬಸಪ್ಪನಾಯಕನನ್ನು ಬಂಧನದಲ್ಲಿರಿಸಿದ್ದರಿಂದ ಭಯಭೀತಳಾದ ಸೋಮಮ್ಮಾಜಿ ಸೋಮಶೇಖರನನ್ನು ಕರೆದುಕೊಂಡು ಪೂನಾದ ಪೇಶ್ವೆಯವರಲ್ಲಿಗೆ ಹೋಗಿ ಕ್ರಿ.ಶ.೧೭೯೯ರಲ್ಲಿ ಟಿಪ್ಪು ಮಡಿದ ಬಳಿಕ ಹರಪನಹಳ್ಳಿಗೆ ಆಗಮಿಸಿದಳು. ಟಿಪ್ಪುವಿನ ಮರಣದ ನಂತರ ಹರಪನಹಳ್ಳಿ ಪ್ರಾಂತ್ಯದಲ್ಲಿ ಬ್ರಿಟೀಷ್ ಪ್ರಭಾವ ಹೆಚ್ಚಾಗಿ ಅರಾಜಕತೆ, ಅಸಮರ್ಥ ಅಡಳಿತದ ನೆಪವೊಡ್ಡಿ ಬ್ರಿಟೀಷ್ ಅಧಿಕಾರಿ ಜನರಲ್ ಹ್ಯಾರಿಸ್ ಮತ್ತು ದಿವಾನ್ ಪೂರ್ಣಯ್ಯನವರು ನಾಯಕನ ಮನವೊಲಿಸಿ ಹರಪನಹಳ್ಳಿ ಸಂಸ್ಥಾನವನ್ನು ಮಾನ್ಯ ಮಾಡುತ್ತೇನೆ. ಆದರೆ ನಾಯಕ ಈಗಿನಂತೆ ಸೈನ್ಯವನ್ನು ಇಟ್ಟುಕೊಂಡು ಹರಪನಹಳ್ಳಿ ಕೋಟೆಯಲ್ಲಿ ಇರಕೂಡದು. ಇದಕ್ಕೆ ಪ್ರತಿಯಾಗಿ ಬ್ರಿಟೀಷರು ಅರವತ್ತು ಸಾವಿರ (೬೦,೦೦೦)ರೂ ಜಾಗಿರು ಹಣವನ್ನು ಕೊಡುತ್ತೇವೆ ಎಂದು ಕರಾರು ಮಾಡಿದರು. ಆದರೆ ನಾಯಕ ಈ ಕರಾರನ್ನು ಒಪ್ಪಲಿಲ್ಲ. ಆಗ ದಿವಾನ ಬ್ರಿಟೀಷರ ಈ ಧೋರಣೆಗೆ ಸಮ್ಮತಿಸಿ ತನಗೆ ಪ್ರತ್ಯೇಕ ಪರಿಹಾರವನ್ನು ಕೊಡಬೇಕೆಂದು ಹೇಳಿದನು. ಇದರಿಂದ ನಾಯಕ ದಿವಾನನ ಮೇಲೆ ಕುಪಿತನಾದನು. ನಂತರ ಬ್ರಿಟೀಷರು ನಾಯಕ ಮತ್ತು ಹಂಪರಸಪ್ಪನನ್ನು ಕರೆದೊಯ್ದು ಶ್ರೀರಂಗಪಟ್ಟಣದ

ಸೆರೆಮನೆಯಲ್ಲಿಟ್ಟರು. ಅಲ್ಲಿ ನಾಯಕರು ಕೋಪಗೊಂಡು ದಿವಾನನ್ನು ಕೊಲ್ಲುವ ಪ್ರಯತ್ನ ನಡೆಸಿದನು. ಇದನ್ನು ಸೂಕ್ಷ್ಮವಾಗಿ ಅರಿತ ದಿವಾನ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿ ಬ್ರಿಟೀಷರ ಆಶ್ರಯ ಪಡೆದನು. ಮತ್ತು ಪರಿಹಾರ ಧನಕ್ಕಾಗಿ ಮನವಿ ಮಾಡಿದನು. ನಾಯಕನ ಈ ಒಳಸಂಚನ್ನು ತಿಳಿದ ಬ್ರಿಟೀಷರು ಹರಪನಹಳ್ಳಿ ಸಂಸ್ಥಾನವನ್ನು ಕ್ರಿ.ಶ.೧೮೦೨ರಲ್ಲಿ ಸ್ವಾಧೀನಪಡಿಸಿಕೊಂಡರು. ದಿವಾನನಿಗೆ ಹೊಸಪೇಟೆ ತಾಲ್ಲೂಕಿನ ಹೊಸಕೋಟೆ, ನಂದಿಬಂಡೆ, ಬೆನಕನಗುಡಿ ಮತ್ತು ಕಲ್ಲಹಳ್ಳಿ ಗ್ರಾಮಗಳನ್ನು ಜಹಗೀರಾಗಿ ನೀಡಿದರು. ನಾಯಕ ಮಾತ್ರ ಸೆರೆಮನೆಯಲ್ಲಿಯೇ ಕೊನೆಯವರೆಗೂ ಇದ್ದು ಕ್ರಿ.ಶ.೧೮೨೫ರಲ್ಲಿ ಕಾಲವಾದನು. ನಾಯಕ ಸೆರೆಮನೆಯಲ್ಲಿದ್ದಾಗ ರಾಣಿ ನೀಲಮ್ಮಾಜಿ ಆಡಳಿತ ನಡೆಸುತ್ತಿದ್ದಳು. ಆದರೆ ಬ್ರಿಟೀಷರು ಸ್ತ್ರೀ ಆಡಳಿತಕ್ಕೆ ಒಪ್ಪದೇ ಹರಪನಹಳ್ಳಿಯನ್ನು ಪೂರ್ಣ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ನೀಲಮ್ಮಾಜಿ ನೀಲಗುಂದ ಸೇರಿ ಅಲ್ಲಿಯೇ ಕೊನೆಯುಸಿರೆದಳು[೩೧].

ಹೀಗೆ ಹರಪನಹಳ್ಳಿ ಸಂಸ್ಥಾನ ಬ್ರಿಟೀಷರ ವಶಕ್ಕೆ ಸೇರಿ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಯಿತು. ನಂತರ ಕ್ರಿ.ಶ. ೧೯೯೭ರ ನೂತನ ಜಿಲ್ಲೆಗಳ ರಚನಾಕಾರ್ಯದಿಂದ ಇಂದು ದಾವಣಗೆರೆ ಜಿಲ್ಲೆಯಲ್ಲಿದ್ದು ಈ ವಂಶದ ನಾಯಕರು ಅಲ್ಲಲ್ಲಿ ಚದುರಿದ್ದು ಜೀವನ ನಡೆಸಿದ್ದಾರೆ. ಇವರ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ಸ್ಮಾರಕಗಳು ಹಾಕಿಸಿದ ಶಾಸನಗಳು ಹರಪನಹಳ್ಳಿ ಪರಿಸರದಲ್ಲಿ ಇಂದಿಗೂ ಕಂಡು ಬರುತ್ತವೆ. ೧೮೦೦ ರಿಂದ ಬ್ರಿಟೀಷರ ಪ್ರಭಾವಕ್ಕೆ ಒಳಗಾದ ಈ ಪ್ರದೇಶ ವಸಾಹತು ಕಾಲದ ಘಟನಾವಳಿಗಳಿಗೆ, ರಾಜಕೀಯ, ಆರ್ಥಿಕ ಬೆಳವಣಿಗೆಗಳಿಗೆ ಸಾಕ್ಷಿಯಾಯಿತು. ಹರಪನಹಳ್ಳಿ, ಗುಡಿಗುಡಾಳು, ಹ್ಯಾರಡ, ಮುಂತಾದೆಡೆ ವಸಾಹತು ಕಾಲಿನ ಪ್ರಭಾವದ ವಾಸ್ತುರಚನೆಗಳನ್ನು ನೋಡಬಹುದು.[೩೨]

**ರಾಜ್ಯ ವಿಸ್ತಾರ**

ಕ್ರಿ.ಶ. ೧೫೦೦-೧೮೦೦ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರು ದಾದೇನಾಯಕನಿಂದ ಸ್ಥಾಪನೆಗೊಂಡ ಈ ರಾಜ್ಯವನ್ನು ವಿಸ್ತರಿಸಿದರು. ಶಾಸನಗಳು, ಸ್ಮಾರಕಗಳು ಪ್ರಕಟಿತ ವರದಿಗಳು ಕ್ಷೇತ್ರಕಾರ್ಯ ಪರಿಶೀಲನೆಯಿಂದ ಈ ರಾಜ್ಯದ ವಿಸ್ತರಣೆಯಲ್ಲಿ ದಾದೇನಾಯಕ, ರಂಗಾನಾಯಕ, ವೀರ ಮುಮ್ಮಡಿ ನಾಯಕ, ರಾಣಿ ಹರಿಯಮ್ಮಾಜಿ, ಮುದಿಬಸಪ್ಪ ನಾಯಕ, ೧ನೇ ಸೋಮಶೇಖರ ನಾಯಕ, ಬಾಗುಳಿ ಬಸಪ್ಪ ನಾಯಕ ಪ್ರಮುಖ ಪಾತ್ರ ವಹಿಸಿದ್ದರೆಂದು ದೃಢಪಡುತ್ತದೆ. ಈ ಆಧಾರದ ಮೇಲೆ ಈ ರಾಜ್ಯವು ಪ್ರಧಾನವಾಗಿ ಇಂದಿನ ಹರಪನಹಳ್ಳಿಯನ್ನು ಕೇಂದ್ರೀಕರಿಸಿಕೊಂಡು ಹೂವಿನಹಡಗಲಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಜಗಳೂರು, ದಾವಣಗೆರೆ, ಹರಿಹರ, ರಾಣೇಬೆನ್ನೂರು ತಾಲೂಕುಗಳ ಪ್ರದೇಶಗಳಿಂದ ಸುತ್ತುವರೆದಿತ್ತು. ಹರಪನಹಳ್ಳಿಯಿಂದ ಉತ್ತರಕ್ಕೆ (ಉತ್ತರ ಈಶಾನ್ಯ) ಹಂಪಿ, ಹುಲಿಗಿ, ಹೊಸೂರು ಹೊಸಪೇಟೆ ಒಳಗೊಂಡತೆ ದಕ್ಷಿಣಕ್ಕೆ ಹಿರೇಮ್ಯಾಗಳಗೇರಿ, ಚಿಕ್ಕಮ್ಯಾಗಳಗೇರಿ, ಮಾಗಾನಹಳ್ಳಿ, ಅಣಜಿ, ರಾಮಘಟ್ಟ, ಗುಡಿಗುಡಾಳು,

ಉಚ್ಚಂಗಿಪುರ (ಹೊಸದುರ್ಗ), ಬಸವನಕೋಟೆ, ಪಶ್ಚಿಮದ ತುಂಗಾಭದ್ರಾ ನದಿ ದಂಡೆ, ಹೊಳಲು, ಮೈಲಾರ, ಕುರುವತ್ತಿ, ಮಾಗಳ, ಪೂರ್ವದ ಕೊಟ್ಟೂರು, ತೂಲಹಳ್ಳಿ, ಉಜ್ಜನಿ, ಶಿವಪುರ, ವೀರನದುರ್ಗದವರೆಗೆ ವಿಸ್ತರಿಸಿತ್ತು.

ಬಾಗಳಿ ಮೂಲ ರಾಜಧಾನಿಯಾಗಿ ನಂತರ ಉಚ್ಚಂಗಿದುರ್ಗ, ಹರಪನಹಳ್ಳಿ, ನಾರಾಯಣದೇವರಕೆರೆ ಇವರ ರಾಜಧಾನಿಗಳಾಗಿದ್ದವು. ತಂಬ್ರಹಳ್ಳಿ, ಕುರದಗಡ್ಡೆ, ವೀರನದುರ್ಗ, ಕುಂಚೂರು, ಹೊಳಲು, ಚಿಗಟೇರಿ, ಹಿರೇಮ್ಯಾಗಳಗೇರಿ, ಅರಸೀಕೆರೆ, ಹಂಪಾಪಟ್ಟಣ, ಮುಂತಾದವು ಇವರ ಸಾಮಾಂತಾಧಿಕಾರಿಗಳ ಆಡಳಿತ ಕೇಂದ್ರಗಳಾಗಿದ್ದವು.

## ಹರಪನಹಳ್ಳಿ ಪಾಳೆಯಗಾರರ ಶಾಸನೋಕ್ತ ವಂಶಾವಳಿ (ಕ್ರಿ.ಶ. ೧೫೦೦–೧೮೦೦)

| ಕ್ರ ಸಂ. | ಶಾಸನೋಕ್ತ ಪಾಳೆಯಗಾರರ ಹೆಸರುಗಳು | ಕಾಲ | ಶಾಸನ | ಮಾಹಿತಿ ಉಲ್ಲೇಖ |
|---|---|---|---|---|
| ೧ | ಮಾಚಿದೇವನ ಮಗ ವಾದಿನಾಯಕ | ಕ್ರಿ.ಶ. ೧೫೮೦ | ಕೊಟ್ಟೂರು | ಬಾಗುಳಿಯ ಕಾರ್ಯಕರ್ತ ಮಾಚಿದೇವನ ಮಗ ವಾದಿನಾಯಕ ಕೊಟ್ಟೂರು ಸೀಮೆಯ ಕುರುಬರಿಗೆ ಕುರಿದೆರಿಗೆ ಮುನ್ನಾ ಮಾಡಿದ ಉಲ್ಲೇಖ |
| ೨ | ಬಸವ/ಬಸಪ್ಪ ನಾಯಕ | ಕ್ರಿ.ಶ. ೧೭ನೇ ಶತಮಾನ | ಕೆ.ಕಲ್ಲಹಳ್ಳಿ<br>ಬನ್ನಿಕಲ್ಲು | ಖರ ಸಂವತ್ಸರ ಉಲ್ಲೇಖ<br>ತೆರಿಗೆ ಉಲ್ಲೇಖ |
| ೩ | ಬಾಗುಳಿ ಬಸಪ್ಪ | ಕ್ರಿ.ಶ. ೧೬೦೨ | ಪ್ರಸನ್ನ ವೆಂಕಟರಮಣ ದೇವಸ್ಥಾನ ಹರಪನಹಳ್ಳಿ | ಡಾ.ಎಂ. ಕೊಟ್ರೇಶ್ ರವರಿಂದ ಶೋಧಿತ ಅಪ್ರಕಟಿತ ಶಾಸನ ವರದಿ ದಿನಾಂಕ ೨೧–೯–೨೦೦೭, ವಿಜಯ ಕರ್ನಾಟಕ ದಿನ ಪತ್ರಿಕೆ |
| ೪ | ಮಾದಿನಾಯಕ | ಕ್ರಿ.ಶ. ೧೬೪೩ | ಹೊಸೂರು | ಹೊಸೂರಮ್ಮನಿಗೆ ದತ್ತಿ ನೀಡಿದ ವಿಚಾರ |
| ೫ | ಬಾಗುಳಿ ಓಬಯದೇವ ನಾಯಕನ ಕುಮಾರ ಮಹಾನಾಯಕಾಚಾರ್ಯ ಬಸವಯ್ಯ ನಾಯಕ | ಕ್ರಿ.ಶ. ೧೬೪೪ | ಮೈದೂರು | ಕಲ್ಲಿನ ದೋಣಿ ನಿರ್ಮಾಣ ವಿಚಾರ |
| ೬ | ಮುಮ್ಮಡಿ ಬಸಪ್ಪ ನಾಯಕ<br>(ಕ್ರಿ.ಶ. ೧೬೫೩–೧೭೧೨) | ಕ್ರಿ.ಶ. ೧೬೫೩<br>ಕ್ರಿ.ಶ. ೧೭೦೯<br>ಕ್ರಿ.ಶ. ೧೭೧೨ | ಉಚ್ಚಂಗಿದುರ್ಗ ಗಂಟೆ ಶಾಸನ<br>ದಾನಶಾಸನ ನಿರೂಪ<br>ಉಜ್ಜನಿ ಗಂಟೆ ಶಾಸನ | ವಿಕ್ರಮ ಸಂವತ್ಸರ ಉಲ್ಲೇಖ<br>ಮುಮ್ಮಡಿ ಬಸಪ್ಪ ನಾಯಕನ ವಂಶಾವಳಿ<br>ಗಂಟೆಯ ತೂಕ ಉಲ್ಲೇಖ<br>ಚಿಗಟೇರಿ ಶಿವನಪ್ಪ ಉಲ್ಲೇಖ |
| ೭ | ಬಾಗುಳಿ ಬಸಪ್ಪನಾಯಕ<br>(ಕ್ರಿ.ಶ. ೧೬೬೦–೧೭೫೬) | ಕ್ರಿ.ಶ. ೧೬೬೦<br>ಕ್ರಿ.ಶ. ೧೬೬೧<br>ಕ್ರಿ.ಶ. ೧೭೧೮<br>ಕ್ರಿ.ಶ. ೧೭೨೨<br>ಕ್ರಿ.ಶ. ೧೭೨೯<br>ಕ್ರಿ.ಶ. ೧೭೪೯<br>ಕ್ರಿ.ಶ. ೧೭೫೬ | ಕಸವನಹಳ್ಳಿ<br>ಅರಸೀಕೆರೆ<br>ಹ್ಯಾರಡ<br>ಮೈದೂರು<br>ನಿಚ್ಚವ್ವನಹಳ್ಳಿ<br>ನಿರೂಪ<br>ದೊಡ್ಡ ಗೋವಿಂದನಹಳ್ಳಿ | ಪುರವರ್ಗದವರು ಅರಮನೆ ಜೀರ್ಣೋದ್ಧಾರ ಉಲ್ಲೇಖ<br>ರಾವುತ ಗಿರಿಮಲ್ಲಯ್ಯನ ಮಗ ಬಸವಯ್ಯನಿಗೆ ಭೂದಾನ<br>ಬಾಗುಳಿ ಬಸಪ್ಪನಾಯಕ ಆದೇಶದಂತೆ ಸೋಗೆಯ ರಾಜ್ಯಕ್ಕೆ ಉತ್ತಮ ಆದಾಯ ಬರುವಂತೆ ಮಾಡಿದ ರಾಜಮಾನ್ಯ ಸುಬೇದಾರ ರಂಗಪ್ಪನಿಗೆ ಗಡಿನಿಚಾಮರ ಗ್ರಾಮವನ್ನು ದತ್ತಿ ನೀಡಿದ ಉಲ್ಲೇಖ ದಾನ<br>ಪುರೋಹಿತರಿಗೆ ಮಲ್ಲಾಪುರ ಗ್ರಾಮದ ಹೊಲದ ದಾನ<br>ಮುಮ್ಮಡಿ ಬಸಪ್ಪ ನಾಯಕನ ಉಲ್ಲೇಖ ಹುಲಿಗಿಕೋಟೆ ಮುತ್ತಿಗೆ ವಶ |

| ೮ | ೧ನೇ ಬಸವಂತನಾಯಕ (ಶ್ರೀಕರ ಬಸಪ್ಪ ನಾಯಕ) | ಕ್ರಿ.ಶ. ೧೭೯೧ | ಚಿಕ್ಕಕೆರೆಯಾಗಿನಹಳ್ಳಿ ಕುಂಬಾಸ | ಬಾಗುಳಿ ಸಂಸ್ಥಾನದ ಉಳವಿಗಾಗಿ ಆಂಜನೇಯ ದೇವರಿಗೆ ಬಿನ್ನಹ ಪ್ರಾರ್ಥನೆ |
|---|---|---|---|---|
| ೯ | ರಾಣಿ ಹರಿಯಮ್ಮಾಜಿನಾಗತಿ | ಕ್ರಿ.ಶ. ೧೭೧೦ | ಭೂದಾನ ನಿರೂಪ (ಗೋವಿಂದಾಚಾರ್ಯ) | ಕ್ರಿ.ಶ. ೧೭೧೦ ಬನ್ನಿಕಲ್ಲು ಶಾಸನದಲ್ಲಿ ಬಾಗುಳಿ ತಿಮ್ಮಂಮಾಜಿ ಎಂಬ ಉಲ್ಲೇಖವಿದೆ |
| ೧೦ | ಬಸವಂತರಾಯ | ಕ್ರಿ.ಶ. ೧೭೧೮ | ಹಿರೇಮ್ಯಾಗಳಗೇರಿ | ಬಸವಂತರಾಯರ ಕಾರ್ಯಕರ್ತನಾದ ಮೇಗಣಗೇರಿಯ ಸ್ಥಾನಿಕ ಬಾಬಾನಾಯಕನ ಉಲ್ಲೇಖ |
| ೧೧ | ಬಾಗುಳಿ ವೀರಬಸಪ್ಪ ನಾಯಕ | ಕ್ರಿ.ಶ. ೧೭೪೧ | ಭೂದಾನ ಪಟ್ಟೇದ | ಬಿದುರಳ್ಳಿ ಕೋಟೆ ಮುತ್ತಿಗೆ |
| ೧೨ | ಸೋಮಶೇಖರ ನಾಯಕ | ಕ್ರಿ.ಶ. ೧೭೬೧<br>ಕ್ರಿ.ಶ. ೧೭೬೪<br>ಕ್ರಿ.ಶ. ೧೭೬೫<br>ಕ್ರಿ.ಶ. ೧೭೬೬ | ಗ್ರಾಮದ ಪಟ್ಟೇದ<br>ದಾನ ನಿರೂಪ<br>ಮುತ್ತಿಗಿ<br>ದಾನ ನಿರೂಪ | ಬಾಗುಳಿ ಬಸಪ್ಪ ನಾಯಕರ ಸೋಮಶೇಖರ ನಾಯಕ ಎಂದು ಉಲ್ಲೇಖ. ನಿಲುವಂಜಿ ಗ್ರಾಮದ ದತ್ತಿ ನೀಡಿದ ಉಲ್ಲೇಖ. ಕೂಡ್ಲಿ ಶೃಂಗೇರಿಮಠದ ನರಸಿಂಹ ಭಾರತಿ ಶ್ರೀಗಳಿಗೆ ಉಂಬಳಿ ನೀಡಿದ ಉಲ್ಲೇಖ |
| ೧೩ | ಬಸಪ್ಪ ನಾಯಕ | ಕ್ರಿ.ಶ. ೧೭೭೮<br>ಕ್ರಿ.ಶ.೧೭೮೧<br>ಕ್ರಿ.ಶ.೧೭೮೩<br>ಕ್ರಿ.ಶ. ೧೭೯೨ | ಭೂದಾನ ನಿರೂಪಗಳು | ಬಾಗುಳಿ ಸೋಮಶೇಖರ ನಾಯಕರ ಬಸಪ್ಪ ನಾಯಕ ಅಯ್ಯನವರು ಎಂದು ಉಲ್ಲೇಖ. |
| ೧೪ | ಬಾಗುಳಿ ಸೋಮಶೇಖರ ನಾಯಕರ ಬಸವಪ್ಪ | ಕ್ರಿ.ಶ.೧೮೫೦ | ಹ್ಯಾರಡ | ಬಾಗುಳಿ ಸೋಮಶೇಖರ ನಾಯಕರ ಬಸವಪ್ಪ ಹಾಲಪ್ಪ ಗುರುಗಳಿಗೆ ಭೂದಾನ ನೀಡಿದ ಉಲ್ಲೇಖ. |

ಹರಪನಹಳ್ಳಿ ಪಾಳೆಯಗಾರರ ಬಿರುದುಗಳು: ಬಾಗುಳಿ ಭೂಪರು ಶ್ರೀಮನ್ ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವ ನಾಯಕರ ಗಂಡ ಮರೆಹೊಕ್ಕವರ ಕಾಯ್ವ ಮಾರಂತರ ಗೆಲ್ಲುವ ಬಾಗುಳಿ ಬಸಪ್ಪನಾಯಕ ಕಲಿಯುಗ ಭೋಜ

## ಹರಪನಹಳ್ಳಿ ಪಾಳೆಯಗಾರರ ವಂಶಾವಳಿ ೧ : ಕ್ರಿ.ಶ. ೧೫೬೫– ೧೭೯೯ ಒಟ್ಟು ಆಳ್ವಿಕೆ ಕಾಲಾವಧಿ ೨೩೪ ವರ್ಷಗಳು

| ಕ್ರ ಸಂ. | ಪಾಳೇಗಾರರ ಹೆಸರು | ಕಾಲಾವಧಿ | ರಾಣಿಯರು | ಸಹೋದರರು/ ಮಕ್ಕಳು | ರಾಜಧಾನಿ ಕೇಂದ್ರ | ಇತರ ಮಾಹಿತಿ |
|---|---|---|---|---|---|---|
| ೧ | ದಾದೇನಾಯಕ | ಕ್ರಿ.ಶ.೧೫೬೫–೧೫೯೨ ೨೭ ವರ್ಷಗಳು | ಹೊನ್ನಾನಾಗತಿ –ಚಿತ್ರದುರ್ಗ ಜಂಪಾನಾಗತಿ – ಜರಿಮಲೆ ಭರ್ಮನಾಗತಿ – ಗುಡಿಕೋಟೆ ಹನುಮನಾಗತಿ – ತರಿಕೆರೆ | ರಂಗಣ್ಣನಾಯಕ ತಮ್ಮಯ್ಯ ನಾಯಕ ಓಬಣ್ಣನಾಯಕ | ಬಾಗಳಿ ಉಚ್ಚಂಗಿದುರ್ಗ ಹರಪನಹಳ್ಳಿ | ಬಂಡ್ರಿ ಕೋಟೆಯ ಒಳಭಾಗದಲ್ಲಿ ಈತನ ಗುಡಿ ಇದೆ. ಈತನ ಹೆಸರಿನಲ್ಲಿ ಗ್ರಾಮಗಳ ನಿರ್ಮಾಣ. ದಾದಾಪುರ, ಹರಪನಹಳ್ಳಿ ಕೋಟೆ ನಿರ್ಮಾಣ. |
| ೨ | ಮಗ ರಂಗಣ್ಣ ನಾಯಕ (ಜಂಪಾನಾಗತಿ-ತಾಯಿ) | ಕ್ರಿ.ಶ. ೧೫೯೨–೧೬೧೬ ೨೪ ವರ್ಷಗಳು | | | ಕೊಟ್ಟೂರು ವರೆಗೆ ರಾಜ್ಯ ವಿಸ್ತರಣೆ | ಕೊಟ್ಟೂರು ಶ್ರೀ ಗುರುಬಸವ ರಾಜೇಂದ್ರರ ಪರಮಭಕ್ತ ಮಹಾದ್ವಾರ ನಿರ್ಮಾಣ |
| ೩ | ಮಗ ಭರಮಣ್ಣ ನಾಯಕ | ಕ್ರಿ.ಶ. ೧೬೧೬–೧೬೫೦ ೩೪ ವರ್ಷಗಳು | | ಹೊಂಬಣ್ಣ ನಾಯಕ (ಓಬಣ್ಣನಾಯಕ) ವೀರಮುಮ್ಮಡಿ ನಾಯಕ | | ಕೂಡ್ಲಿಗಿ ತಾ॥ ಹನಸಿ ಕೋಟೆ ಮುತ್ತಿಗೆ ವಶ |
| ೪ | ಮಗ ಓಬಣ್ಣ ನಾಯಕ/ ಹೊಂಬಣ್ಣ ನಾಯಕ | ಕ್ರಿ.ಶ.೧೬೫೦–೧೬೫೫ ೦೫ ವರ್ಷಗಳು | ಪುತ್ರ ಸಂತಾನ ಇಲ್ಲ | ವೀರಮುಮ್ಮಡಿ ನಾಯಕ (ಸಹೋದರ) | | ಮೃಗಗಳ ಬೇಟೆಯಲ್ಲಿ ಆಸಕ್ತಿ ಈತನ ಹೆಸರಿನಲ್ಲಿ ಅನೇಕ ಗ್ರಾಮಗಳ ನಿರ್ಮಾಣ ಓಬಳಾಪುರ |
| ೫ | ಸಹೋದರ ವೀರಮುಮ್ಮಡಿ ನಾಯಕ (ಬಸವಂತ ನಾಯಕ ಎಂದೂ ಪರಿಚಿತ) | ಕ್ರಿ.ಶ. ೧೬೫೫–೧೬೬೭ ೧೨ ವರ್ಷಗಳು | ದಾದೇನಾಯಕನ ಸಂತತಿ ಕೊನೆಗೊಂಡಿತು. | | ಕೂಡ್ಲಿಗಿ ತಾ॥ ಬೆಳ್ಳಾಡು ಕೋಟೆ ವಶ ನಾರಾಯಣದೇವರಕೆರೆ (ರಾಜಧಾನಿ) | ಗರಡಿ ಮನೆ, ಕುಸ್ತಿ, ಸೈನ್ಯ ತರಬೇತಿ ಆದ್ಯತೆ ರಾಜ್ಯ ವಿಸ್ತರಣಾ ಸಮಯದಲ್ಲಿ ವೀರನದುರ್ಗದವರೆಗೆ ಮುನ್ನಡೆದು ಕೋಟೆ ಕಟ್ಟಿಸಿದನೆಂದು ಡಾ. ಎಸ್.ವೈ. ಸೋಮಶೇಖರ್ ಅಭಿಪ್ರಾಯ ಪಡುತ್ತಾರೆ. ಜರಿಮಲೆ ಪಾಳೆಗಾರ ನಿರ್ಮಿತ ಈ ಕೋಟೆಯನ್ನು ಹರಪನಹಳ್ಳಿಯವರು ವಶಪಡಿಸಿಕೊಂಡರು. |

| ೬ | ಮುಮ್ಮಡಿ ನಾಯಕ (ಚೊಕ್ಕಪ್ಪ) (ದಾದೇನಾಯಕನ ಸಹೋದರ ಓಬಣ್ಣ ನಾಯಕನ ಮಗ) | ಕ್ರಿಶ ೧೬೬೭-೧೬೮೭ ೨೦ ವರ್ಷಗಳು | | ಗೋಣೆಪ್ಪ (ಸಹೋದರ) ದುರ್ಗಣ್ಣ (ಸಹೋದರ) | ನಾರಾಯಣ ದೇವರಕೆರೆ (ರಾಜಧಾನಿ) | ಸಮರ್ಥ ಅರಸ, ಸಂಸ್ಥಾನದ ೫೪೬೦ ಹಳ್ಳಿಗಳಿಂದ ೮ ಲಕ್ಷ ವರಹ ಆದಾಯ |
|---|---|---|---|---|---|---|
| ೭ | ೧ನೇ ಬಸವಂತ ನಾಯಕ (ದುರ್ಗಣ್ಣ) (ಕೊಟ್ರಬಸವನಾಯಕ) (ಶ್ರೀಕರ ಬಸಪ್ಪ ನಾಯಕ) ಎಂಬ ಹೆಸರುಗಳಿವೆ | ಕ್ರಿಶ ೧೬೮೭-೧೭೦೫ ೧೮ ವರ್ಷಗಳು ಹರಪನಹಳ್ಳಿಯ ಪ್ರಸನ್ನ ವೆಂಕಟರಮಣ ದೇವಾಲಯಕ್ಕೆ ದಾನ-ದತ್ತಿ ನೀಡಿದನು. | ದಾನವ್ವ ನಾಗತಿ ಧರ್ಮವ್ವ ನಾಗತಿ | ಚಿಗಟೇರಿ ಶಿವನಪ್ಪ ನಾಯಕ (ಸಾಮಾಂತಾಧಿಕಾರಿ) | 132003 | ಲಿಂಗಾಯಿತ ಧರ್ಮ ಸ್ವೀಕಾರ |
| ೮ | ಮರಿಕೊಟ್ರಪ್ಪನಾಯಕ | ಕ್ರಿ.ಶ. ೧೭೦೫-೧೭೧೫ ೧೦ ವರ್ಷಗಳು ಅಪಾಯದ ಕಾಲ ಹರಪನಹಳ್ಳಿ ಕೋಟೆಗೆ ಟಿಪ್ಪು ಮುತ್ತಿಗೆ-ವಶ | ವೀರಶೈವ ಧರ್ಮ ಸ್ವೀಕಾರ ಧರ್ಮಾನಾಗತಿಬಸಾಪುರ, ನಾಗತಿಬಸಾಪುರ, ನೀರಿಲ್ಲದ ಬಸಾಪುರ ಎಂಬ ಹೆಸರಿನ ಗ್ರಾಮಗಳ ನಿರ್ಮಾಣ | | | ರಾಜ್ಯವನ್ನು ಹೊಸಪೇಟೆ, ಹುಲಿಗಿ, ಹೊಸೂರುವರೆಗೆ ವಿಸ್ತರಿಸಿದನು. |
| ೯ | ೨ನೇ ಬಸವಂತನಾಯಕ | ಕ್ರಿ.ಶ. ೧೭೧೫-೧೭೧೬ ೦೧ ವರ್ಷ | ರಾಣಿ ಹರಿಯಮ್ಮಾಜಿ ನಾಗತಿ | | | ಕೆಳದಿ ರಾಜ್ಯದ ೧೫ನೇ ದೊರೆ ೨ನೇ ಸೋಮಶೇಖರ ನಾಯಕ (೧೭೧೫-೪೦) ಚಿತ್ರದುರ್ಗದ ವಿರುದ್ಧ ಹೋರಾಡಲು ಸಹಾಯ |
| ೧೦ | ರಾಣಿ ಹರಿಯಮ್ಮಾಜಿ ನಾಗತಿ | ಕ್ರಿ.ಶ. ೧೬೧೬-೧೬೨೧ ೦೫ ವರ್ಷ ಆಳ್ವಿಕೆ | ವೀರಳೂ ಶೂರಳೂ ಆಗಿದ್ದು ಖಡ್ಗ ಹಿಡಿದು ಹೋರಾಡಿದಳು ಇವಳ ಹೆಸರಿನಲ್ಲಿ ಹರೇನಹಳ್ಳಿ, ಹರಿಯಮ್ಮನಹಳ್ಳಿ ಎಂಬ ಗ್ರಾಮಗಳಿವೆ. | | ಅಲಗಿಲವಾಡ ಕೋಟೆಗೆ ಬಸಪ್ಪ ನಾಯಕ ಎಂಬ ದಳವಾಯಿ ನೇಮಕ ಮಾಡಿದಳು ಕೋಟೆ ಇಂದು ಸಂಪೂರ್ಣ ನಾಶಗೊಂಡಿದೆ. ಕೋಟೆ ಬಾಗಿಲು ಕಂಡುಬರುತ್ತದೆ. | ಶಾಸನೋಕ್ತ ಹೆಸರು, ಶಾಸನಗಳಲ್ಲಿ ಬಾಗಳಿ ಹರಿಯಮ್ಮಾಜಿ ಎಂದು ಕರೆಯಲಾಗಿದೆ. ವಿಜಯನಗರದ ಅರಸರು ಇವಳನ್ನು ರಾಣಿ ಎಂದು ಮಾನ್ಯ ಮಾಡಿದ್ದರು. ಕೆಳದಿ ಶೃಂಗೇರಿ ಸಂಸ್ಥಾನಗಳೊಂದಿಗೆ ಬಾಂಧವ್ಯ ದಾನ-ಧರ್ಮಕ್ಕೆ ಹೆಸರುವಾಸಿಯಾಗಿದ್ದಳು |

| ೧೧ | ಮುದಿಬಸಪ್ಪ ನಾಯಕ (ಗೋಣೆಪ್ಪ ನಾಯಕ) (೨ನೇ ಬಸವಂತ ನಾಯಕ ಹಾಗೂ ನಾಗತಿ ಹರಿಯಮ್ಮಾಜಿ ದತ್ತುಪುತ್ರ) (ಹೊಂಬಣ್ಣ ನಾಯಕನ ಸಂತತಿ) | ಕ್ರಿ.ಶ. ೧೭೨೧–೧೭೪೧ ೨೦ ವರ್ಷ ಆಳ್ವಿಕೆ | • ಕೆಳದಿನೃಪ ವಿಜಯಂ ಲಿಂಗಣ್ಣಕವಿ ಪುಟಸಂಖ್ಯೆ ೧೭೩<br>• ಇಕ್ಕೇರಿ ಸಂಸ್ಥಾನದ ಚರಿತ್ರೆ ಎಂ.ಎಸ್.ಪುಟ್ಟಣ್ಣ ಪುಟ ಸಂಖ್ಯೆ ೧೪೯<br>• ಮಾಯಕೊಂಡ ಮುತ್ತಿಗೆ ಈತನ ಕಾಲದಿಂದಲೇ ಆರಂಭವಾಯಿತು | | ಕುಂಚೂರು ಗ್ರಾಮದ ಬಸವನನ್ನು ಹೊಳಲು ಕೋಟೆಗೆ ದಯವಾಯ ಆಗಿ ನೇಮಕ ಅವಿಧೇಯನಾದಾಗ ಹೊಳಲು ಕೋಟೆ ಮುತ್ತಿಗೆ ವಶ ಹುಲಿಗಿ ಕೋಟೆ ಮುತ್ತಿಗೆ ವಶ | ಕೆಳದಿ ಸಂಸ್ಥಾನದೊಂದಿಗೆ ಉತ್ತಮಬಾಂಧವ್ಯ ಚಿತ್ರದುರ್ಗದ ವಿರುದ್ಧ ಹೋರಾಡಲು ನಿಮ್ಮ ಪುತ್ರವರ್ಗದವರೆಸಿ ವರ್ತಿಸುತ್ತಿರುವ ನಮ್ಮ ಸಂಸ್ಥಾನವನ್ನು ಉದ್ಧರಿಸಬೇಕು ಎಂಬ ವಾಕ್ಯದಲ್ಲಿ ಕೆಳದಿ ೧೬ನೇ ದೊರೆ ಕರಿಬಸಪ್ಪ ನಾಯಕನಿಗೆ ಪತ್ರ ಬರೆದು ಸಹಾಯಕ್ಕಾಗಿ ವಿನಂತಿ ಮಾಡಿಕೊಂಡಿದ್ದನು. |
|---|---|---|---|---|---|---|
| ೧೨ | ೧ನೇ ವೀರಬಸಪ್ಪ ನಾಯಕ | ಕ್ರಿ.ಶ. ೧೭೪೧–೧೭೪೨ ೧ ವರ್ಷ | | ಪ್ರೀತಿಯ ಮಗ ಪುಟ್ಟರಸ ೬ನೇ ವಯಸ್ಸಿನಲ್ಲಿ ಮರಣ | ಬಿದುರಳ್ಳಿ (ಉತ್ತಂಗಿ) ಕೋಟೆ ಮುತ್ತಿಗೆ ವಶ ಮಾಗಳ ಸಮೀಪ ಇದೆ. | ಹರಪನಹಳ್ಳಿಯಲ್ಲಿ ಮಗನ ಹೆಸರಿನಲ್ಲಿ ಪುಟ್ಟರಸ ಮಠ ಸ್ಥಾಪನೆ. |
| ೧೩ | ೧ನೇ ಸೋಮಶೇಖರ ನಾಯಕ | ಕ್ರಿ.ಶ. ೧೭೪೨–೧೭೬೬ ೨೪ ವರ್ಷಗಳು | ರಾಣಿ ಸೋಮಮ್ಮಾಜಿ ನಾಗತಿ | ಮಗ ಜಂಬಣ್ಣ ಅಕಾಲಿಕ ಮರಣ ಅರಸೀಕೆರೆ ಕೆರೆ ಏರಿ ಮೇಲೆ ಸಮಾಧಿ ಇದೆ. | ಕೊಟ್ಟೂರು ಕಾಳಗ ಮಾಯಕೊಂಡ ಯುದ್ಧ ಉಜ್ಜನಿಕೋಟೆ ವಶ ತೂಲಹಳ್ಳಿ ಕೋಟೆ ವಶ ಕೂಲಹಳ್ಳಿ ಬಯಲು ಯುದ್ಧ ಹಾಲ ಘಟ್ಟ ಯುದ್ಧ | ಸಂಘರ್ಷದ ಕಾಲ ಹರಪನಹಳ್ಳಿ ಪಾಳೇಗಾರರ ಪ್ರಾಬಲ್ಯ ಕೀರ್ತಿ ಗೌರವ, ಪ್ರತಿಷ್ಠೆಗಳು ನೂರ್ಮಡಿ ಕೆಳದಿ ೧೬ನೇ ದೊರೆ ಕಿರಿಬಸಪ್ಪನಾಯಕನ ಸಹಾಯದೊಂದಿಗೆ ಹೋರಾಟಗಳು ಜಯಶಾಲಿ.<br>ಥಾಮಸ್ ಮನ್ರೊ ವರದಿಯಲ್ಲಿ ಉಲ್ಲೇಖ |
| ೧೪ | ೨ನೇ ವೀರಬಸಪ್ಪ ನಾಯಕ ರಾಣಿ ಸೋಮಮ್ಮಾಜಿ ನಾಗತಿ ೧ನೇ ಸೋಮಶೇಖರ ನಾಯಕನ ಮರಣಾನಂತರ ಅಡವಿ ಬೊಮ್ಮಣ್ಣನನ್ನು ದತ್ತು ತೆಗೆದುಕೊಂಡಳು. ಈತ | ಕ್ರಿ.ಶ. ೧೭೬೬–೧೭೬೮ ೨ ವರ್ಷಗಳು | ದತ್ತು ಪುತ್ರ (ಸೋಮಮ್ಮಾಜಿ) | | ಹೊಳಲು ಅಗ್ರಹಾರ ಬ್ರಾಹ್ಮಣರಿಗೆ ದಳವಾಯಿ ತೊಂದರೆ ಕೊಟ್ಟನು ಆಗ ಅವನನ್ನು ಸಂಹರಿಸಿದನು. | ವೀರಭದ್ರೇಶ್ವರ ಮೂರ್ತಿ ಪ್ರತಿಷ್ಠಾಪಿಸಿದನು. ಹರನಪಹಳ್ಳಿ ಕೋಟೆಯಲ್ಲಿ ಈ ಅವಶೇಷಗಳಿವೆ. |

| | | | | | | |
|---|---|---|---|---|---|---|
| | ೨ನೇ ವೀರಬಸಪ್ಪ ನಾಯಕ ಎಂಬ ಹೆಸರಿನಲ್ಲಿ ಅಧಿಕಾರಕ್ಕೆ ಬಂದನು | | | | | |
| ೧೫ | ಬಾಗುಳಿ ಬಸಪ್ಪ ನಾಯಕ (ದತ್ತುಪುತ್ರ) | ಕ್ರಿ.ಶ. ೧೭೬೮–೧೭೮೭ ೧೯ ವರ್ಷ | | ಅಯ್ಯಪ್ಪ ನಾಯಕ (ಸಹೋದರ) | ವೀರನದುರ್ಗ | ದಕ್ಷ, ಸಮರ್ಥ, ಶೂರ, ಶೃಂಗೇರಿ ಮಠದೊಂದಿಗೆ ಬಾಂಧವ್ಯ<br>ಟಿಪ್ಪು ಆಕ್ರಮಗಳು – ಬಂಧನ. ಕಬ್ಬಾಳ ದುರ್ಗದಲ್ಲಿ ರಾಜ ಪರಿವಾರ ಸೆರೆಮನೆಗೆ. |
| ೧೬ | ೨ನೇ ಸೋಮಶೇಖರ ನಾಯಕ<br>ಕೊನೆ ಅರಸ<br>ಬಸಪ್ಪ ನಾಯಕನ ಅಣ್ಣ ಅಯ್ಯಪ್ಪ ನಾಯಕನ ಮಗ | ಕ್ರಿ.ಶ. ೧೭೮೭–೧೭೯೯ ೦೭ ವರ್ಷ ಕಾರಗೃಹದಲ್ಲಿ ಮರಣ ಕ್ರಿ.ಶ. ೧೮೨೫ | ಬಸಮ್ಮಾಜಿ (ಗುಡಿಕೋಟೆ)<br>ನೀಲಮ್ಮಾಜಿ (ಗುಡಿಕೋಟೆ)<br>ಹಿರೇಬಸಮ್ಮಾಜಿ (ಜರಿಮಲೆ)<br>ಸೋಮಮ್ಮಾಜಿ (ಜರಿಮಲೆ)<br>ನೀಲಮ್ಮಾಜಿ ನೀಲಗುಂದದಲ್ಲಿ ವಾಸ | | ಕುರದಗಡ್ಡೆ ಕೋಟೆ | ದಿವಾನ ಹಂಪರಸಪ್ಪ, ದಿವಾನ ವಿರೂಪಾಕ್ಷಪ್ಪ, ಸಾಮಂತ ಚಿಂತಾಮಣಿಯಪ್ಪ, ರಾಯಸದ ಉಪೇಂದ್ರಪ್ಪ, ಸಾಮಂತ ಗಡಾದ ಭರಮಣ್ಣ ಇವರ ಸೇವೆ |

ನಿರಂತರ ಸಂಘರ್ಷಗಳು, ಟಿಪ್ಪು ಪತನಾನಂತರ ಬ್ರಿಟೀಷರು ಹರಪನಹಳ್ಳಿ ಸಂಸ್ಥಾನವನ್ನು ಕ್ರಿ.ಶ. ೧೭೯೯ರಲ್ಲಿ ವಶಪಡಿಸಿಕೊಂಡು ೨ನೇ ಸೋಮಶೇಖರ ನಾಯಕನನ್ನು ಕಾರಾಗೃಹದಲ್ಲಿ ಇಟ್ಟರು. ಈತನು ಅಲ್ಲಿಯೇ ಕ್ರಿ.ಶ. ೧೮೨೫ರಲ್ಲಿ ಮರಣ ಹೊಂದಿದನು. ಹರಪನಹಳ್ಳಿ ಪಾಳೆಯಪಟ್ಟು ಹೈದರಾಬಾದ್ ಸಂಸ್ಥಾನಕ್ಕೆ ಸೇರಿತು. ನಂತರ ಬಳ್ಳಾರಿ ಜಿಲ್ಲೆಗೆ, ಆನಂತರ ೧೯೯೭ ರಲ್ಲಿ ದಾವಣಗೆರೆ ಜಿಲ್ಲೆಗೆ ಸೇರಿಸಲ್ಪಟ್ಟಿತು. ಪ್ರಸ್ತುತ ತಾಲ್ಲೂಕು ಕೇಂದ್ರವಾಗಿದ್ದು ವಸಾಹತು ಪ್ರಭಾವಕ್ಕೆ ಒಳಗಾಗಿತ್ತು. ಈ ಕಾಲದ ಕಟ್ಟಡಗಳು ಕಂಡು ಬರುತ್ತವೆ.

## ಹರಪನಹಳ್ಳಿ ಪಾಳೆಯಗಾರರ ಗ್ಯಾಸೆಟಿಯರ್ ಆಧಾರಿತ ವಂಶಾವಳಿ–೨

### ಕ್ರಿ.ಶ. ೧೫೬೫–೧೭೯೯ ಒಟ್ಟು ಆಳ್ವಿಕೆ ಕಾಲಾವಧಿ ೨೩೪ ವರ್ಷಗಳು

| ಕ್ರಸಂ. | ಬಳ್ಳಾರಿ ಜಿಲ್ಲಾ ಬ್ರಿಟಿಷ್ ಗ್ಯಾಸೆಟಿಯರ್ ಪ್ರಕಾರ | ಮೈಸೂರು ಸ್ಟೇಟ್ ಗ್ಯಾಸೆಟಿಯರ್ ಪ್ರಕಾರ | ಕೆಳದಿನೃಪ ವಿಜಯಂ ಉಲ್ಲೇಖದಂತೆ |
|---|---|---|---|
| ೧ | ದಾದಾನಾಯಕ ಕ್ರಿ.ಶ. ೧೫೬೫–೧೫೯೨ | ದೊಡ್ಡಯ್ಯ ಕ್ರಿ.ಶ. ೧೫೬೫ | ದಾದಾನಾಯಕ |
| ೨ | ರಂಗಾನಾಯಕ ಕ್ರಿ.ಶ. ೧೫೯೨–೧೬೧೬ | ರಂಗಾನಾಯಕ ಕ್ರಿ.ಶ. ೧೫೯೨–೧೬೧೬ | ರಂಗರಾಜಯ್ಯ |
| ೩ | ಭರ್ಮನಾಯಕ ಕ್ರಿ.ಶ. ೧೬೧೬–೧೬೫೦ | ಭರಮಣ್ಣ ನಾಯಕ ಕ್ರಿ.ಶ. ೧೬೧೬–೧೬೫೦ | ಹಿರಿಯ ಬಸವಂತರಾಯ |
| ೪ | ಓಬಣ್ಣನಾಯಕ ಕ್ರಿ.ಶ. ೧೬೫೦–೧೬೫೫ | ಓಬಣ್ಣ ನಾಯಕ ಕ್ರಿ.ಶ. ೧೬೫೦–೧೬೫೫ | ಇಮ್ಮಡಿ ಬಸವಪ್ಪ ನಾಯಕ |
| ೫ | ವೀರಮುಮ್ಮಡಿ ನಾಯಕ ಕ್ರಿ.ಶ. ೧೬೫೫–೧೬೬೭ | ವೀರಮುಮ್ಮಡಿ ನಾಯಕ ಕ್ರಿ.ಶ. ೧೬೫೫–೧೬೬೭ | ಕೊಟ್ಟೂರಪ್ಪ ನಾಯಕ |
| ೬ | ಮುಮ್ಮಡಿನಾಯಕ ಕ್ರಿ.ಶ. ೧೬೬೭–೧೬೮೭ | ಮುಮ್ಮಡಿನಾಯಕ ಕ್ರಿ.ಶ. ೧೬೬೭–೧೬೮೭ | ಹಿರಿಯ ಬಸವಪ್ಪ ನಾಯಕ |
| ೭ | ಬಸವಂತನಾಯಕ ಕ್ರಿ.ಶ. ೧೬೮೭–೧೭೦೫ | ಬಸವಂತ ನಾಯಕ | ಕೊಟ್ಟೂರಪ್ಪ ನಾಯಕ |
| ೮ | ಮರಿಕೊಟ್ರಪ್ಪನಾಯಕ ಕ್ರಿ.ಶ. ೧೭೦೫–೧೭೧೫ | ಕೊಟ್ರಪ್ಪ ನಾಯಕ ಕ್ರಿ.ಶ. ೧೬೮೭–೧೭೦೫ | ಬಸವಪ್ಪ ನಾಯಕ |
| ೯ | ೨ನೇ ಬಸವಂತನಾಯಕ ಕ್ರಿ.ಶ. ೧೭೧೫–೧೭೨೧ | ಮರಿಕೊಟ್ರಪ್ಪ ಕ್ರಿ.ಶ. ೧೭೦೫–೧೭೧೫ | ಸೋಮಶೇಖರ ನಾಯಕ |
| ೧೦ | ೧ನೇ ಮುದಿಬಸವಪ್ಪ ನಾಯಕ (ಗೋಣೆಪ್ಪ) ಕ್ರಿ.ಶ. ೧೭೨೧–೧೭೪೧ | ಬಸವಂತ ಕ್ರಿಶ ೧೭೧೫–೧೭೨೧ | |
| ೧೧ | ೧ನೇ ವೀರಬಸಪ್ಪನಾಯಕ ಕ್ರಿ.ಶ. ೧೭೪೧–೧೭೪೨ | ಮುದಿಬಸಪ್ಪನಾಯಕ ಕ್ರಿಶ ೧೭೪೧ | |
| ೧೨ | ೧ನೇ ಸೋಮಶೇಖರನಾಯಕ ಕ್ರಿ.ಶ. ೧೭೪೨–೧೭೬೬ | ಸೋಮಶೇಖರ ನಾಯಕ ಕ್ರಿ.ಶ. ೧೭೬೬ | |
| ೧೩ | ೨ನೇ ವೀರಬಸಪ್ಪನಾಯಕ ಕ್ರಿ.ಶ. ೧೭೬೬–೧೭೬೮ | | |
| ೧೪ | ಬಸಪ್ಪ ನಾಯಕ ಕ್ರಿ.ಶ. ೧೭೬೮–೧೭೮೭ | | |
| ೧೫ | ೨ನೇ ಸೋಮಶೇಖರನಾಯಕ ಕ್ರಿ.ಶ. ೧೭೮೭–೧೭೯೯ | | |

## ಹರಪನಹಳ್ಳಿ, ಚಿತ್ರದುರ್ಗ ಮತ್ತು ಕೆಳದಿ ನಾಯಕರು:

## ಕಾಲಮಾನ ತುಲನಾತ್ಮಕ ಪಟ್ಟಿ

| ಹರಪನಹಳ್ಳಿ ಪಾಳೆಯಗಾರರು ಕ್ರಿಶ. ೧೫೬೫–೧೭೯೯ | | ಚಿತ್ರದುರ್ಗ ನಾಯಕರು ಕ್ರಿಶ. ೧೫೬೮–೧೭೭೯ | | ಕೆಳದಿ ನಾಯಕರು ಕ್ರಿಶ. ೧೪೯೯–೧೭೬೩ | |
|---|---|---|---|---|---|
| ದಾದೇನಾಯಕ | ೧೫೬೫–೧೫೯೨ | ಮತ್ತಿತಿಮ್ಮಣ್ಣ ನಾಯಕ | ೧೫೬೮–೧೫೮೯ | ಚೌಡಪ್ಪನಾಯಕ | ೧೪೯೯–೧೫೧೪ |
| ರಂಗನಾಯಕ | ೧೫೯೨–೧೬೧೬ | ೧ನೇ ಓಬಣ್ಣ ನಾಯಕ | ೧೫೮೯–೧೬೦೩ | ಸದಾಶಿವನಾಯಕ | ೧೫೧೪–೧೫೪೫ |
| ಭರ್ಮಣ್ಣ ನಾಯಕ | ೧೬೧೬–೧೬೫೦ | ೧ನೇ ಕಸ್ತೂರಿರಂಗಪ್ಪ ನಾಯಕ | ೧೬೦೩–೧೬೫೨ | ದೊಡ್ಡಸಂಕಣ್ಣ ನಾಯಕ | ೧೫೪೫–೧೫೫೯ |
| ಹೊಂಬಣ್ಣ ಓಬಣ್ಣ | ೧೬೫೦–೧೬೫೫ | ಇಮ್ಮಡಿ ಮದಕರಿ ನಾಯಕ | ೧೬೫೨–೧೬೭೫ | ಚಿಕ್ಕ ಸಂಕಣ್ಣ ನಾಯಕ | ೧೫೫೯–೧೫೭೨ |
| ವೀರಮುಮ್ಮಡಿನಾಯಕ | ೧೬೫೫–೧೬೬೭ | ಇಮ್ಮಡಿ ಓಬಣ್ಣ ನಾಯಕ | ೧೬೭೫ | ರಾಮರಾಜ ನಾಯಕ | ೧೫೭೨–೧೫೮೩ |
| ಮುಮ್ಮಡಿನಾಯಕ | ೧೬೬೭–೧೬೮೭ | ಕಸ್ತೂರಿ ಚಿಕ್ಕಣ್ಣ | ೧೬೭೫–೧೬೮೮ | ಹಿರಿಯ ವೆಂಕಟಪ್ಪನಾಯಕ | ೧೫೮೩–೧೬೩೦ |
| ೧ನೇ ಬಸವಂತ ನಾಯಕ (ಕೊಟ್ರಬಸಪ್ಪ) | ೧೬೮೭–೧೭೦೫ | ಮುಮ್ಮಡಿ ಮದಕರಿ ನಾಯಕ | ೧೬೮೬–೧೬೮೮ | ವೀರಭದ್ರ ನಾಯಕ | ೧೬೩೦–೧೬೪೬ |
| ಮರಿಕೊಟ್ರಪ್ಪ ನಾಯಕ | ೧೭೦೫–೧೭೧೫ | ದೊಣ್ಣೆರಂಗಪ್ಪ ನಾಯಕ | ೧೬೮೮ | ಶಿವಪ್ಪ ನಾಯಕ | ೧೬೪೬–೧೬೬೧ |
| ೨ನೇ ಬಸವಂತ ನಾಯಕ ಮತ್ತು ಹರಿಯಮ್ಮಾಜಿ | ೧೭೧೫–೧೭೨೧ | ಸೂರ್ಯಕಾಂತಿ ರಂಗಪ್ಪ ನಾಯಕ | ೧೬೮೯ | ಇಮ್ಮಡಿ ವೆಂಕಟಪ್ಪ ನಾಯಕ | ೧೬೬೧–೧೬೬೨ |
| ಮುದಿಬಸಪ್ಪ ನಾಯಕ | ೧೭೨೧–೧೭೪೧ | ಬಿಚ್ಚುಗತ್ತಿ ಭರಮಣ್ಣ ನಾಯಕ | ೧೬೮೯–೧೭೨೧ | ಭದ್ರಪ್ಪ ನಾಯಕ | ೧೬೬೨–೧೬೬೪ |
| ೧ನೇ ವೀರಬಸಪ್ಪ ನಾಯಕ | ೧೭೪೧–೧೭೪೨ | ಹಿರೇಮದಕರಿ ನಾಯಕ | ೧೭೨೧–೧೭೪೯ | ಕಿರಿಯ ಸೋಮಶೇಖರ ನಾಯಕ | ೧೬೬೪–೧೬೭೧ |
| ೧ನೇ ಸೋಮಶೇಖರ ನಾಯಕ | ೧೭೪೨–೧೭೬೬ | ಇಮ್ಮಡಿ ಕಸ್ತೂರಿ ರಂಗಪ್ಪ ನಾಯಕ | ೧೭೪೯–೧೭೫೪ | ಕುತ್ಸಿತ ಶಿವಪ್ಪ ನಾಯಕ | ?–೧೭೬೩ |

| ೨ನೇ ವೀರಬಸಪ್ಪ | ೧೭೬೬-೧೭೬೮ | ರಾಜಾವೀರ ಮದಕರಿ ನಾಯಕ | ೧೭೫೪-೧೭೭೬ | ಚನ್ನಮ್ಮಾಜಿ | ೧೬೭೨-೧೬೯೮ |
|---|---|---|---|---|---|
| ಬಾಗಳಿ ಬಸಪ್ಪ ನಾಯಕ | ೧೭೬೮-೧೭೮೭ | | | ಬಸವಪ್ಪ ನಾಯಕ | ೧೬೯೮-೧೭೧೫ |
| ೨ನೇ ಸೋಮಶೇಖರ ನಾಯಕ | ೧೭೮೭-೧೭೯೯ | | | ಇಮ್ಮಡಿ ಸೋಮಶೇಖರ ನಾಯಕ | ೧೭೧೫-೧೭೩೯ |
| | | | | ಇಮ್ಮಡಿ ಬಸಪ್ಪ ನಾಯಕ | ೧೭೩೯-೧೭೫೫ |
| | | | | ಚನ್ನಬಸಪ್ಪ ನಾಯಕ | ೧೭೫೫-೧೭೫೮ |
| | | | | ಮುಮ್ಮಡಿ ಸೋಮಶೇಖರ ನಾಯಕ ಮತ್ತು ವೀರಮ್ಮಾಜಿ | ೧೭೫೮-೧೭೬೩ |

## ಅಡಿಟಿಪ್ಪಣಿಗಳು

೧. ಕರ್ನಾಟಕ ವಿಷಯ ವಿಶ್ವಕೋಶ, (ಸಂ) ಮೈಸೂರು ವಿಶ್ವವಿದ್ಯಾಯ, ಪುಟ ೫೦೦.

೨. ಕ್ರಿಪೂ.೩೦೧೨ರಿಂದ ಕಲಿಯುಗದ ಆರಂಭವನ್ನು ಗುರುತಿಸಲಾಗಿದೆ. ಮಹಾಭಾರತದಲ್ಲಿ ಕರ್ನಾಟಕದ ಉಲ್ಲೇಖಗಳಿವೆ.

೩. ನಾಯಕ ಹಾ.ಮಾ., ಮತ್ತು ವೆಂಕಟಾಚಲಶಾಸ್ತ್ರಿ ಟಿ.ವಿ., (ಸಂ) ೧೯೭೪, ಕನ್ನಡ ಸಾಹಿತ್ಯ ಚರಿತ್ರೆ ಸಂ–೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ಪುಟ–೨೧೩.

೪. ಪಾಲಾಕ್ಷ, ೨೦೦೯, ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಪುಟ–೧.

೫. ಗೋಪಾಲ. ಬಾ.ರಾ., ೧೯೮೫, ಕಾರ್ಮಸ್ ಆಫ್ ಕನ್ನಡ ಇನ್ಸ್‌ಸ್ಕ್ರಿಪ್ಷನ್ ಸಂ–೧, ಕದಂಬ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರಲ್ ಸ್ಟಡೀಸ್, ಶಾಸನ ಸಂ–೨೦, ಸಿರ್ಸಿ (ಕರ್ನಾಟಕ), ಪುಟ–೧೨೫.

೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೬೯.

೭. ಗಿರಿಜಾ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ–೪.

೮. ಅದೇ ಪುಟ–೪–೫.

೯. ಅದೇ ಪುಟ–೬.

೧೦. ಅದೇ ಪುಟ–೭, ೮, ೯.

೧೧. ಅದೇ ಪುಟ–೧೯.

೧೨. ಕೊಟ್ರೇಶ್ .ಎಂ, ೨೦೧೦, ಹರಪನಹಳ್ಳಿ ತಾಲ್ಲೂಕಿನ ರಕ್ಷಣಾಸ್ಮಾರಕಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೧.

೧೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ–೬೯.

೧೪. ಅದೇ ಪುಟ–೧.

೧೫. ಗಿರಿಜಾ ಟಿ., ೨೦೦೧, ಪೂರ್ವೋಕ್ತ, ಪುಟ–೬೬೩.

೧೬. ಕೊಟ್ರೇಶ್ ಎಂ., ೨೦೧೦, ಪರ್ವೋಕ್ತ, ಪುಟ–೧ ಮತ್ತು ಗಿರಿಜಾ ಟಿ., ೨೦೦೧, ಪೂರ್ವೋಕ್ತ, ಪುಟ–೬೬೩.

೧೭. ಗಿರಿಜಾ ಟಿ., ೨೦೦೧, ಪೂರ್ವೋಕ್ತ, ಪುಟ–೬೬೪.

೧೮. ರಾಜಶೇಖರಪ್ಪ ಬಿ., ೨೦೦೧, ದಾವಣಗೆರೆ ಸ್ಥಳನಾಮ ನಿಷ್ಪತ್ತಿ–ಒಂದು ಅಧ್ಯಯನ, ಇತಿಹಾಸ ಕಥನ, ಪುಟ–೧೯೨.

೧೯. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೪೩-೩೪೬.

೨೦. ಇಂಡಿಯನ್ ಆರ್ಕಿಯಾಲಾಜಿ ರಿಪೋರ್ಟ್, ೧೯೮೩-೮೪, ಪುಟ-೪೦.

೨೧. ಸುಂದರ. ಅ, ೨೦೦೫, ಚಿತ್ರದುರ್ಗ ಜಿಲ್ಲೆ ಪುರಾತತ್ವ ಸಂಶೋಧನೆಗೆ ಮುಂದೇನು ?, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಡಾ.ಆರ್.ಗೋಪಾಲ್ (ಸಂ), ಪಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ಪುಟ-೧೧.

೨೨. ಮಜುಂದಾರ್. ಆರ್.ಸಿ., ಭಾರತದ ಪ್ರೌಢ ಇತಿಹಾಸ, ಪುಟ-೮೬.

೨೩. ಶ್ರೀನಿವಾಸ್ ಎಂ.ವಿ., ೧೯೭೬, ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರ ಆಳ್ವಿಕೆ, ಚಂದ್ರವಳ್ಳಿ, ಎಂ.ವಿ. ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ(ಸಂ), ಜಿಲ್ಲಾ ಇತಿಹಾಸ ಸಂಶೋಧನಾ ಮಂಡಲಿ, ಚಿತ್ರದುರ್ಗ, ಪುಟ-೨.

೨೪. ಕರ್ನಾಟಕ ಚರಿತ್ರೆ ಸಂ-೧, ೧೯೯೭, ಪುಟ-೩೦೨.

೨೫. ಎ.ಕ. ಸಂ-೬.

೨೬. ಗಿರಿಜಾ ಟಿ., ೨೦೦೧, ಪೂರ್ವೋಕ್ತ, ಪುಟ-೨೯೫.

೨೭. ಗಿರಿಜಾ ಟಿ., ೨೦೦೧, ಚಿತ್ರದುರ್ಗ ಜಿಲ್ಲಾದರ್ಶಿನಿ, ಪೂರ್ವೋಕ್ತ, ಪುಟ-೭೫.

೨೮. ಸದಾಶಿವಪ್ಪ. ಕುಂ.ಬಾ., ೨೦೦೮, ಹರಪನಹಳ್ಳಿ ತಾಲ್ಲೂಕು ಪರಿಚಯ, ಪುಟ-೬೦, ಮತ್ತು ಶ್ರೀಸತ್ಯನ್ ಬಿ.ಎನ್., ೧೯೮೬, ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಪುಟ-೩೩.

೨೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲಾ ಪಾಳೆಯಗಾರರು, ಪುಟ-೭೦.

೩೦. ಪುಟ್ಟಣ್ಣ ಎಂ.ಎಸ್., ೧೯೨೪, ಚಿತ್ರದುರ್ಗ ಪಾಳೆಯಗಾರರು, ಪುಟ-೧.

೩೧. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ ಸಂಶೋಧನ ಮಾಲಿಕೆ, ಪುಟ-೧.

೩೨. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೦.

೩೩. ಸದಾಶಿವಪ್ಪ ಕುಂಬಾ., ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪುಟ-೧.

೩೪. ಅದೇ ಪುಟ-೧.

೩೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೦.

೩೬. ಕೊಟ್ರೇಶ್ ಎಂ., ೨೦೧೦, ಪೂರ್ವೋಕ್ತ, ಪುಟ-೧.

೩೭. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೧.

೩೮. ಕೊಟ್ರೇಶ್ ಎಂ., ೨೦೧೦, ಪೂರ್ವೋಕ್ತ, ಪುಟ-೧.

೩೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೧.

೪೦. ಗಿರಿಜಾ ಟಿ., ೧೯೯೧, ಪೂರ್ವೋಕ್ತ, ಪುಟ-೬೬೩.

೪೧. ಕೊಟ್ರೇಶ್ ಎಂ., ೨೦೧೦, ಪೂರ್ವೋಕ್ತ, ಪುಟ-೧.

೪೨. ಗಿರಿಜಾ ಟಿ., ೧೯೯೧, ಪೂರ್ವೋಕ್ತ, ಪುಟ-೬೬೪.

೪೩. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪುಟ-೩೩೦, ೩೩೧.

೪೪. ಗಿರಿಜಾ ಟಿ., ೧೯೯೧, ಪೂರ್ವೋಕ್ತ, ಪುಟ-೬೬೪.

೪೫. ವಿರೂಪಾಕ್ಷಿಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೩.

೪೬. ಗಿರಿಜಾ ಟಿ., ೧೯೯೧, ಪೂರ್ವೋಕ್ತ, ಪುಟ-೭೦೯, ೭೧೦.

೪೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೩.

೪೮. ಸದಾಶಿವಪ್ಪ ಕುಂ.ಬಾ., ೨೦೦೮, ಹರಪನಹಳ್ಳಿ ತಾಲ್ಲೂಕು ಪರಿಚಯ, ಪುಟ-೩೨.

೪೯. ಗಿರಿಜಾ ಟಿ., ೧೯೯೧, ಪೂರ್ವೋಕ್ತ, ಪುಟ-೬೯೦.

೫೦. ಸದಾಶಿವಪ್ಪ ಕುಂ.ಬಾ., ೨೦೦೮, ಹರಪನಹಳ್ಳಿ ತಾಲ್ಲೂಕು ಪರಿಚಯ, ಪುಟ-೪೩.

೫೧. ಅದೇ ಪುಟ-೫೩.

೫೨. ಅದೇ ಪುಟ-೮೨.

೫೩. ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ ೨೦೦.

೫೪. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೩.

೫೫. ಅದೇ ಪುಟ-೪೪.

೫೬. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೭೦ರಲ್ಲಿ ಶ್ರವಣಬೆಳಗೊಳ ಶಾಸನದಲ್ಲಿ ಎಂದು ತಿಳಿಸಿದ್ದರೆ, ಗಿರಿಜಾ ಟಿ. ೨೦೦೧, ಪೂರ್ವೋಕ್ತ ಇದರಲ್ಲಿ ಬಾಗಳಿ ಶಾಸನ ಎಂದು ತಿಳಿಸಿದೆ.

೫೭. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೭೦.

೫೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೪.

೫೯. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೩೨.

೬೦. ಚಿಕ್ಕೇರೂರು ಗೋವಿಂದಾಚಾರ್ಯ, ಹರಪನಹಳ್ಳಿ ಪಾಳೆಯಗಾರರು, ಅಪ್ರಕಟಿತ ಹಸ್ತಪ್ರತಿ, ಪುಟ-೩೦.

೬೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೧.

೬೨. ಶ್ಯಾಮಲ ಸಿ.ಆರ್., ೨೦೦೮, ಪೂರ್ವಕರ್ನಾಟಕದ ಪಾಳೆಯಗಾರರು – ಒಂದು ಅಧ್ಯಯನ, ಪುಟ-೩೩.

೬೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೨.

೬೪. Manual of the administration of the madras preridencey in illustration of the record of government and the yearly administration reports, 1886, P.153-154.

೬೫. ಸದಾಶಿವಪ್ಪ ಕುಂ.ಬಾ., ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪುಟ-೨೮-೨೯.

೬೬. ರಾಜಶೇಖರಪ್ಪ.ಬಿ, ಸಂಶೋಧಿಸಿದ ಮುಚ್ಚನೂರು ಶಾಸನ.

೬೭. ಮೆಂಕಂಜಿ ಸಂಗ್ರಹ, ಪುಟ-೨೬.

೬೮. ದೋ.ನಾಂಗಡಿ ಶಾಸನದಲ್ಲಿ ನಾಯಕನ ಬಗ್ಗೆ ಕೆಲ ಮಾಹಿತಿಗಳು ದೊರಕುತ್ತವೆ.

೬೯. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೫೬.

೭೦. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೩೩.

೭೧. ಅದೇ ಪುಟ-೩೪.

೭೨. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೫೬.

೭೩. ಶ್ಯಾಮಲ ಸಿ.ಆರ್., ೨೦೦೮, ಪೂರ್ವೋಕ್ತ, ಪುಟ-೩೪.

೭೪. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೫೭.

೭೫. ಅದೇ ಪುಟ-೫೬.

೭೬. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೩೭.

೭೭. ಕೂಡ್ಲಿಗಿ ತಾಲ್ಲೂಕಿನ ಶಾಸನ ಸಂಖ್ಯೆ-೩೪, ಕಾಲ ಕ್ರಿ.ಶ.೧೬೯೧.

೭೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೪.

೭೯. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೪೧.

೮೦. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೫೮.

೮೧. ಅದೇ ಪುಟ-೫೮.

೮೨. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೪೫.

೮೩. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೬೨.

೮೪. ಅದೇ ಪುಟ-೬೨.

೮೫. ಅದೇ ಪುಟ-೬೩.

೮೬. ಚಿಕ್ಕೇರೂರು ಗೋವಿಂದಾಚಾರ್ಯರು, ಬಸಮ್ಮಾಜಿ ಎಂದು ತಿಳಿಸಿದ್ದಾರೆ.

೮೭. ಶ್ರೀ ಕೊಟ್ಟೂರೇಶ್ವರ ಪವಾಡ ವಾರ್ಧಿಕ-ಪುಟ-೧೨೩ರಿಂದ೧೨೮ ಹಾಗೂ ಚಿಕ್ಕೇರೂರು ಗೋವಿಂದಾಚಾರ್ಯ, ಪುಟ-೬೩.

೮೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೬.

೮೯. ಕೆಳದಿ ವೆಂಕಟೇಶ ಜೋಯಿಸ್, ೧೯೯೭, ಕೆಳದಿನೃಪ ವಿಜಯದಲ್ಲಿ ಹರಪನಹಳ್ಳಿ ಪಾಳೆಯಗಾರರು, ಕನ್ನಡ ಸಾಹಿತ್ಯ ಪರಿಷತ್, ಪುಟ-೨೩೯.

೯೦. ಬಳ್ಳಾರಿ ಜಿಲ್ಲಾ ಗೆಜೆಟಿಯರ್, ಪುಟ-೨೫೭.

೯೧. ಸದಾಶಿವಪ್ಪ ಕುಂ.ಬಾ., ೧೯೯೯, ಖಡ್ಗಯುದ್ಧ ಪ್ರವೀಣ ಮೊದಲ ಸೋಮಶೇಖರ ನಾಯಕ- ಒಂದು ಟಿಪ್ಪಣಿ ಇತಿಹಾಸ ದರ್ಶನ, ಸಂ-೧೪, ಪುಟ-೨೭೫.

೯೨. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಪೂರ್ವೋಕ್ತ, ಪುಟ-೭೬.

೯೩. ಮಹದೇವ ಸಿ., ಎ. ಸುಬ್ಬಣ್ಣರೈ, ಮಾಧವಪೆರಾಜೆ, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪುಟ-೫.

೯೪. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೧.

೯೫. ಶ್ಯಾಮಲ ಸಿ.ಆರ್., ೨೦೦೮, ಪೂರ್ವೋಕ್ತ, ಪುಟ-೩೭-೩೮

೯೬. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೩.

೯೭. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೨೭೬.

೯೮. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೫.

೯೯. ಅದೇ ಪುಟ-೫೬.

೧೦೦. ಶ್ಯಾಮಲ ಸಿ.ಆರ್., ೨೦೦೮, ಪೂರ್ವೋಕ್ತ, ಪುಟ-೪೦.

೧೦೧. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೮.

೧೦೨. ಚಿಕ್ಕೇರೂರು ಗೋವಿಂದಾಚಾರ್ಯ, ಪೂರ್ವೋಕ್ತ, ಪುಟ-೧೪೫.

೧೦೩. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೫೯.

೧೦೪. ಶ್ಯಾಮಲ ಸಿ.ಆರ್., ೨೦೦೮, ಪೂರ್ವೋಕ್ತ, ಪುಟ-೪೧.

೧೦೫. ಕ್ಷೇತ್ರಕಾರ್ಯ ವರದಿ.

ಅಧ್ಯಾಯ – ೩

# ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ ಮತ್ತು ನ್ಯಾಯಾಡಳಿತ ವ್ಯವಸ್ಥೆ

## ಅಧ್ಯಾಯ – ೩

# ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ ಮತ್ತು ನ್ಯಾಯಾಡಳಿತ ವ್ಯವಸ್ಥೆ

### ೩.೧ ಸಾಮಾಜಿಕ ವ್ಯವಸ್ಥೆ

ಐತಿಹಾಸಿಕ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳು ಸರಿಯಾದ ಕ್ರಮದಲ್ಲಿರಬೇಕಾದರೆ ಅದಕ್ಕೆ ಸಾಮಾಜಿಕ ವ್ಯವಸ್ಥೆ ಹಾಗೂ ಸಾಮಾಜಿಕ ಚಟುವಟಿಕೆಗಳು ಮುಖ್ಯವಾಗುತ್ತವೆ. ಸಾಮಾನ್ಯವಾಗಿ ಎಲ್ಲಾ ಕಾಲಗಳಲ್ಲಿಯೂ ಸಮಾಜದಲ್ಲಿ ಪ್ರಭುವರ್ಗ ಮತ್ತು ಶ್ರಮಿಕವರ್ಗ ಎಂಬ ಎರಡು ವರ್ಗಗಳಿದ್ದವು. ಪ್ರಭುವರ್ಗದಲ್ಲಿ ರಾಜನಿಗೆ ಸಹಾಯಕರಾದ ಪುರೋಹಿತರು, ಗೌಡರು, ದಿವಾನರು, ದಳವಾಯಿಗಳು ಮುಂತಾದವರಿರುತ್ತಿದ್ದರು. ಹಾಗೆಯೇ ಹರಪನಹಳ್ಳಿ ಪಾಳೆಯಗಾರರು ಸಹ ತಮ್ಮ ಸುಗಮ ಆಡಳಿತಕ್ಕಾಗಿ ಸಲಹೆ ಸೂಚನೆ ನೀಡಲು ಅನೇಕರನ್ನು ನೇಮಿಸಿಕೊಂಡಿದ್ದರು. ಅವರಲ್ಲಿ ಪುರೋಹಿತರು ಜೋಯಿಸರು, ಗೌಡರು, ದಿವಾನರು, ದಳವಾಯಿಗಳು, ತಳವಾರರು ಪ್ರಮುಖರಾಗಿದ್ದಾರೆ.

#### ಪುರೋಹಿತರು / ಜೋಯಿಸರು

ಪುರೋಹಿತರು ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆದಿದ್ದರು. ಹಾಗಲವಾಡಿ, ಮಧುಗಿರಿ, ಚಿತ್ರದುರ್ಗ, ನಾಯಕನಹಟ್ಟಿ, ಹರತಿ, ಹರಪನಹಳ್ಳಿ, ಬಳ್ಳಾರಿ, ಗುಡಿಕೋಟೆ, ಬಾಗಳಿ, ಮುಂತಾದ ಪಾಳೆಯಪಟ್ಟುಗಳ ಬ್ರಾಹ್ಮಣರು ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ನೆಲೆಗೊಳ್ಳುವಂತೆ ಮಾಡಿ ಅವರು ಷಟ್ಕರ್ಮಗಳಲ್ಲಿ ನಿರತರಾಗಿರುವಂತೆ ಸಾಕಷ್ಟು ದಾನ–ದತ್ತಿಗಳನ್ನು ನೀಡಿ ಗೌರವಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು[೧]. ಹರಪನಹಳ್ಳಿ ಬ್ರಾಹ್ಮಣರ ಅಗ್ರಹಾರವಾಗಿದ್ದು, ಜೋಯಿಸರ ಕೇರಿಯೇ ಸ್ಥಾಪನೆಗೊಂಡಿತ್ತು. ಪುರೋಹಿತರು, ಜೋಯಿಸರು ಸಮಾಜದಲ್ಲಿ ಉನ್ನತ ಶ್ರೇಣಿ ಪಡೆದಿದ್ದರು. ಇವರಿಗೆ ನೀಡಲಾದ ಅನೇಕ ದಾನ–ದತ್ತಿಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಇವರು ರಾಜಕೀಯದಲ್ಲೂ ಪ್ರಭಾವ ಬೀರಿ ಪ್ರಮುಖ ಸ್ಥಾನವನ್ನು ಪಡೆದಿದ್ದರು. ಹರಪನಹಳ್ಳಿ ಪಾಳೆಯಗಾರರು ತಾವು ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಜೋಯಿಸರನ್ನು ತಮ್ಮ ಪ್ರಯಾಣದಲ್ಲಿ ಉಂಟಾಗುವ ಜಯಾಪಜಯಗಳ ಬಗ್ಗೆ ಕೇಳುತ್ತಿದ್ದರು. ಆಗ ಜೋಯಿಸರು ಮಂತ್ರಗಳಿಂದ ಕೂಡಿದ ಕೈ ಓಲೆ ಬರೆದು ಅರಸರ ತೋಳಿಗೆ ಕಟ್ಟುತ್ತಿದ್ದರು. ಅಲ್ಲದೆ ರಾಜರು ಯುದ್ಧ ಮಾಡುತ್ತಿದ್ದ ಸಂದರ್ಭದಲ್ಲಿ ಜೋಯಿಸರು ಪಾರಾಯಣ ವ್ರತವನ್ನು ಆಚರಿಸುತ್ತಿದ್ದರು, ದೇವರ ಪೂಜೆ ಮಾಡುತ್ತ ರಾಜನಿಗೆ ಜಯವಾಗಲೆಂದು ಪ್ರಾರ್ಥಿಸುತ್ತಿದ್ದರು. ಕೆಲವು ವೇಳೆ ಜಪ ಮಾಡಲೆಂದೇ ರಾಜರ ಹಿಂದೆ ಯುದ್ಧ ಸ್ಥಳಕ್ಕೆ ತೆರಳುತ್ತಿದ್ದರು. ರಾಜರು ಇಂತಹ ಪುರೋಹಿತ ಮತ್ತು ಜೋಯಿಸರಿಗೆ ದಾನ–ದತ್ತಿ ನೀಡಿದ ಉದಾಹರಣೆಗಳಿವೆ. ಹರಪನಹಳ್ಳಿ ಸಂಸ್ಥಾನದ ಸ್ಥಾಪಕ ದಾದೇನಾಯಕರ ಕಾಲದಲ್ಲಿ ಕಾಮಭಟ್ಟರೆಂಬ ಪುರೋಹಿತರು

ನಾಯಕನಿಗೆ ಮಾರ್ಗದರ್ಶಕರಾಗಿದ್ದರು. ಇವರು ನಾಯಕರಿಗೆ ನೀವು ಅರಸರಾಗುವುದು ಖಚಿತವೆಂದು ಹೇಳಿದ್ದರಿಂದ ರಾಜನಾದ ಮೇಲೆ ದಾದೇನಾಯಕ ಕಾಮಭಟ್ಟರಿಗೆ ಮೂವತ್ತಮೂರು ಹಳ್ಳಿಗಳ ಪೌರೋಹಿತ್ಯ ಕಾರ್ಯವನ್ನು ಹಾಗೂ ಹರಪನಹಳ್ಳಿ ಸಮೀಪದ ಕಾಮಭಟ್ಟರ ಹಳ್ಳಿಯನ್ನು ದಾನವಾಗಿ ದತ್ತಿ ಕೊಟ್ಟರು[೨]. ಇದೇ ಇಂದು ಜನರ ಆಡುಮಾತಿನಲ್ಲಿ ಕಾಂಭಾಟ್ರಳ್ಳಿಯಾಗಿದೆ ಹರಪನಹಳ್ಳಿ ಕಂಚಿಕೇರಿ ಮಾರ್ಗದಲ್ಲಿ ಬೆಂಡಿಗೇರಿ ಸಮೀಪದಲ್ಲಿದೆ.

ಬಾಗುಳಿ ಬಸಪ್ಪನಾಯಕರು ಸಹ ಹೊಳಲು ಕೋಟೆಯ ಮುತ್ತಿಗೆಯ ಸಂದರ್ಭದಲ್ಲಿ ಅವರೊಡನೆ ಇದ್ದು ಶತ್ರು ಪರಾಭವವಾಗಲೆಂದು ಜಪ ಮಾಡಿದ ಜೋಯಿಸರಿಗೆ ಕೊಟ್ಟ ಭೂದಾನದ ಪತ್ರದಲ್ಲಿ ಕೋಗಳಿ ಪೆಂಟಿಕೆ ಸಲ್ಲುವ ಕೊಟ್ಟೂರು ಸೀಮೆಯೊಳಗಣ ಡಣಾಯನಕೆರೆ ಪಟ್ಟಡಿ, ಮುಗಿಮಾವಿನಹಳ್ಳಿಯ ಕೆರೆ ಮಾಗಣಿಯಲ್ಲಿ ಗದ್ದೆ ಬೀಜುವರಿ ಒಂದು ವಕ್ಕಳವನ್ನು ಸರ್ವಮಾನ್ಯವಾಗಿ ದಾನಬಿಟ್ಟ ವಿಚಾರವಿದೆ[೩]. ಬಾಗುಳಿ ಹರಿಯಮ್ಮಾಜಿ ತಮ್ಮ ಪುರೋಹಿತ ಜೋಯಿಸರಾದ ದೇವೋತ್ತಮಭಟ್ಟರು, ಹನುಮಂತಭಟ್ಟರು, ಪದ್ಮನಾಭಭಟ್ಟರು ಹಾಗು ನರಸಿಂಹಭಟ್ಟರಿಗೆ ತಾವು ಕೋರೆಗಲ್ಲು ಕಾಲುವೆಯ ಕಟ್ಟೆಯನ್ನು ಕಟ್ಟಿಸಿ ಆ ಮಹೋತ್ಸವದ ಕಾರ್ಯದಲ್ಲಿ ಕೋಗುಳಿ ಪೆಂಟಿಕೆ ಸಲ್ಲುವ ನಾರಾಯಣದೇವರಕೆರೆ ಪಟ್ಟಡಿಯ ಆನ್ವೇರಿ ಭೂಮಿಯೊಳಗೆ ಗದ್ದೆ ಬೀಜುವರಿ ಎರಡು ವಕ್ಕಳ ದಾನ ನೀಡಿದ ವಿಚಾರ ಕ್ರಿ.ಶ.೧೭೧೦ರ ಕಾಲದ ಶಾಸನದಲ್ಲಿ ತಿಳಿದು ಬರುತ್ತದೆ[೪]. ಹಾಗೆಯೇ ನಾಗದೇವರಭಟ್ಟರಿಗೆ ಅಲಗಿವಾಡದಲ್ಲಿ ವಕ್ಕಳ ಗದ್ದೆಯನ್ನು ದಾನ ಮಾಡಿ ಶಾಸನ ಹಾಕಿಸಿದ್ದಾಳೆ[೫]. ಕ್ರಿ.ಶ.೧೭೧೦ರಲ್ಲಿ ಜೋಯಿಸರಾದ ಪ್ರಸನ್ನಭಟ್ಟರಿಗೆ ಬಾಗುಳಿಯಲ್ಲಿ ವಕ್ಕಳಗದ್ದೆಯನ್ನು ದಾನ ಕೊಟ್ಟು ಶಾಸನ ಹಾಕಿಸಿದ್ದಾಳೆ[೬].

ಮುಮ್ಮಡಿ ಬಸಪ್ಪನಾಯಕನು ತನ್ನ ಜೋಯಿಸರು ಮತ್ತು ಪುರೋಹಿತರಾದ ಪಾರೆಓಬಳಭಟ್ಟರು, ತಿಪ್ಪಣ್ಣಭಟ್ಟರುಗಳಿಗೆ ಕೋಗಳಿ ಪೆಂಟಿಕೆ ಕೊಟ್ಟೂರು ಸೀಮೆಯೊಳಗಣ ಕೆಸರಳ್ಳಿ, ಅಲಮರಸಿಕೆರೆ ಗ್ರಾಮಗಳಲ್ಲಿ ಭೂದಾನ ನೀಡಿದ್ದಾನೆ[೭]. ಮತ್ತೊಂದು ಶಾಸನದಲ್ಲಿ ಪುರೋಹಿತರಿಗೆ ಕೂಡ್ಲಿಗಿ ತಾಲ್ಲೂಕು ಜೋಳದ ಕೂಡ್ಲಿಗಿ ಹತ್ತಿರದ ಶೇಷಮ್ಮನ ಹಳ್ಳಿಯನ್ನು ಹುಗ್ಗಿ ಹೊಯ್ದು ಗ್ರಾಮಾಭಿವೃದ್ಧಿ ಮಾಡಿಕೊಳ್ಳುವಂತೆ ಆಜ್ಞೆಯಿಸಿದ್ದಾನೆ[೮]. ಮುಮ್ಮಡಿ ಬಸಪ್ಪನಾಯಕನು ಕ್ರಿಶ. ೧೭೦೭ರಲ್ಲಿ ಈ ಜೋಯಿಸರ ಅಣ್ಣ ತಮ್ಮಂದಿರಲ್ಲಿ ಉಂಟಾದ ಕಲಹ ಬಗೆಹರಿಸಿದ್ದಾನೆ. ಮತ್ತೊಂದು ಶಾಸನದಲ್ಲಿ ಕಾಮಭಟ್ಟರಹಳ್ಳಿ ಅಗ್ರಹಾರವನ್ನು ಅಣ್ಣ ತಮ್ಮಂದಿರಿಗೆ ಹಂಚಿ ಕೊಟ್ಟ ವಿಷಯವಿದೆ. ಹೀಗೆ ಹರಪನಹಳ್ಳಿ ರಾಜವಂಶಿಯರಲ್ಲಿ ಪುರೋಹಿತರು–ಜೋಯಿಸರು ಪ್ರಮುಖ ಪಾತ್ರವಹಿಸಿದ್ದರು.

**ರಾಯಸದವರು**

ಅರಸರ ಆಸ್ಥಾನದಲ್ಲಿ ಅರಸರ ಆದೇಶದ ಪ್ರಕಾರ ಇತರ ಅರಸರಿಗೆ ಗೌಡರಿಗೆ ಪತ್ರಗಳನ್ನು ಬರೆಯುವವರನ್ನು ರಾಯಸದವರು ಎಂದು ಕರೆಯಲಾಗಿದೆ. ಆದೇಶಗಳನ್ನು ಬರೆದು ಅವುಗಳಿಗೆ ಅರಸರ ಸಹಿ ಮತ್ತು ಮೊಹರು ಹಾಕಿ ಕಳುಹಿಸುವುದು ರಾಯಸದವರ ಪ್ರಮುಖ ಕೆಲಸ. ಈ ವರ್ಗ ಪ್ರಾರಂಭದಲ್ಲಿ ವಿಜಯನಗರ ಅರಸರ ಬಳಿಯಿತ್ತು. ಅವರನ್ನೆ ಅನುಸರಿಸಿದ ಹರಪನಹಳ್ಳಿ ಪಾಳೆಯಗಾರರು ತಮ್ಮಲ್ಲೂ ರಾಯಸದವರನ್ನು ನೇಮಿಸಿಕೊಂಡಿದ್ದರು. ಹರಪನಹಳ್ಳಿ ಪಾಳೆಯಗಾರರ ಆಡಳಿತದಲ್ಲಿ ರಾಯಸರವರ ಪಾತ್ರ ಬಹು ಪ್ರಮುಖವಾದದ್ದು. ರಾಯಸದ ತಿಮ್ಮಪ್ಪ ರಾಯಸದ ಶ್ರೀನಿವಾಸ ರಾಯಸದ ಉಪೇಂದ್ರರಾವ್ ಇವರ ಸೋದರ ಸಂಬಂಧಿಗಳ ಸುಮಾರು ಮೂವತ್ತು-ನಲವತ್ತು ಮನೆಗಳು ಹರಪನಹಳ್ಳಿಯಲ್ಲಿ ಈಗಲೂ ಇವೆ. ಹಾಸ್ಯ ಸಾಹಿತಿ 'ಬೀಚಿ' (ಭೀಮಸೇನರಾವ್ ಚಿರಂಜೀವಿಯವರು) ಇದೇ ರಾಯಸ ಮನೆತನಕ್ಕೆ ಸೇರಿದವರಾಗಿದ್ದಾರೆ. ಕೆಲವು ವೇಳೆ ರಾಯಸದವರು ಅರಸರಿಗೆ ಸೂಕ್ತ ಮಾರ್ಗದರ್ಶನವನ್ನು ಕೊಟ್ಟಿರುವುದಾಗಿಯೂ ತಿಳಿದು ಬಂದಿದೆ. ಬಾಗಳಿ ಬಸಪ್ಪನಾಯಕ ಮತ್ತು ಅವನ ಸರದಾರರನ್ನು ಹಗರಿಬೊಮ್ಮನಹಳ್ಳಿಗೆ ಕರೆ ತರಲು ಟಿಪ್ಪುಸುಲ್ತಾನನು ಸೈನಿಕರನ್ನು ಹರಪನಹಳ್ಳಿಗೆ ಕಳುಹಿಸಿದಾಗ ಅಲ್ಲಿಗೆ ಹೋಗುವುದು ಬೇಡವೆಂದು ಅರಸರಿಗೆ ವಿನಂತಿಸಿಕೊಂಡವರಲ್ಲಿ ರಾಯಸದ ತಿಮ್ಮಪ್ಪನವರು ಮತ್ತು ದಿವಾನ ವಿರುಪಾಕ್ಷಪ್ಪನವರು ಪ್ರಮುಖರಾಗಿದ್ದಾರೆ[೯].

**ದಿವಾನರು**

ಪ್ರಾಚೀನ ಕಾಲದಲ್ಲಿ ಮುಖ್ಯಮಂತ್ರಿಗಳಿಗೆ ದಿವಾನರೆಂದು ಕರೆಯಲಾಗುತ್ತಿತ್ತು. ರಾಜರ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು. ಇದೇ ಪರಂಪರೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಮುಂದುವರೆದಿತ್ತು. ಸರ್ ಥಾಮಸ್ ಮನ್ರೊ ಬಳ್ಳಾರಿ ಜಿಲ್ಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ಹೆಚ್ಚು ಸಮರ್ಥರೆಂದು ಹೇಳಿರುವುದು ಗಮನಾರ್ಹವಾಗಿದೆ. ಹಾಗೆಯೇ ಅದು ಸತ್ಯಕ್ಕೂ ಹತ್ತಿರವಾದದ್ದು. ಈ ಅರಸರಲ್ಲಿ ವಂಶಪಾರಂಪರ್ಯ ದಿವಾನರಾಗಿದ್ದುದು ಅರಸೀಕೆರೆ ಗ್ರಾಮದ ಒಂದು ಬ್ರಾಹ್ಮಣ ಮನೆತನ. ದಾದೇನಾಯಕನ ಕಾಲದಲ್ಲಿ ಇದೇ ಅರಸೀಕೆರೆ ಮನೆತನಕ್ಕೆ ಸೇರಿದ ಹಂಪರಸಪ್ಪ ದಿವಾನನಾಗಿದ್ದ. ಇವನು ರಾಜರಿಗೆ ಸಲಹೆ ಸೂಚನೆಗಳನ್ನು ನೀಡುತ್ತಾ ಆಡಳಿತ ಸುಗಮವಾಗಿ ನಡೆಯಲು ಕಾರಣನಾಗಿದ್ದನು. ಅರಸೀಕೆರೆ ದಿವಾನರ ಮನೆತನದಲ್ಲಿ ಕಂಡು ಬರುವ ಇತರ ದಿವಾನರಗಳೆಂದರೆ ಮೊದಲ ಹಂಪರಸರಾವ್, ಎರಡನೆಯ ಹಂಪರಸರಾವ್, ವಿರೂಪಾಕ್ಷಪ್ಪ. ಜನರು ಇವನಿಗೆ ಮೂರನೆಯ ಹಂಪರಸಪ್ಪನೆಂದು ಕರೆಯುತ್ತಿದ್ದರು. ದಿವಾನ ವಿರೂಪಾಕ್ಷಪ್ಪ ಹರಪನಹಳ್ಳಿ ಶ್ರೇಯೋಭಿವೃದ್ಧಿಗಾಗಿ ಜೀವನದುದ್ದಕ್ಕೂ ಶ್ರಮಿಸಿದ. ಇಂತಹ ದೂರದೃಷ್ಟಿ ಹಾಗೂ ನಿಷ್ಠೆಯುಳ್ಳ ನಿಸ್ವಾರ್ಥ ದಿವಾನರು ದೊರೆಯುವುದು ಇತಿಹಾಸದಲ್ಲಿ ಅಪರೂಪ. ದೊಡ್ಡ ದೊಡ್ಡ

ಹಜಾರಗಳನ್ನು ಹೊಂದಿರುವ ವಾಸ್ತುಕಟ್ಟಡಗಳು ಅರಸೀಕೆರೆಯಲ್ಲಿ ಕಂಡು ಬರುತ್ತವೆ. ಇಂದೂ ಸಹ ಬಹುತೇಕ ಇವುಗಳು ಇವರಿಗೆ ಸಂಬಂಧಿಸಿರಬಹುದು.

**ಗೌಡರು**

ಹರಪನಹಳ್ಳಿ ಪಾಳೆಯಗಾರರ ಕಾಲದ ಸಮಾಜದಲ್ಲಿದ್ದ ನಂತರದ ಸ್ತರವೇ ಗೌಡರು. ಸೋಮನಗೌಡ, ನೀಲಗುಂದ ಗ್ರಾಮದವರಾದರೂ ಹರಪನಹಳ್ಳಿ ಪಾಳೆಯಪಟ್ಟು ಸ್ಥಾಪಿಸುವ ಸಂದರ್ಭದಲ್ಲಿ ದಾದಾನಾಯಕರಿಗೆ ಸೂಕ್ತ ಸಲಹೆಗಳನ್ನು ಕೊಟ್ಟು ಆಪ್ತರಾಗಿದ್ದರು. ಈ ಮನೆತನದವರ ಆಶ್ರಯದಲ್ಲಿ ಎರಡನೆಯ ಸೋಮಶೇಖರನಾಯಕನ ಪತ್ನಿ ನೀಲಮ್ಮಾಜಿ ತನ್ನ ಕೊನೆಯ ದಿನಗಳನ್ನು ನೀಲಗುಂದದಲ್ಲಿಯೇ ಕಳೆದು ಸಮಾಧಿಯಾದಳು. ಎರಡನೆಯ ಸೋಮಶೇಖರನಾಯಕನ ಕಾಲದಲ್ಲಿ ಹರಪನಹಳ್ಳಿಗೆ ಮಲ್ಲನಗೌಡ ಗೌಡಿಕೆ ಮಾಡುತ್ತಿದ್ದ. ಆದರೆ ಮಲ್ಲನಗೌಡ ಒಂದು ಬಾರಿ ಅರಸ ಪ್ರೀತಿಸಿದ ವೇಶ್ಯೆಯ ಮನೆ ಹೋಗಿದ್ದ ಎಂಬ ವಿಚಾರವನ್ನು ತಳವಾರನೊಬ್ಬ ಅರಸರಿಗೆ ತಿಳಿಸಿದರಿಂದ ಕೋಪಗೊಂಡ ಅರಸ ಮಲ್ಲನಗೌಡನ ಮೇಲೆ ದಡ್ಡಿ ಕೇಸು ಹಾಕಿ ಗೌಡಿಕೆಯಿಂದ ವಜಾ ಮಾಡಿ ಹುಕುಂ ಹೊರಡಿಸಿದ[೧೦]. ಆಗ ಪಟ್ಟಣಕ್ಕೆ ಒಬ್ಬ ಗೌಡನ ಅವಶ್ಯಕತೆ ಉಂಟಾಯಿತು. ಈ ಸಂದರ್ಭದಲ್ಲಿ ಅರಸ ದಿವಾನನ ಸಲಹೆಯಂತೆ ಬಸವನಗೌಡ ಮತ್ತು ಬೆಟ್ಟನಗೌಡ ಎಂಬ ಹುಡುಗರನ್ನು ದತ್ತು ಪಡೆದು ಅವರ ಹೆಸರಿನಲ್ಲಿ ಗೌಡಿಕೆ ಸ್ಥಾಪಿಸಿದನು. ಇಂದೂ ಸಹ ಹರಪನಹಳ್ಳಿಯ ಗೌಡಿಕೆ ಮನೆತನದವರು ಶ್ರೀಮಂತ ಜೀವನ ನಡೆಸುತ್ತಿದ್ದಾರೆ.

**ದಳವಾಯಿಗಳು**

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ದಳವಾಯಿಗಳು ಪ್ರಮುಖ ಪಾತ್ರವಹಿಸಿದ್ದಾರೆ. ದಳವಾಯಿ ಸಂಜೀವನಾಯಕ ಮತ್ತು ನೀಲಗುಂದ ಕೆಂಚನಾಯಕರು ಪ್ರಮುಖರಾಗಿದ್ದಾರೆ. ಸಂಜೀವನಾಯಕ, ಸೋಮಶೇಖರನಾಯಕನ ಸೇನೆಯಲ್ಲಿದ್ದು ಪರಾಕ್ರಮಿ ಮತ್ತು ಅರಸರ ಅಂಗರಕ್ಷಕ ಪಡೆಯ ಮುಖ್ಯಸ್ಥನಾಗಿದ್ದನು. ಮೊದಲ ಸೋಮಶೇಖರನಾಯಕನು ಮಾಡಿದ ಅನೇಕ ಯುದ್ಧಗಳಲ್ಲಿ ಅವರಿಗೆ ನೆರಳಿನಂತೆ ಇದ್ದು ಯುದ್ಧ ಮಾಡಿ ಜಯ ತಂದು ಕೊಟ್ಟಿದ್ದನು. ಕೂಲಹಳ್ಳಿ ಬಯಲು ಯುದ್ಧದ ಒಂದು ಪ್ರಸಂಗ ಇದಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ. ಹಾಗಾಗಿ ಹರಪನಹಳ್ಳಿ ಪಾಳೆಯಗಾರರ ಇತಿಹಾಸದಲ್ಲಿ ಅಚ್ಚಳಿಯದೇ ಉಳಿದಿರುವ ಹೆಸರೆಂದರೆ ದಳವಾಯಿ ಸಂಜೀವನಾಯಕನದು[೧೧]. ಇವನು ಯುದ್ಧದಲ್ಲಿ ಒಂದು ವಿಶೇಷ ಕೌಶಲ್ಯವನ್ನು ಕರಗತ ಮಾಡಿಕೊಂಡಿದ್ದನಂತೆ. ಅದೇನೆಂದರೆ ಹತ್ತು ಮೊಳದ ಕಬ್ಬಿಣದ ಸರಪಳಿಯ ಒಂದು ತುದಿಯನ್ನು ಹಿಡಿದು ಶತ್ರುಗಳ ಮೇಲೆ ಬೀಸುತ್ತಿದ್ದನಂತೆ. ಆಗ ಸೈನಿಕರು ಆ ಹೊಡೆತ ತಾಳಲಾರದೆ ಓಡಿ ಹೋಗುತ್ತಿದ್ದರು. ಹಾಗಾಗಿ ಇವನಿಗೆ ಸರಪಳಿನಾಯಕನೆಂದೂ ಕರೆಯುತ್ತಿದ್ದರು[೧೨].

ನೀಲಗುಂದ ಗ್ರಾಮದ ಓರ್ವ ಬಡ ಕುಟುಂಬದ ವಾಲ್ಮೀಕಿ ಜನಾಂಗಕ್ಕೆ ಸೇರಿದ ಕೆಂಚಪ್ಪ ಎನ್ನುವ ಹುಡುಗ ಒಂದು ದಿನ ಮೊದಲ ಸೋಮಶೇಖರನಾಯಕ ಬೇಟೆಗಾಗಿ ನೀಲಗುಂದ ಅರಣ್ಯಕ್ಕೆ ಹೋಗಿದ್ದಾಗ ಮೊಲವೊಂದಕ್ಕೆ ಗುರಿಯಿಟ್ಟು ಬಾಣ ಹೊಡೆದಿದ್ದನ್ನು ಕಂಡು ಅರಸ ಊರ ಗೌಡರನ್ನು ಕರೆಯಿಸಿ ಹುಡುಗನ ತಂದೆಯ ಅನುಮತಿಯೊಂದಿಗೆ ತನ್ನ ಸೈನ್ಯಕ್ಕೆ ಸೇರಿಸಿಕೊಂಡನು. ಇವನು ಅತ್ಯಂತ ಪರಾಕ್ರಮಿ ಮತ್ತು ನಿಷ್ಠಾವಂತ ದಳವಾಯಿಯಾಗಿದ್ದನು. ಹಾಲಘಟ್ಟಿಯ ಯುದ್ಧದಲ್ಲಿ ತೋರಿ ಪರಾಕ್ರಮ ಸ್ವಾಮಿ ನಿಷ್ಠೆಗಾಗಿ ಪ್ರಾಣ ತ್ಯಾಗ ಮಾಡಿದ ಈ ಕೆಂಚಾನಾಯಕ ಹರಪನಹಳ್ಳಿ ಪಾಳೆಯಗಾರರ ಇತಿಹಾಸದಲ್ಲಿ ಹೆಸರಾಗಿದ್ದಾನೆ. ಇವರಲ್ಲದೆ ವ್ಯಾಪಾರಿಗಳು, ಕೃಷಿಕರು, ಕುಶಲಕರ್ಮಿಗಳು, ಜನಸಾಮಾನ್ಯರು ಸಮಾಜದ ಭಾಗವಾಗಿದ್ದು ವಿಜಯನಗರ ಸಾಮ್ರಾಜ್ಯ ನಂತರದ ಸಾಮಾಜಿಕ ಬೆಳವಣಿಗೆಯಲ್ಲಿ ನಾಡಿನ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವಲ್ಲಿ ಪ್ರಮುಖ ಪಾತ್ರವಹಿಸಿದ್ದರು.

## ೩.೨ ಸಾರ್ವಜನಿಕ / ಸಾಮಾಜಿಕ ಚಟುವಟಿಕೆಗಳು

ಪ್ರಾಚೀನ ಕಾಲದಿಂದಲೂ ರಾಜನಾದವನು ಪ್ರಜೆಗಳ ಹಾಗೂ ರಾಜ್ಯದ ಅಭಿವೃದ್ಧಿಗಾಗಿ ಅನೇಕ ಕಲ್ಯಾಣ ಕಾರ್ಯಗಳನ್ನು ಕೈಗೊಂಡಿರುವುದು ತಿಳಿದಿರುವ ಸಂಗತಿ. ಇದೊಂದು ಪವಿತ್ರ ಕರ್ತವ್ಯವಾಗಿತ್ತು. ಏಕೆಂದರೆ ರಾಜನಾದವನು ಪ್ರಜೆಗಳ ಯೋಗಕ್ಷೇಮದ ಬಗ್ಗೆ ಕಾಳಜಿ ವಹಿಸದಿದ್ದರೆ ಅವನು ಆಡಳಿತ ನಡೆಸುವುದು ಕಷ್ಟವಾಗುತ್ತಿತ್ತು. ಹಾಗಾಗಿ ಬಹುತೇಕ ರಾಜರು ವಿವಿಧ ಸಾರ್ವಜನಿಕ ಚಟುವಟಿಕೆಗಳನ್ನು ಕೈಗೊಂಡಿದ್ದರು. ಈ ಚಟುವಟಿಕೆಗಳಿಂದಾಗಿ ಸಮಾಜದ ಅಭಿವೃದ್ಧಿಯಲ್ಲಿ ಅನೇಕ ಕ್ರಾಂತಿಕಾರಿ ಬದಲಾವಣೆಗಳಾಗುತ್ತ ಬಂದಿವೆ. ಇದರ ಹಿನ್ನೆಲೆಯಾಗಿ ಧರ್ಮವೂ ಇದಕ್ಕೆ ಪ್ರೇರಣೆ ನೀಡಿದೆ. ದಾನ-ದತ್ತಿ ಜನಪೋಯೋಗವಾಗುವಂತಹ ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸುವ ಮೂಲಕ ಪುಣ್ಯ ಗಳಿಸುವುದು ಮುಖ್ಯ ಉದ್ಧೇಶವಾಗಿತ್ತು. ಈ ಕಾರ್ಯದಲ್ಲಿ ಜಾತಿ, ಮತ, ಪಂಥಗಳಾವುವು ಅಡ್ಡಿ ಬರಲಿಲ್ಲ. ಇದನ್ನು ಶಾಸನ 'ಪರಹಿತ ವೃತ್ತಿ' ಎಂದು ಬಣ್ಣಿಸಿದೆ[೧೩].

ನಾಡಿನಲ್ಲಿ ಶಾಂತಿ, ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವುದು ಎಷ್ಟು ಮುಖ್ಯವಾಗಿತ್ತೋ ಅದೇ ರೀತಿಯಾಗಿ ಜನಸಾಮಾನ್ಯರ ಅಗತ್ಯಗಳಿಗೆ ಪೂರಕವಾದ ಚಟುವಟಿಕೆಗಳನ್ನು ಕೈಗೊಳ್ಳುವುದು ಅಷ್ಟೇ ಮುಖ್ಯವಾಗಿತ್ತು. ಗ್ರಾಮಗಳು, ದೇವಾಲಯ, ಮಠಗಳು, ಕೆರೆ-ಬಾವಿ-ಕಟ್ಟೆಗಳು-ಸತ್ರಗಳು ಮುಂತಾದವುಗಳನ್ನು ನಿರ್ಮಿಸುವುದು ಮತ್ತು ಅವುಗಳ ವ್ಯವಸ್ಥೆಗಾಗಿ ದಾನ-ದತ್ತಿಗಳನ್ನು ಬಿಡುವ ಮೂಲಕ ತಮ್ಮ ಔದಾರ್ಯಗಳನ್ನು ಮೆರೆದಿದ್ದಾರೆ. ಧಾರ್ಮಿಕ ಹಿನ್ನೆಲೆಯಲ್ಲಿ ದೇವಾಲಯ-ಮಠ-ಸತ್ರಗಳ ಮೂಲಕ ವಿದ್ಯಾದಾನಕ್ಕೆ ಪ್ರಚೋದನೆ ನೀಡಿದರೆ ಕೆರೆ-ಬಾವಿ-ಕಟ್ಟೆಗಳ ಮೂಲಕ ನಾಡಿನ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಗೆ ಕಾರಣರಾಗಿದ್ದಾರೆ. ಎಲ್ಲಿ ಪ್ರಾಣಿ-ಪಕ್ಷಿಗಳು, ಮನುಷ್ಯರು

ನೀರು ಕುಡಿದು ಸಂತೃಪ್ತರಾಗುವರೋ ಅಲ್ಲಿ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆಂದು ಮಹಾಭಾರತ ಹೇಳುತ್ತದೆ[೧೪].

ವಿಜಯನಗರದ ಅರಸರು ಹೇಗೆ ಸಾರ್ವಜನಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ರಾಜ್ಯದ ಅಭಿವೃದ್ಧಿಗೆ ಕಾರಣರಾಗಿದ್ದರೋ ಹಾಗೆ ಅವರ ಸಾಮಂತರಾದ ಹರಪನಹಳ್ಳಿ ಪಾಳೆಯಗಾರರು ಸಹ ಅನೇಕ ಸಾರ್ವಜನಿಕ ಚಟುವಟಿಕೆಗಳನ್ನು ಕೈಗೊಂಡಿದ್ದರು. ಅವುಗಳಲ್ಲಿ ಪ್ರಮುಖವಾಗಿ ಗ್ರಾಮಗಳು, ಕೆರೆ, ಕಾಲುವೆ, ಕಟ್ಟೆ, ಬಾವಿಗಳು, ಅರವಟ್ಟಿಕೆಗಳು, ಪುಷ್ಕರಣಿಗಳು ಸತ್ರಗಳು, ವಿಶ್ರಾಂತಿಧಾಮಗಳು, ಗರಡಿ ಮನೆಗಳು ಮುಂತಾದವುಗಳನ್ನು ಗುರುತಿಸಬಹುದಾಗಿದೆ. ಇವರು ಸಹ ಇಂತಹವುಗಳನ್ನು ನಿರ್ಮಾಣ ಮಾಡಿದ್ದಕ್ಕೆ ಹಾಗೂ ಅವುಗಳ ನಿರ್ವಹಣೆಗಾಗಿ ದಾನ-ದತ್ತಿಗಳನ್ನು ಬಿಟ್ಟು ಶಾಸನಗಳನ್ನು ಹಾಕಿಸಿರುವುದನ್ನು ಕಾಣಬಹುದಾಗಿದೆ.

ಸಾಮಾನ್ಯವಾಗಿ ದಾನಗಳನ್ನು ಕೊಡುವಾಗ ಕೆಲವು ಅಳತೆ ಮಾಪನಗಳು ಕಂಡು ಬರುತ್ತವೆ. ಅವುಗಳೆಂದರೆ ಮತ್ತು, ಕಂಬ, ಕೊಳಗ, ಖಂಡುಗ ಮುಂತಾದವು. ಭೂಅಳತೆ ಮಾಪನಗಳು ಒಂದು ಭೂಮಿಯಿಂದ ಮತ್ತೊಂದಕ್ಕೆ ಒಂದು ಪ್ರದೇಶದಿಂದ ಮತ್ತೊಂದಕ್ಕೆ ಭಿನ್ನವಾಗಿರುವುದಿದೆ. ಮಣ್ಣಿನ ಫಲವತ್ತತೆ, ನೀರಾವರಿ ವ್ಯವಸ್ಥೆ, ಹೊಲ, ಗದ್ದೆ, ತೋಟ, ಮಣ್ಣಿನ ಗುಣಗಳನ್ನು ಆಧರಿಸಿ ಅಳತೆಯ ಕ್ರಮವನ್ನು ನಿಗದಿಪಡಿಸಲಾಗುತ್ತಿತ್ತು. ಉದಾಹರಣೆಗೆ ಕೃಷಿ ಯೋಗ್ಯ ಭೂಮಿಯು 'ಎರಮತ್ತು', 'ಕೆಂಗಾಡು ಮತ್ತರ್' ಎಂದು ಕರೆಯಲ್ಪಟ್ಟಿದೆ[೧೫]. ಸಾಮಾನ್ಯವಾಗಿ ಮತ್ತರಿನ ಅಳತೆ ಹೆಚ್ಚಾಗಿ ಬೆದ್ದಲನ್ನು ಹೇಳುವಾಗ ಉಪಯೋಗಿಸಲ್ಪಡುತ್ತದೆ. ಆದರೆ ಕೂಡ್ಲಿಗಿ ತಾಲ್ಲೂಕಿನ ರಾಜಭಾವನಹಳ್ಳಿ ಶಾಸನವು ಗದ್ದೆ-ಬೆದ್ದಲು ಎಂಬ ಎರಡು ಪದಗಳನ್ನು ಉಲ್ಲೇಖಿಸುತ್ತದೆ[೧೬]. ಗದ್ದೆ ಎಂದರೆ ಒಂದು. ಬೆದ್ದಲು ಎಂದರೆ ಎರಡು. ಒಂದು ಗದ್ದೆ ಅಳತೆಗೆ ಎರಡು ಬೆದ್ದಲು ಅಳತೆ ಕಂಡು ಬರುತ್ತದೆ. ಸಹಜವಾಗಿ ನೀರಾವರಿ ಮತ್ತು ಉತ್ಪತ್ತಿಗೆ ಅನುಗುಣವಾಗಿ ಮಾಡಿಕೊಂಡಿರುವ ವ್ಯತ್ಯಾಸಗಳಾಗಿವೆ.

ಕೂಡ್ಲಿಗಿ ತಾಲ್ಲೂಕಿನ ಹಳ್ಳ ಗ್ರಾಮದ ಶಾಸನ[೧೭] ಮತ್ತರು ಮತ್ತು ಕಂಬಗಳನ್ನು ಹೆಸರಿಸುತ್ತದೆ. ಕಂಬ ೫೦, ಕಂಬ ೧೫೧, ಹೀಗೆ ಉಲ್ಲೇಖಿಸುತ್ತದೆ. ಅಂದರೆ ಉದ್ದ x ಅಗಲ = ಚದುರ ಎಂದು ಅರ್ಥ ಮಾಡಿಕೊಳ್ಳಬೇಕು[೧೮]. ರಾಜಭಾವನಹಳ್ಳಿಯ ಶಾಸನ ಮತ್ತೊಂದು ಅಳತೆ ಮಾಪನವಾದ ಕೊಳಗದ ಬಗ್ಗೆ ತಿಳಿಸುತ್ತದೆ. ಅದರಲ್ಲಿ ಕೊಳಗ ಬೀಜವರಿ ಗದ್ದೆಯ ದಾನದ ಬಗ್ಗೆ ಉಲ್ಲೇಖವಿದೆ[೧೯].

**ಗ್ರಾಮಗಳು**

ಹರಪನಹಳ್ಳಿ ಪಾಳೆಯಗಾರರು ತಮ್ಮ ಕಾಲಾವಧಿಯಲ್ಲಿ ಅನೇಕ ನೂತನ ಗ್ರಾಮಗಳನ್ನು ನಿರ್ಮಿಸಿದ್ದಾರೆ. ದಾದಯ್ಯನಾಯಕ ಮೈದೂರು ಗ್ರಾಮದ ಗೌಡರ ಗೋದಲಿಯನ್ನು ಬಗೆಸಿದರು.

ಕಾರಣ ದನಗಳಿಗೆ ಖಾಯಿಲೆ ಬಂದಾಗ ಗೌಡರ ಗೋದಲಿಗೆ ಎರಡು-ಮೂರು ದಿನಗಳ ಕಾಲ ಕಟ್ಟಿದರೆ ಗುಣವಾಗುತ್ತಿತ್ತಂತೆ. ಆದ್ದರಿಂದ ಬಗೆಸಿದ ಸಂದರ್ಭದಲ್ಲಿ ಗೋದಲಿಯ ತಳದಲ್ಲಿ ಒಂದು ದೇವರ ಮೂರ್ತಿ ದೊರೆತಾಗ ಅದನ್ನು ದೊಡ್ಡ ಬಂಡಿಯಲ್ಲಿರಿಸಿ ಹರಪನಹಳ್ಳಿಗೆ ಸಾಗಿಸಿದರು. ಆದರೆ ದಾರಿ ಮಧ್ಯದಲ್ಲಿ ಗಾಡಿಯ ಅಚ್ಚು ಮುರಿದು ಕುಸಿದು ಬಿದ್ದಿದರಿಂದ ಅಲ್ಲಿಯೇ ದೇವಾಲಯವನ್ನು ರಚಿಸಿ ದೇವರನ್ನು (ವೆಂಕಟೇಶ-ತಿರುಮಲ) ಪ್ರತಿಷ್ಠಾಪಿಸಿದರು. ಆಗ ಅಲ್ಲಿ ಅರ್ಚಕರ ಕೆಲವು ಕುಟುಂಬಗಳು ವಾಸಿಸುತ್ತಿದ್ದವು. ಈಗ ನೂರು ಮನೆಗಳ ಒಂದು ಗ್ರಾಮವಾಗಿದ್ದು 'ದೇವರ ತಿಮ್ಮಲಾಪುರ'ವೆಂದು ಹೆಸರಾಗಿದೆ. ಹೀಗೆ ದಾದೇನಾಯಕನ ಕಾಲದಲ್ಲಿ ದೇವರತಿಮ್ಮಲಾಪುರ, ದಾದಾಪುರ ಗ್ರಾಮ ನಿರ್ಮಾಣವಾದವು[೨೦]. ಓಬಣ್ಣನಾಯಕನ ಹೆಸರಿನಲ್ಲಿ ಹರಪನಹಳ್ಳಿ ತಾಲ್ಲೂಕಿನಲ್ಲಿ 'ಓಬಳಾಪುರ' ಗಳೆಂಬ ಅನೇಕ ಗ್ರಾಮಗಳಿವೆ. ಮರಿಕೊಟ್ರಪ್ಪನಾಯಕನ ಕಾಲದಲ್ಲಿ ಹರಪನಹಳ್ಳಿ ಮತ್ತು ಹೂವಿನಹಡಗಲಿ ಮುಂತಾದ ತಾಲ್ಲೂಕುಗಳಲ್ಲಿ ಹೊಸ ಗ್ರಾಮಗಳು ಉದಯವಾದವು. ದಾನವ್ವ, ಧರ್ಮವ್ವ ಹಾಗೂ ಬಸವ್ವ ಎಂಬ ರಾಣಿಯರ ಹೆಸರಿನಲ್ಲಿ ದಾನವ್ವನಹಳ್ಳಿ, ಧರ್ಮಸಾಗರ, ನಾಗತಿಬಸಾಪುರ ಮತ್ತು ನೀರಿಲ್ಲದ ಬಸಾಪುರ, ಹರೇನಹಳ್ಳಿ ಗ್ರಾಮಗಳು ನಿರ್ಮಾಣವಾದವು[೨೧]. ಮೊದಲ ಬಸವಂತನಾಯಕ ಕೊಟ್ಟೂರು ಬಸವೇಶ್ವರಸ್ವಾಮಿಯ ಮೇಲಿನ ಭಕ್ತಿಯಿಂದ ತನಗೆ ಸೇರಿದ ಪ್ರದೇಶದಲ್ಲಿ 'ಬಸಾಪುರ' ಬಸವನ ಕೋಟೆ, ಕನಕನಬಸಾಪುರ ಮುಂತಾದ ಗ್ರಾಮಗಳನ್ನು ನಿರ್ಮಿಸಿದ್ದಾನೆ.

**ಕೆರೆಗಳು**

ಯಾವುದೇ ಧಾರ್ಮಿಕ ಕಾರ್ಯಗಳಿಗಿಂತ ಜನರಿಗೆ ದನಕರುಗಳಿಗೆ ಕುಡಿಯಲು ಹಾಗೂ ಕೃಷಿಗೆ ನೀರು ಪೂರೈಸುವುದು ಅತ್ಯಂತ ಪುಣ್ಯವಾದ ಕೆಲಸವೆಂದು ಬಲವಾದ ನಂಬಿಕೆ ನಮ್ಮ ಹಿರಿಯರಲ್ಲಿ ಬೆಳೆದು ಬಂದಿತ್ತು. ಪ್ರಾಚೀನ ಕಾಲದಿಂದಲೂ ರಾಜಮಹಾರಾಜರು ರಾಜ್ಯದ ರಕ್ಷಣೆ ಪ್ರಜೆಗಳ ಹಿತ ಮುಖ್ಯವೆಂದು ಭಾವಿಸಿದ್ದರು. ಹಾಗೂ ಕೃಷಿ ಪ್ರಧಾನವಾದ ಈ ದೇಶದಲ್ಲಿ ನೀರಾವರಿಯ ಅಗತ್ಯತೆಯನ್ನು ಮನಗಂಡಿದ್ದರು. ಆದರೆ ನಮ್ಮ ದೇಶವು ಕೃಷಿಗಾಗಿ ಮಳೆಯನ್ನೇ ಆಧರಿಸಿತ್ತು. ಹಾಗಾಗಿ ವರ್ಷವಿಡೀ ಕೃಷಿಗೆ ನೀರನ್ನು ಪೂರೈಸಲು ನಮ್ಮ ಪೂರ್ವಜರು ಪರ್ಯಾಯ ವ್ಯವಸ್ಥೆಗಳನ್ನು ಮಾಡಿಕೊಂಡರು. ಅದರ ಪರಿಣಾಮವೇ ಕೆರೆ, ಬಾವಿ, ಕಾಲುವೆ, ಕಟ್ಟೆಗಳ ನಿರ್ಮಾಣ. ಪ್ರಾಚೀನ ಕಾಲದ ಕೃಷಿಯ ಹಾಗೂ ಜಲಾಶಯಗಳ ಬಗ್ಗೆ ಅನೇಕ ಸಾಹಿತ್ಯಗಳು ಉಲ್ಲೇಖಿಸುತ್ತವೆ. ಪ್ರಮುಖವಾಗಿ ವೇದಗಳು ಮಹಾಭಾರತ-ರಾಮಾಯಣ ಕೃತಿಗಳು ಪುರಾತನ ಕಾಲದ ಜಲಾಶಯಗಳನ್ನು ಕುರಿತು ವಿವರ ನೀಡುತ್ತವೆ. ಪ್ರಾಚೀನ ಭಾರತದಲ್ಲಿ 'ವೃಕ್ಷಾಯುರ್ವೇದ' ಎಂಬ ಹೆಸರಿನ ಸಸ್ಯಗಳಿಗೆ ಸಂಬಂಧಿಸಿದ ಪುಸ್ತಕದಲ್ಲಿ ಜಲಾಶಯಗಳ ಪ್ರಸ್ತಾಪವಿದೆ. ಕ್ರಿ.ಶ.೧೦೦೦ ಕಾಲಮಾನದ ಮತ್ತೊಂದು ಪ್ರಾಚೀನ ಗ್ರಂಥ 'ಕೃಷಿಸೂತ್ರ' ನೀರಾವರಿಯ ಬಗ್ಗೆ ಪ್ರಸ್ತಾಪಿಸುತ್ತದೆ. ಹಾಗೆ ಪದ್ಮಪುರಾಣದಲ್ಲಿ

ಸರೋವರ, ಕೆರೆ, ತಟಾಕಗಳಿಗೆ ಸಂಬಂಧಿಸಿದ ಒಂದು ಅಧ್ಯಾಯವೇ ಇದೆ. ದಮ್ಮಪಾದ, ಮನುಸ್ಮೃತಿ, ಬುದ್ಧಜಾತಕಗಳಲ್ಲಿ ನೀರಾವರಿ ಕುರಿತು ಉಲ್ಲೇಖಗಳಿವೆ.

ಹದಿಮೂರನೆಯ ಶತಮಾನದಲ್ಲಿ ರಟ್ಟಕವಿಯ 'ರಟ್ಟಮತ' ಕೃಷಿಗೆ ಸಂಬಂಧಿಸಿದೆ. ಮಹಾಭಾರತದ ಸಭಾಪರ್ವದಲ್ಲಿ ನಾರದರು ಯುಧಿಷ್ಠಿರನನ್ನು ಕುರಿತು ದೇಶದಲ್ಲಿ ಕೃಷಿ ಕಾರ್ಯಗಳು ಸಂಪೂರ್ಣವಾಗಿ ಮಳೆಯನ್ನೆ ಅವಲಂಬಿಸಬಾರದು. ಆದ ಕಾರಣ ರಾಜ್ಯದಲ್ಲಿ ಯುಕ್ತ ಅಂತರಗಳಲ್ಲಿ ಕೆರೆಗಳನ್ನು ಕಟ್ಟಿಸಿ ಕೃಷಿ ಅಭಿವೃದ್ಧಿಯನ್ನು ಸಾಧಿಸಬೇಕು ಎಂದು ಉಪದೇಶ ನೀಡಿದ್ದಾನೆ. ಇಲ್ಲದಿದ್ದರೆ ಮಳೆಯಲ್ಲಿ ಏರುಪೇರು ಆದಾಗ ಅಂದರೆ ಸರಿಯಾಗಿ ಬಾರದೆ ಇದ್ದಾಗ ಕೆರೆ–ಬಾವಿಗಳಲ್ಲಿ ಕುಡಿಯಲು ನೀರಿಲ್ಲದೆ ಜನರಿಗೆ, ಪ್ರಾಣಿಪಕ್ಷಿಗಳಿಗೆ ತುಂಬಾ ತೊಂದರೆಯಾಗುತ್ತದೆ. ಹಾಗೆಯೇ ಕೌಟಿಲ್ಯನು ನಿರಂತರವಾಗಿ ಬೇರೆ ಯಾವುದಾದರೂ ಮೂಲಗಳಿಂದ ನೀರು ಸಂಗ್ರಹವಾಗುವಂತಹ ಅಣೆಕಟ್ಟು ಅಥವಾ ಜಲಾಶಯಗಳನ್ನು ಕಟ್ಟಲು ಮುಂದೆ ಬಂದವರಿಗೆ ಬೇಕಾದ ಸ್ಥಳ, ರಸ್ತೆ, ಮರುಟ್ಟು ಮುಂತಾದ ಅಗತ್ಯ ವಸ್ತುಗಳನ್ನು ನೀಡಬೇಕು[೨೩] ಎಂದು ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. 'ಮಿತಾಕ್ಷರ ಸಂಹಿತೆ' ಗ್ರಂಥದ ಕರ್ತೃ ವಿಜ್ಞಾನೇಶ್ವರನೂ ಸಹ ನೀರಾವರಿ ಕೆಲಸ ಕಾರ್ಯಗಳು ರಾಜ್ಯದ ಮೊದಲ ಕೆಲಸವಾಗಿದ್ದು ಅಣೆಕಟ್ಟುಗಳ ನಿರ್ಮಾಣದಿಂದ ಕೆಲವರಿಗೆ ಅನ್ಯಾಯವಾದರೂ ಹೆಚ್ಚಿನ ಜನರಿಗೆ ಅನುಕೂಲವಾಗುವುದರಿಂದ ಅಣೆಕಟ್ಟುಗಳ ನಿರ್ಮಾಣವನ್ನು ಯಾರೂ ವಿರೋಧಿಸಬಾರದು[೨೪] ಎಂದು ತನ್ನ ಗ್ರಂಥದಲ್ಲಿ ತಿಳಿಸಿದ್ದಾನೆ.

ಕೆರೆ ನೀರಾವರಿ ಪದ್ಧತಿಯ ಇತಿಹಾಸ ತುಂಬಾ ಪ್ರಾಚೀನವಾದುದು. ಕ್ರಿ.ಪೂ.೯೦೦೦ ವರ್ಷಗಳ ಹಿಂದೆಯೇ ನೀರಾವರಿಯನ್ನು ಕುರಿತು ಪ್ರಾಚೀನ ಮಾನವ ಅರಿತಿದ್ದನೆಂಬುದು ಅನೇಕ ಉತ್ಖನನಗಳಿಂದ ತಿಳಿದು ಬರುತ್ತದೆ. ಅರಬ್ ಬ್ಯಾಬಿಲೋನ್ ಮುಂತಾದ ದೇಶಗಳಲ್ಲಿ ಏಸುಕ್ರಿಸ್ತನ ಜನನಕ್ಕೆ ಪೂರ್ವದಲ್ಲಿಯೇ ನೀರಾವರಿ ವ್ಯವಸ್ಥೆ ಇತ್ತೆಂಬುದು ತಿಳಿದು ಬರುತ್ತದೆ. ೨೦೦೦ ವರ್ಷಗಳ ಹಿಂದೆಯೇ ಇರಾಕ್, ಜೋರ್ಡಾನ್, ಇಸ್ರೇಲ್‌ಗಳ ಗುಡ್ಡಗಾಡು ಜನರು ಒಡ್ಡುಗಳನ್ನು ನಿರ್ಮಿಸಿ ಚಿಕ್ಕ ಚಿಕ್ಕ ಕೆರೆಗಳನ್ನು ಕಟ್ಟುತ್ತಿದ್ದುದ್ದು ತಿಳಿದು ಬರುತ್ತದೆ. ಸಿಂಧೂಕೊಳ್ಳದ ಜನರು ಕಾಲುವೆ ನಿರ್ಮಿಸಿ ನೀರಾವರಿ ಮಾಡಿರುವುದನ್ನು ಕಾಣಬಹುದು. ಪ್ರಪಂಚದಲ್ಲಿ ಮೊದಲು ಜಲಾಶಯ ನಿರ್ಮಾಣ ಮಾಡಿದವರೆಂದರೆ ಈಜಿಪ್ಷಿಯನ್ನರು. ಮೆನಿಸ್ ಚಕ್ರವರ್ತಿಯ ಕಾಲದ ದೊಡ್ಡ ಕುರುಹುಗಳು ನೈಲ ನದಿಯಲ್ಲಿ ಕಂಡು ಬಂದಿವೆ. ಒಟ್ಟಾರೆಯಾಗಿ ಭಾರತದಲ್ಲೂ ಬಹು ಪ್ರಾಚೀನ ಕಾಲದಿಂದಲೂ ನೀರಾವರಿ ಇದ್ದು ಮಳೆ ಬಾರದಿರುವುದು ಹಾಗೂ ಕಡಿಮೆ ಮಳೆಯಾಗುವುದರಿಂದ ಕ್ಷಾಮಗಳು ತಲೆದೋರುತ್ತಿದ್ದವು. ಹಾಗಾಗಿ ನಮ್ಮ ಪೂರ್ವಜರು ಕೆರೆ–ಕಟ್ಟೆಗಳನ್ನು ನಿರ್ಮಿಸಿಕೊಂಡು ಅದರಲ್ಲಿ ಶೇಖರವಾದ ನೀರನ್ನು ಮಳೆಯಿಲ್ಲದ ಕಾಲದಲ್ಲಿ ಬಳಸತೊಡಗಿದರು. ಈ ಪರಂಪರೆಯನ್ನು ಹರಪನಹಳ್ಳಿ ಪಾಳೆಯಗಾರರೂ ಮುಂದುವರೆಸಿದರು.

ಸಾವಿರಾರು ವರ್ಷಗಳ ಹಿಂದೆ ನಿರ್ಮಿಸಲ್ಪಟ್ಟಿರುವ ಕೆರೆಗಳ ಬಗ್ಗೆ ಪ್ರಮುಖವಾಗಿ ಶಾಸನಗಳು ಮಾಹಿತಿಯನ್ನು ಒದಗಿಸುತ್ತವೆ. ಕ್ರಿ.ಪೂ.೨೦೦ರಿಂದ ಕ್ರಿ.ಶ.೧೮೦೦ರವರೆಗೆ ಅಸಂಖ್ಯಾತ ಕೆರೆಗಳು ಇದ್ದುದರ ಬಗ್ಗೆ ಸಾವಿರಾರು ಶಾಸನಗಳು ಬೆಳಕನ್ನು ಚೆಲ್ಲುತ್ತವೆ. ಜಲಾಶಯಯವೊಂದರ ಅತೀ ಪುರಾತನ ಶಾಸನವೆಂದರೆ ಕ್ರಿ.ಶ.೧೫೦ರ ರುದ್ರದಾಮನನ 'ಜುನಾಘಡ' ಶಾಸನ. ಹಾಗೆಯೇ ಕ್ರಿ.ಶ. ನಾಲ್ಕನೆಯ ಶತಮಾನಕ್ಕೆ ಸೇರಿದ್ದೆನ್ನಲಾದ ನಮ್ಮ ರಾಜ್ಯದ ಅತ್ಯಂತ ಪ್ರಾಚೀನವಾದ ಚಿತ್ರದುರ್ಗದ ಚಂದ್ರವಳ್ಳಿಯ ಕೆರೆ ಎಂಬುದು ಕದಂಬ ದೊರೆ ಮಯೂರವರ್ಮನ ಚಂದ್ರವಳ್ಳಿಯ ಶಾಸನದಿಂದ ತಿಳಿದು ಬರುತ್ತದೆ. ಕೆರೆಯ ನಿರ್ಮಾಣದ ಕುರಿತು ಅತ್ಯಂತ ಅಮೂಲ್ಯವಾದ ಶಾಸನವೆಂದರೆ ಆಂಧ್ರಪ್ರದೇಶದ ಕಡಪಾ ಜಿಲ್ಲೆಯ ಕ್ರಿ.ಶ.೧೩೬೯ರಲ್ಲಿ ದೊರೆತ 'ಪೋರುಮಾಮಿಲ್ಲ ಶಾಸನ'. ಇದನ್ನು ಕೆರೆ ನೀರಾವರಿಯ ಕೈಪಿಡಿ ಎಂದೇ ಕರೆಯಲಾಗಿದೆ. ಈ ಕೆರೆ ನಿರ್ಮಿತವಾದುದ್ದು ವಿಜಯನಗರದ ಎರಡನೆಯ ದೊರೆ ಬುಕ್ಕರಾಯ ಆಳ್ವಿಕೆಯಲ್ಲಿ[೨೬].

ಕರ್ನಾಟಕದ ಒಳಗಿನ ಶಾಸನಗಳಿಗೆ ಬಂದರೆ ಆದವಾನಿ[೨೭], ಬನವಾಸಿ[೨೮], ಚಂದ್ರವಳ್ಳಿ[೨೯], ಮತ್ತು ತಾಳಗುಂದ[೩೦] ಶಾಸನಗಳಲ್ಲಿ ರಾಜ್ಯದ ಜಲಾಶಯಗಳ ಪ್ರಾಚೀನತೆಯನ್ನು ತಿಳಿಯಲು ಸಹಾಯಕವಾಗಿದೆ. ನಾಲೆಗಳ ಬಗ್ಗೆ ಹೊಸಪೇಟೆಯ ಮುನಿರಾಬಾದಿನ ಶಾಸನ ಪ್ರಸ್ತಾಪಿಸುತ್ತದೆ[೩೧]. ಹೊಳೆನರಸೀಪುರದ ಕ್ರಿ.ಶ.೧೩೧೦ರ ಶಾಸನ ಒಂದು ಕೆರೆಯನ್ನು ಕಟ್ಟಲು ಆದ ಒಟ್ಟು ವೆಚ್ಚವನ್ನು[೩೨] ಹಾಸನ ಜಿಲ್ಲೆಯ ಬೋಳಕ್ಯಾತನಹಳ್ಳಿಯ ಶಾಸನ ಹೂಳು ತೆಗೆಯುವ ಬಗ್ಗೆ[೩೩] ಕೋಲಾರ ಜಿಲ್ಲೆಯ ರಾಜಗುಂಡ್ಲಹಳ್ಳಿ ಶಾಸನ ಕೆರೆ ನಿರ್ಮಾಣದಲ್ಲಿ ಅನುಸರಿಸಿದ ತಂತ್ರ ಮತ್ತು ಬಳಸಿದ ಪರಿಕರಗಳ ಬಗ್ಗೆ[೩೪], ಲಕ್ಷ್ಮೀಧರಾಮಾತ್ಯನ ಹಂಪಿ ಶಾಸನ, ತಾಯಿ ನನಗೆ ಹಾಲುಣಿಸುವಾಗ ಹಾಡುತ್ತಿದ್ದ ಜೋಗುಳಗಳಿಂದ ತಾನು ಕೆರೆ ಕಟ್ಟಿಸಲು, ಬಾವಿ ತೋಡಿಸಲು ಹೇಗೆ ಪ್ರೇರಣೆ ಹೊಂದಿದ[೩೫] ಎಂಬುದರ ಬಗ್ಗೆ ತಿಮ್ಮಲಾಪುರಕೆರೆಯ ಅಂಗಳದಲ್ಲಿ ಸಿಕ್ಕಿರುವ ಶಾಸನ ಕೆರೆಯಲ್ಲಿ ನೀರು ಒಂದು ಆಳು ಪ್ರಮಾಣದಷ್ಟಿರಬೇಕೆಂದು ಹೀಗೆ ಅನೇಕ ವಿಷಯಗಳ ಬಗ್ಗೆ ಪ್ರಸ್ತಾಪಿಸುತ್ತದೆ. ಈ ರೀತಿ ಕರ್ನಾಟಕದಲ್ಲಿ ದೊರೆತಿರುವ ನೂರಾರು ಶಾಸನಗಳಲ್ಲಿರುವ ಮಾಹಿತಿಯನ್ನು ಸಂಗ್ರಹಿಸಿದರೆ ಕೆರೆಗಳ ರಚನೆ, ಸಂರಕ್ಷಣೆ, ಕೆರೆಯ ಅಂಗಗಳು, ನೀರು ನಿಲ್ಲಬೇಕಾದ ಆಳ, ನಿರ್ಮಾಣದ ಉದ್ದೇಶ, ನಿರ್ಮಾಣಕ್ಕೆ ಬೇಕಾದ ಹಣ, ಜೀರ್ಣೋದ್ಧಾರ ಮುಂತಾದ ವಿಷಯಗಳನ್ನು ತಿಳಿಯಬಹುದಾಗಿದೆ.

ಶಾಸನಗಳು ಕೆರೆಗಳನ್ನು ಕೆರೆ, ಕಟ್ಟೆ, ಸಾಗರ, ಸಮುದ್ರ, ಹಾಗೂ ತಟಾಕ, ಹಿರಿಯಕೆರೆ, ಹೆಗ್ಗೆರೆ, ಪಿರಿಯಕೆರೆ, ಚಿಕ್ಕಕೆರೆ, ಕನ್ನೆಗೆರೆ ಅಥವಾ ಹೊಸಕೆರೆ ಎಂದು ವರ್ಣಿಸುತ್ತವೆಯೇ ವಿನಃ ಅವುಗಳ ಗಾತ್ರ ಹಾಗೂ ಅವುಗಳಿಂದ ನೀರಾವರಿ ಪ್ರದೇಶಗಳ ಬಗ್ಗೆ ಯಾವ ಸುಳಿವನ್ನೂ ನೀಡುವುದಿಲ್ಲ. ಆದರೆ ಕ್ರಿ.ಶ.೧೮೦೦ರಲ್ಲಿ ಮೈಸೂರಿನ ಉದ್ದಗಲಕ್ಕೂ ಪ್ರವಾಸ ಮಾಡಿದ ಫ್ರಾನ್ಸಿಸ್ ಬುಕಾನನ್ ದನಕರುಗಳಿಗೆ ಕುಡಿಯಲು ನೀರೊದಗಿಸುವ ದೊಡ್ಡ ಜಲಾಶಯವೇ ಕಟ್ಟೆ, ಭೂಮಿಗೆ ನೀರು ಹಾಯಿಸಲು

ಉಪಯೋಗಿಸುವ ದೊಡ್ಡ ಜಲಾಶಯವೇ ಕೆರೆ ಎಂದೂ ತಿಳಿಸಿದ್ದಾನೆ[೩೬]. ಅಲ್ಲದೆ ನೆಲದಲ್ಲಿ ಚೌಕಾಕಾರವಾಗಿ ಅಗಿದು ಮಾಡಿದ ಕೆರೆಯನ್ನು ಕುಂಟೆ ಎಂದೂ ಹೇಳುತ್ತಾನೆ[೩೭]. ಆದರೆ ಅಂತಹ ವರ್ಗೀಕರಣಕ್ಕೆ ಗೊತ್ತಾದ ನಿರ್ದಿಷ್ಟವಾದ ಗಾತ್ರ ಏನು? ಎಂಬುದನ್ನು ಬುಕಾನಾನ್ ತಿಳಿಸಿಲ್ಲ. ಮೇಜರ್ ಸ್ಯಾಂಕಿಯವರು ಹಳ್ಳಿಕೆರೆ ಮತ್ತು ತುದಿಯ ಕೆರೆಗಳೆಂಬ ವರ್ಗಿಕರಣ ನೀಡಿದ್ದಾರೆ. ಇವರ ಪ್ರಕಾರ ಹಳ್ಳಿ ಕೆರೆಗಳು ಚಿಕ್ಕದಾಗಿದ್ದು ಒಂದು ಹಳ್ಳಿಯ ಅಗತ್ಯವನ್ನು ಪೂರೈಸುವಂತಹವು. ತುದಿಯ ಕೆರೆಗಳು ದೊಡ್ಡದಾಗಿದ್ದು ಕಣಿವೆಯೊಂದು ಮುಖ್ಯ ನದಿ ಕಣಿವೆಯನ್ನು ಸೇರುವ ಕಡೆ ಕಟ್ಟಲಾದವು ಎಂದು ತಿಳಿಸಿದ್ದಾರೆ[೩೮].

ಹಾಗೆಯೇ ಕೆರೆಯ ಹೆಸರುಗಳನ್ನು ಪ್ರಮುಖವಾಗಿ ಗಾತ್ರ, ಆಕೃತಿ, ಪ್ರಭುತ್ವ, ಧರ್ಮ, ಸಾಧು ಸಂತರ, ಸ್ತ್ರೀಯರ, ವೃತ್ತಿಯ ಸಸ್ಯ, ಪ್ರಾಣಿ, ಊರುಗಳ ಮುಂತಾದವುಗಳ ಮೂಲದಿಂದ ಹೆಸರಿಸಲಾಗಿರುವುದನ್ನು ಕಾಣಬಹುದಾಗಿದೆ.

**ಹರಪನಹಳ್ಳಿ ಪಾಳೆಯಗಾರರ ಕಾಲದ ಕೆರೆಗಳು**

ವಿಜಯನಗರ ಅರಸರ ಸಾಮಂತರಾಗಿದ್ದ ಹರಪನಹಳ್ಳಿ ಪಾಳೆಯಗಾರರೂ ಕೂಡಾ ತಮ್ಮ ಅರಸರ ಪರಂಪರೆಯನ್ನು ಮುಂದುವರೆಸಿದರು. ಕ್ರಿ.ಶ.೧೪೧೦ರ ವಿಜಯನಗರ ಕಾಲದ ಶಾಸನವೊಂದು ಜಲಾಶಯ, ಕೆರೆ, ಕಟ್ಟೆ, ಕಾಲುವೆಗಳ ನಿರ್ಮಾಣ ಯಾವುದೇ ಧಾರ್ಮಿಕ ಕಾರ್ಯಗಳಿಗಿಂತಲೂ ಶ್ರೇಷ್ಠ ಮತ್ತು ಪುಣ್ಯದ ಕೆಲಸ ಎಂಬ ಧಾರ್ಮಿಕ ನಂಬಿಕೆ ಎಂಬುದನ್ನು ತಿಳಿಸುತ್ತದೆ[೩೯]. ಇಂತಹ ಕಾರ್ಯಗಳಿಂದ ಅರಸರಿಗೂ, ಅಧಿಕಾರಿಗಳಿಗೂ ಹಾಗೂ ಜನತೆಗೂ ಅನುಕೂಲವಾಗುತ್ತಿತ್ತು. ಆದ್ದರಿಂದ ವಿಜಯನಗರ ಅರಸರುಗಳು ತಮ್ಮ ಸಾಮ್ರಾಜ್ಯದಲ್ಲಿ ಸಣ್ಣ-ದೊಡ್ಡ ಕೆರೆಗಳನ್ನು, ಅಣೆಕಟ್ಟುಗಳನ್ನು ಕಟ್ಟಿಸಿದ್ದಲ್ಲದೆ ಹಳೆಯ ಕೆರೆಗಳನ್ನು ದುರಸ್ತಿಗೊಳಿಸಿ ನೀರಾವರಿ ಕ್ಷೇತ್ರವನ್ನು ವಿಸ್ತರಿಸಿದ್ದರು. ಶ್ರೀಕೃಷ್ಣದೇವರಾಯನು ತನ್ನ 'ಅಮುಕ್ತಮೌಲ್ಯದ' ಗ್ರಂಥದಲ್ಲಿ ಈ ಸಾಮ್ರಾಜ್ಯವು ನೀರಾವರಿ ವ್ಯವಸಾಯಕ್ಕಾಗಿ ಕೆರೆ-ಕಾಲುವೆಗಳ ಸೌಲಭ್ಯವನ್ನು ಒದಗಿಸಿ ಭೂಮಿಯನ್ನು ಅನುಕೂಲಕರವಾದ ಕಂದಾಯದ ದರದ ಮೇಲೆ ಬಡ ರೈತರಿಗೆ ವ್ಯವಸಾಯಕ್ಕೆ ಕೊಡಬೇಕು. ಇದರಿಂದ ಬೊಕ್ಕಸಕ್ಕೆ ಲಾಭವುಂಟು ಎಂದಿದ್ದಾನೆ[೪೦].

ತಮ್ಮ ರಾಜರಂತೆ ಪಾಳೆಯಗಾರರೂ ಸಹ ಕೃಷಿ ಮತ್ತು ಕುಡಿಯುವ ನೀರಿಗಾಗಿ ಅನೇಕ ಕೆರೆಕಟ್ಟೆಗಳನ್ನು ಕಟ್ಟಿಸಿದ್ದಲ್ಲದೆ ಅವರ ದಳವಾಯಿಗಳು, ಅಧಿಕಾರಿ ವರ್ಗದವರು ಸಹ ಕೆಲವು ಕೆರೆ-ಬಾವಿಗಳನ್ನು ನಿರ್ಮಿಸಿದ್ದಾರೆ. ಕೆರೆ, ಕುಂಟೆ, ಅಣೆಕಟ್ಟು, ಅಚ್ಚುಕಟ್ಟು, ತೊರೆ[೪೧], ಸಮುದ್ರ[೪೨], ಸರೋವರ[೪೩], ಮಳೆ[೪೪], ಹಳ್ಳ[೪೫], ಹೊಳೆ[೪೬], ನದಿಕಾಲುವೆ[೪೭], ಕೂಪಂ[೪೮], ಕಟ್ಟೆ, ಸೇತು, ತಟಾಕ[೪೯], ಏರಿ[೫೦], ಕೋಡಿ[೫೧], ತೂಬು[೫೨], ಕಾಡಾರಂಬ, ನೀರಾರಂಬ[೫೩], ಮುಂತಾದ ಉಲ್ಲೇಖಗಳು

ಶಾಸನಗಳಲ್ಲಿ ಬರುತ್ತವೆ. ಇವುಗಳನ್ನು ಕೃಷಿಯ ಉದ್ದೇಶಗಳಿಗಾಗಿ ಬಳಸಿದರೆ ಬಾವಿ[೫೪] ಮತ್ತು ತೀರ್ಥ[೫೫]ಗಳನ್ನು ಕುಡಿಯುವ ನೀರಿಗಾಗಿ ಮತ್ತು ಧಾರ್ಮಿಕ ಕಾರ್ಯಗಳಿಗಾಗಿ ಬಳಸಲಾಗುತ್ತಿತ್ತು. ಏತವನ್ನು ನೀರಾವರಿ ಬೇಸಾಯಕ್ಕೆ ಉಪಯೋಗಿಸಲಾಗುತ್ತಿತ್ತು. ಈ ಕೆರೆಗಳ ನಿರ್ಮಾಣವನ್ನು ಸೂಚಿಸುವ ಶಾಸನಗಳು ಕಡಿಮೆಯಿದ್ದು ದಾನವಾಗಿ ನೀಡಿದ ಪ್ರದೇಶದ ಸರಹದ್ದುಗಳ ವಿವರಣೆಯಲ್ಲಿ ಕೆರೆ, ಬಾವಿ, ಕಾಲುವೆ, ಹಳ್ಳಗಳ ಇರುವಿಕೆ ತಿಳಿದು ಬರುತ್ತದೆಯೇ ವಿನಃ ಇವುಗಳ ಗಾತ್ರ, ವಿಸ್ತೀರ್ಣ, ನೀರಾವರಿಯ ಹರವು, ನಿರ್ಮಾಣ ಕಾಲದ ಬಗೆಗಿನ ವಿವರಣೆಗಳು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

ಹರಪನಹಳ್ಳಿ ತಾಲ್ಲೂಕಿನಲ್ಲಿಯೇ ಒಟ್ಟು ೭೦ ಕೆರೆಗಳಿವೆ ಎಂದು ಅಂದಾಜು ಮಾಡಲಾಗಿದೆಯಾದರೂ ಅವುಗಳಲ್ಲಿ ಅನೇಕ ಕೆರೆಗಳು ಅಸ್ತಿತ್ವದಲ್ಲಿಲ್ಲ. ಒತ್ತುವರಿಯಾಗಿವೆ. ಹೊಲಗಳಾಗಿ ಮಾರ್ಪಟ್ಟಿವೆ, ಬಳ್ಳಾರಿ ಜಾಲಿ ಬೆಳೆದಿದೆ. ನೀರಾವರಿ ಇಲಾಖೆಯ ಪ್ರಕಾರ ಒಟ್ಟು ೬೧ ಕೆರೆಗಳಿವೆ. ತಾಲ್ಲೂಕಿನ ಸುಮಾರು ೭೦ ಕೆರೆಗಳಲ್ಲಿ ೪೦ಕ್ಕೂ ಹೆಚ್ಚು ಕೆರೆಗಳು ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣ ಹೊಂದಿರಬಹುದೆಂದು ಊಹಿಸಬಹುದಾಗಿದೆ. ಪಾಳೆಯಗಾರರ ಸಾಮಂತರು, ಊರಗೌಡರು, ಶ್ರೀಮಂತರೂ ಸಹ ಇದರಲ್ಲಿ ಮುಖ್ಯರಾಗಿದ್ದಾರೆ. ಸಾಮಾನ್ಯವಾಗಿ ಕೆರೆಗಳನ್ನು ಕಟ್ಟಿಸಿದ ವ್ಯಕ್ತಿಯ, ದೇವರ, ವೃತ್ತಿಯ, ಗ್ರಾಮದ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಹರಪನಹಳ್ಳಿ ತಾಲ್ಲೂಕಿನಲ್ಲಿ ವ್ಯಕ್ತಿಯ ಹೆಸರಿನಲ್ಲಿರುವ ಪ್ರಮುಖ ಕೆರೆಗಳೆಂದರೆ ಅಡಿಗನಕೆರೆ[೫೭], ಹಂಪನಕೆರೆ[೫೮], ಸಂಕನಕೆರೆ[೫೯] ಚಾಮಯನಕೆರೆ[೬೦]. ದೇಸೆನಾಯಕನಕೆರೆ[೬೧]. ಮಾಚಿಸೆಟ್ಟಿಯಕೆರೆ[೬೨], ಶಂಕರೋಝುರಕೆರೆ[೬೩], ವೃತಿಯ ಹೆಸರಿನಲ್ಲಿ ಬೆಣಗರಕೆರೆ[೬೪], ಯಾದಿಯಕೆರೆ[೬೫], ಅಯ್ಯನಕೆರೆ[೬೬], ಬಡಗಿಯಕೆರೆ[೬೭], ಅರಸನಕೆರೆ[೬೮], ಗ್ರಾಮದೇವರು, ಪ್ರಾಣಿ, ಕಾಡು ಮುಂತಾದವುಗಳ ಹೆಸರಿನಲ್ಲಿ ಬಿಕ್ಕಿಕನಕೆರೆ[೬೯], ಬೆಲ್ಲಿದಿಗೆರಿ[೭೦], ಪಡವಳಗೆರೆ[೭೧], ಅರಕೆರೆ[೭೨], ಮುಂತಾದವುಗಳನ್ನು ಕಾಣಬಹುದಾಗಿದೆ.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಈ ರೀತಿಯ ಹೆಸರುಗಳು ಇರುವುದನ್ನು ಕಾಣಬಹುದಾಗಿದೆ. ಉ.ಹ.ಗಾಗಿ ಹಿರೇಕೆರೆ, ಅಯ್ಯನಕೆರೆ, ಆಲಮಸೀಕೆರೆ ಶಿವನಯ್ಯನಕೆರೆ ಇವರು ಕೆರೆಗಳ ಸುರಕ್ಷತೆಗಾಗಿ ಹಾಗೂ ದುರಸ್ತಿಗಾಗಿ ಅನೇಕ ದಾನ-ದತ್ತಿ ನೀಡಿರುವುದು ಕಂಡು ಬರುತ್ತದೆ. ಇದನ್ನು ಶಾಸನಗಳು 'ಬಿತ್ತುವಾಟ' ಅಥವಾ 'ಬೆತ್ತುವಾಟ' ಎಂದು ಕರೆದಿವೆ[೭೩]. ಬಾಗುಳಿ ಹರಿಯಮ್ಮಾಜಿಯ ಕ್ರಿ.ಶ. ೧೭೧೦ರ ಭೂದಾನ ಪಟ್ಟೇದವು ಕೊರೆಗಲ್ಲು ಕಾಲುವೆ ಕಟ್ಟಿ ಕಟ್ಟಿಸಿದ ಉಲ್ಲೇಖ ನೀಡುತ್ತದೆ.

**ಹಿರೇಕೆರೆ**

ಹರಪನಹಳ್ಳಿ ಪಾಳೆಯಗಾರರ ಕಾಲಾವಧಿಯಲ್ಲಿ ನಿರ್ಮಾಣಗೊಂಡಿರುವ ಅಥವಾ ದುರಸ್ತಿಗೊಳಗಾಗಿರುವ ಅನೇಕ ಕೆರೆಗಳನ್ನು ಕ್ಷೇತ್ರಕಾರ್ಯದಲ್ಲಿ ನೋಡಲಾಗಿದೆ. ಈ ಎಲ್ಲಾ ಕೆರೆಗಳು

ಇವರ ಪ್ರಮುಖ ಸಾಮಾಜಿಕ ಕಾರ್ಯಗಳಾಗಿದ್ದು ಇಲ್ಲಿಯ ಸಾಮಾಜಿಕ, ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಬರಗಾಲದ ನಾಡೆಂದೇ ಕರೆಯಲ್ಪಡುವ ಈ ಪ್ರದೇಶದಲ್ಲಿ ಪಾಳೆಯಗಾರರ ಕೆರೆ-ಕಾಲುವೆಗಳು ಜೀವಸೆಲೆಗಳಾಗಿದ್ದವು. ಅರಸೀಕೆರೆ, ಅಯ್ಯನಕೆರೆ, ಆಲಮರಸೀಕೆರೆ, ನಾರಾಯಣದೇವರಕೆರೆ, ಕಂಚಿಕೆರೆ, ಬಾಗಳಿಕೆರೆ, ಹಿರೇಮೇಗಳಗೇರಿ ಕೆರೆ, ನಿಚ್ಚವ್ವನಹಳ್ಳಿ ಕೆರೆ, ಚಿಕ್ಕಮೇಗಳಗೇರಿ ಕೆರೆ, ಡಾಣಾಯಕನ ಕೆರೆ, ಕೂಲಹಳ್ಳಿ ಕೆರೆ ಹಿರೇಕೆರೆ, ಚಿಗಟೇರಿ ಶಿವನಯ್ಯನಕೆರೆ, ಚಿಕ್ಕಹಳ್ಳಿ ಕೆರೆ ಮುಂತಾದವುಗಳನ್ನು ಹೆಸರಿಸಬಹುದು. ಇವುಗಳಲ್ಲಿ ಕೆಲವೇ ಕೆಲವು ಕೆರೆಗಳನ್ನು ಪಾಳೆಯಗಾರರ ದಾಖಲೆಗಳಿಂದ ದೃಢಪಡಿಸಬಹುದು. ಉಳಿದವುಗಳನ್ನು ಸ್ಥಳೀಯ ಜನರ ಅಭಿಪ್ರಾಯ, ಹೇಳಿಕೆಗಳು ಭೌಗೋಳಿಕ ಪರಿಸರ ಮುಂತಾದವುಗಳನ್ನು ಅವಲೋಕಿಸಿ ಇವು ಪಾಳೆಯಗಾರರ ಕಾಲದವುಗಳೆಂದು ಅಂದಾಜಿಸಬಹುದು ಮುಖ್ಯವಾದವುಗಳಲ್ಲಿ ಕೆಲವನ್ನು ವಿವರಿಸಲಾಗಿದೆ.

ಹರಪನಹಳ್ಳಿಯ ಮೊದಲ ಅರಸ ದಾದೇನಾಯಕನ ಪುತ್ರನಾದ ರಂಗಣ್ಣನಾಯಕನ ಅಧಿಕಾರಿ ಡಣ್ಣಾಯಕ ಮುದ್ದನೆಂಬುವನು ಹಿರೇಕೆರೆ ಮತ್ತು ನಾಯಕ ಕೆರೆಯನ್ನು ನಿರ್ಮಿಸಿದನು. ಹಿರೇಕೆರೆಯನ್ನು ಏಳು ಕಲ್ಲುಗಳ ಸಾಲಿನಿಂದ ಕಟ್ಟಲಾಗಿದೆ[೭೪]. ಈ ಕೆರೆ ಇಂದಿಗೂ ಸುಸ್ಥಿತಿಯಲ್ಲಿದೆ. ಈ ಕೆರೆಯು ಎರಡು ತೂಬುಗಳನ್ನು ಹೊಂದಿದ್ದು ಬಲ ಮತ್ತು ಎಡಕಾಲುವೆಗಳಿವೆ. ಬಲಕಾಲುವೆಯು ೦.೧೦ ಕಿ.ಮೀ. ಎಡಕಾಲುವೆ ೦.೧೫ ಕಿ.ಮೀ. ಉದ್ದಳತೆಯನ್ನು ಹೊಂದಿವೆ. ಈ ಕೆರೆಯ ಒಟ್ಟು ಅಚ್ಚುಕಟ್ಟು ಪ್ರದೇಶ ೩೦.೨೦ ಹೆಕ್ಟೇರ್‌ಗಳಾಗಿದ್ದು, ೧.೮೯ ಹೆಕ್ಟೇರ್ಸ್ ಜಲಾವೃತ ಪ್ರದೇಶವನ್ನು ಹೊಂದಿದೆ. ಇದರ ಏರಿಯ ಉದ್ದ ೯೬೦.೧೪ ಮೀ. ಎತ್ತರ ೫.೭೫ ಮೀ ಆಗಿದೆ. ಈಗ ಈ ಕೆರೆಯನ್ನು ಹಿರೇಕೆರೆ ಎಂದು ಕರೆದರೂ ಹಿಂದಿನ ಹೆಸರು ನಾಯಕನ ಕೆರೆ ಎಂದಾಗಿತ್ತು. ಇದರ ಒಳಭಾಗದ ಏರಿಯನ್ನು ಲಂಬವಾಗಿ ದೊಡ್ಡ ದೊಡ್ಡ ಏಳು ಸಾಲು ಕಲ್ಲುಗಳನ್ನಿಟ್ಟು ಕಟ್ಟಿದವುದರಿಂದ 'ಏಳು ಮೆಟ್ಟಿಲಿನ ಕೆರೆ' ಎಂದು ಕರೆಯಲಾಗಿದೆ. ಕೆರೆಗೆ ಎರಡೂ ಕಡೆ ಮೆಟ್ಟಿಲುಗಳಿದ್ದು ಅವುಗಳನ್ನು 'ಅಕ್ಕತಂಗಿಯರ ಮೆಟ್ಟಿಲು' ಎಂದು ಕರೆಯುತ್ತಾರೆ.

**ಶಿವನಯ್ಯನಕೆರೆ**

ಮೊದಲ ಬಸವಂತಪ್ಪನಾಯಕನ ಸಾಮಂತ ಶಿವಪ್ಪನಾಯಕನು ಚಿಗಟೇರಿಯಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಗುಡ್ಡದ ಪಕ್ಕದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು[೭೫]. ಚಿಗಟೇರಿಯಲ್ಲಿ ಆಗ ಇದ್ದ ಚಿಕ್ಕೇರಿಕೆರೆ ಮತ್ತು ಹಿರೇಕೆರೆಗಳು ಮಣ್ಣಿನಿಂದ ಹೂತು ಹೋಗಿದ್ದರಿಂದ ಶಿವನಪ್ಪನಾಯಕ ಈ ಕೆರೆಯನ್ನು ಕಟ್ಟಿಸಿದನೆಂದು ಹೇಳಲಾಗಿದೆ. ಈ ಕೆರೆಯಲ್ಲೂ ಹೆಚ್ಚು ನೀರು ಸಂಗ್ರಹವಾಗಲಿಲ್ಲ. ಆಗ ಹರಪನಹಳ್ಳಿ ಪಟ್ಟಣದ ಪಶ್ಚಿಮ ಭಾಗದ ಕುಂಚೂರು ಹಲುವಾಗಲು ಬಳಿ ಹರಿದಿರುವ ತುಂಗಭದ್ರಾ ನದಿಗೆ ಅಣೆಕಟ್ಟು ಕಟ್ಟಿಸಿ ತುಂಗಭದ್ರಾ ನದಿಯ ಪ್ರದೇಶ ಮಟ್ಟಕ್ಕಿಂತ ಹರಪನಹಳ್ಳಿ ಪಟ್ಟಣವನ್ನು ಸೇರುವ

ಚಿಗಟೇರಿಗೆ ಬರುವ ಪ್ರದೇಶ ಬಹಳ ಎತ್ತರವಾಗಿದ್ದುದರಿಂದ ಶಿವನಪ್ಪನಾಯಕನ ಪ್ರಯತ್ನ ಅಥವಾ ಯೋಜನೆ ವಿಫಲವಾಯಿತು. ಹಲುವಾಗಿಲು ಬಳಿ ನದಿಗೆ ಒಡ್ಡು ಹಾಕುವ ನೀರು ಹರಿಸುವ ಇವನ ಪ್ರಯತ್ನದ ಕೆಲವು ಗುರುತುಗಳು ಈಗಲೂ ಕಂಡು ಬರುತ್ತವೆ. ಇವನು ಕಟ್ಟಿಸಿದ ಕೆರೆಗೆ ಶಿವನಯ್ಯನ ಅಥವಾ ಶಿವನಪ್ಪಕೆರೆ[೭೭] ಎಂದು ಹೆಸರಾಗಿದೆ. ಅರಸ ಬಸವಂತಪ್ಪನಾಯಕನು ನಾರಾಯಣ ದೇವರಕೆರೆಯ ಕಾಲುವೆಯನ್ನು ದುರಸ್ತಿಪಡಿಸಿದನೆಂದು ತಿಳಿದು ಬಂದಿದೆ[೭೮]. ಅಲ್ಲದೆ ಇವನು ಮ್ಯಾರಿಹಳ್ಳಕ್ಕೆ ಒಡ್ಡು ಹಾಕಿಸಿ ನಾರಾಯಣದೇವರ ಕೆರೆಯ ಹೂಳನ್ನು ಎತ್ತಿಸಿ ಕೆರೆ ಏರಿಯನ್ನು ಎತ್ತರವಾಗಿಸಿ ಸದಾ ಕೆರೆಯಲ್ಲಿ ನೀರಿರುವಂತೆ ಮಾಡಿ ಮದಗ ಮತ್ತು ಎರಡು ಕೋಡಿಗಳನ್ನು ಕಟ್ಟಿಸಿದನು. ಹೀಗೆ ನೀರಾವರಿ ಅಭಿವೃದ್ಧಿಗಾಗಿ ಮಾಡಿದ ಕಾರ್ಯಗಳಿಂದ ಈ ನಾಯಕನಿಗೆ 'ಅಂಡಮುಗಿಲಿಗೆ ಬಾಯಿ ತೆಗೆಯುವವರ ಗಂಡ' ಎಂಬ ಬಿರುದು ನೀಡಲಾಗಿತ್ತು ಎಂದು ಹೇಳಲಾಗಿದೆ[೭೯].

**ಕುಂಚೂರು ನಾಯಕನಕೆರೆ**

ಮೊದಲ ಸೋಮಶೇಖರನಾಯಕನ ಕಾಲದಲ್ಲಿ ಹರಪನಹಳ್ಳಿಯಲ್ಲಿ ಒಂದು ಕೆರೆ ಕಟ್ಟಿಸಿದ. ಇದಕ್ಕೆ 'ನಾಯಕನ ಕೆರೆ' ಎಂದು ಕರೆಯುತ್ತಾರೆ. ಹಾಗೆಯೇ ಕುಂಚೂರು ಗ್ರಾಮದಲ್ಲಿ ಎರಡು ಕೆರೆಗಳಿದ್ದು ಒಂದು ಹೊಲವಾಗಿ ಮಾರ್ಪಟ್ಟಿದೆ. ಅದನ್ನು 'ನಾಯಕನಕೆರೆ' ಎಂದು ಕರೆಯುತ್ತಿದ್ದರು. ಇನ್ನೊಂದು ಮತ್ತೂರು ಗುಡ್ಡದ ಬಳಿಯಿರುವ ಕೆರೆ ಈಗ ಹೂಳು ತುಂಬಿ ಮುಳ್ಳು ಜಾಲಿಗಿಡಗಳು ಬೆಳೆದು ಅದರ ಒಡ್ಡು ಹಾಳಾಗಿದೆ. ಇದರ ರಚನೆ ಮತ್ತು ಕಾಲದ ದೃಷ್ಟಿಯಿಂದ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಕಟ್ಟಿರಬಹುದೆಂದು ಸಾಹಿತಿ ಕುಂ.ಬಾ.ಸದಾಶಿವಪ್ಪನವರು ಅಭಿಪ್ರಾಯಪಟ್ಟಿದ್ದಾರೆ. ಬಸವರಾಜ ಕುಂಚೂರುರವರು ಸಹ ಪಾಳೆಯಗಾರರ ಕಾಲದಲ್ಲಿ ಕಟ್ಟಿಸಿದ್ದಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಯಾವ ಪಾಳೆಯಗಾರರ, ಯಾವಾಗ ಕಟ್ಟಿಸಿದನೆಂಬುದಕ್ಕೆ ದಾಖಲೆಗಳಿಲ್ಲ. ತಾಲ್ಲೂಕಿನ ಮಧ್ಯಮ ಗಾತ್ರದ ಕೆರೆಗಳಲ್ಲಿ ಕುಂಚೂರು ಕೆರೆಯೇ ದೊಡ್ಡದು. ಈ ಕೆರೆಯ ಮತ್ತೊಂದು ವಿಶೇಷವೆಂದರೆ ಮಧ್ಯಮ ಗಾತ್ರದ ಅತಿ ಉದ್ದವಾದ ಏರಿಯನ್ನು ಹೊಂದಿರುವುದು. ಅಂದರೆ ೨೦೭೪ ಮೀಟರ್ ಉದ್ದವಿದೆ. ಎರಡು ತೂಬು, ಎರಡು ನಾಲೆಗಳನ್ನು ಹೊಂದಿರುವ ಇದರ ಒಟ್ಟು ಅಚ್ಚುಕಟ್ಟು ಪ್ರದೇಶ ೧೦೯.೫೩ ಹೆಕ್ಟೇರ್‌ನಷ್ಟಿದ್ದು ೪.೦೯ ಹೆಕ್ಟೇರ್ಸ್ ಜಲಾವೃತ ಪ್ರದೇಶವನ್ನು ಹೊಂದಿದೆ. ೪.೫ ಮೀ. ಎತ್ತರವನ್ನು ಹೊಂದಿರುವ ಈ ಕೆರೆಯ ಸಾಮರ್ಥ್ಯ ೧೯.೩೪ ಎಂಸಿ.ಎಫ್.ಟಿ.ಯಾಗಿದೆ. ಕೆರೆಯ ಏರಿಯ ಮೇಲ್ಭಾಗದ ಅಗಲ ೧.೨೨ ಮೀಟರ್[೮೦]. ಈಗ ಈ ಕೆರೆಗೆ ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಯೋಜನೆಯಿದೆ.

ಈ ಕುಂಚೂರು ಗ್ರಾಮ ಹರಪನಹಳ್ಳಿ ತಾಲ್ಲೂಕಿನ ತೆಲಗಿ ಹೋಬಳಿಗೆ ಸೇರಿದೆ. ಕೋಗಳಿಯನ್ನಾಳಿದ ಅರಸ ಕ್ರೌಂಚನ ಹೆಸರಿನಲ್ಲಿ ಸ್ಥಾಪನೆಯಾದ ಈ ಗ್ರಾಮ ಕ್ರೌಂಚಪುರವೆಂದು

ಮುಂದೆ ಶಾಸನದಲ್ಲಿ ಕೊಂಚಾಪುರವೆಂದು ಉಲ್ಲೇಖಗೊಂಡಿದೆ. ಕೊಂಚಾಪುರವೇ ಕುಂಚೂರು ಆಗಿದೆ[೮೧]. ಕುಂಚೂರು ಪಾಳೆಯಗಾರರ ಕಾಲದಲ್ಲಿ ಪ್ರಮುಖ ಸ್ಥಳವಾಗಿದ್ದು ಅಲ್ಲಿನ ದಳಪತಿಗಳು ಹೊಳಲು ಗ್ರಾಮದಲ್ಲಿ ವಾಸ ಮಾಡುತ್ತಾ ಪಾಳೆಯಪಟ್ಟಿನ ಗಡಿ ರಕ್ಷಣೆ ಮಾಡುತ್ತಿದ್ದರು.

**ಅಯ್ಯನಕೆರೆ**

ಎರಡನೆಯ ಸೋಮಶೇಖರನಾಯಕನ ತಂದೆ ಅಯ್ಯಪ್ಪನಾಯಕನ ಹೆಸರಿನಲ್ಲಿ ಕ್ರಿ.ಶ. ಹದಿನೈದನೆಯ ಶತಮಾನದಲ್ಲಿ ಕಟ್ಟಲಾದ 'ಅಯ್ಯನಕೆರೆ' ಹರಪನಹಳ್ಳಿ ಪಟ್ಟಣದಲ್ಲಿದೆ. ಇದು 'ಅಯ್ಯನಕೆರೆ' ಎಂತಲೂ ಕರೆಯಲ್ಪಟ್ಟಿದೆ[೮೨]. ಹರಪನಹಳ್ಳಿ ತಾಲ್ಲೂಕಿನ ಮೀನುಗಾರಿಕೆ ಕೆರೆಗಳಲ್ಲಿ ಈ ಕೆರೆಯೇ ಪ್ರಮುಖವಾಗಿದೆ. ಈ ಕೆರೆ ಚಿಕ್ಕದಾಗಿದ್ದು ಒಂದು ಕಾಲುವೆಯನ್ನು ಹೊಂದಿದೆ. ಇದರ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣ ೧೪.೯೦ ಹೆಕ್ಟೇರ್ಸ್ ಇದ್ದರೆ ೧.೦೯ ಹೆಕ್ಟೇರ್ಸ್ ಅಳತೆಯ ಜಲಾವೃತ ಪ್ರದೇಶವನ್ನು ಹೊಂದಿದೆ. ಏರಿಯ ಉದ್ದ ೮೬.೦೧ ಮೀ. ಎತ್ತರ ೫.೫೦ ಮೀ. ಆಗಿದೆ[೮೩]. ಚಿಕ್ಕದಾದರೂ ಈ ಕೆರೆ ಮೀನುಗಾರಿಕೆಯ ಪ್ರಮುಖ ಕೇಂದ್ರವಾಗಿರುವುದರಿಂದ ಎಲ್ಲರ ಗಮನ ಸೆಳೆಯುತ್ತದೆ.

**ಶೃಂಗಾರತೋಟಕೆರೆ**

ಹರಪನಹಳ್ಳಿ ಹೋಬಳಿಗೆ ಸೇರಿದ ತಾಲ್ಲೂಕು ಕೇಂದ್ರದಿಂದ ೬ ಕಿ.ಮೀ. ದೂರದಲ್ಲಿರುವ ಹರಪನಹಳ್ಳಿ ಪಾಳೆಯಪಟ್ಟಿಗೆ ಒಳಪಟ್ಟ ಗ್ರಾಮ 'ಶೃಂಗಾರತೋಟ' ದಲ್ಲಿ ಒಂದು ಕೆರೆಯಿದೆ. ಇದು ಅರಸರ ತೋಟಗಳನ್ನು ಹೊಂದಿದ್ದರಿಂದ ಇದಕ್ಕೆ 'ಶೃಂಗಾರತೋಟ'ವೆಂದು ಹೆಸರಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಹಾಗೆಯೇ ಪಾಳೆಯಗಾರರಿಗೆ ಉಲ್ಲಾಸ ನೀಡುವ ತೋಟವೂ ಆಗಿರಬಹುದೆಂದು ಹೇಳಲಾಗಿದೆ. ಹಾಗಾಗಿ ಇಲ್ಲಿಯ ಕೆರೆ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ತಿಳಿಯಬಹುದಾಗಿದೆ. ಆದರೆ ಇದರ ಇತಿಹಾಸವನ್ನು ತಿಳಿಸುವಂತಹ ಯಾವ ದಾಖಲೆಗಳು ಇದುವರೆಗೂ ಕಂಡು ಬಂದಿಲ್ಲ.

**ಅಲಮರಸೀಕೆರೆ**

ರಾಜ ಸೋಮಶೇಖರನಾಯಕ ತನ್ನ ಅತ್ತೆ ಅಲ್ಲಮರಾಣಿ ಉಸ್ತುವಾರಿಕೆಗಾಗಿ ಈ ಪುಟ್ಟ ಸಂಸ್ಥಾನವನ್ನು ದಾರೆ ಎರೆದಿದ್ದನಂತೆ. ಅಲ್ಲಮರಾಣಿ ಹಾಗೂ ಆಕೆಯ ಪತಿ ಸಿದ್ದಪ್ಪನಾಯಕ ಪಕ್ಕದ ಗೋವೇರಹಳ್ಳಿ ಹಾಗೂ ಅಲಮರಸೀಕೆರೆ ಗ್ರಾಮಗಳ ಹೆಚ್ಚು ಜನರು ಅವಲಂಬಿಸಿದ್ದ ಹೈನುಗಾರಿಕೆಯ ಜಾನುವಾರು ಸಂತತಿ ಹಾಗೂ ನೀರಾವರಿಗೆ ಅನುಕೂಲ ಮಾಡಿ ಕೊಡುವ ಉದ್ದೇಶದಿಂದ ಊರಿಗೆ ಹೊಂದಿಕೊಂಡಂತೆ ಕೆರೆಯೊಂದನ್ನು ಕಟ್ಟಿಸಿದ್ದಾರೆ. ರಾಣಿಯ ಕುರುಹಾದ ಅಲ್ಲಮ್ಮದೇವಿ ದೇವಸ್ಥಾನ ಈಗಲೂ ಕೆರೆಯ ದಂಡೆಯ ಮೇಲಿದೆ. ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ದೊರೆ

ಶ್ರೀಕೃಷ್ಣದೇವರಾಯ ಹಾಗೂ ಅಲ್ಲಮರಾಣಿಯ ರಾಜ ಸೋಮಶೇಖರನಾಯಕ ದೊರೆಯ ಸಂಸ್ಥಾನಕ್ಕೆ ದಿನಾಲೂ ಇಲ್ಲಿಂದಲೇ ಹಾಲು-ಮೊಸರು ರವಾನೆಯಾಗುತ್ತಿತ್ತಂತೆ. ಹೀಗಾಗಿ ಇದಕ್ಕೆ 'ಅಲ್ಲಮನರಾಣಿಯಕೆರೆ' ಎಂದು ನಂತರ 'ಹಾಲುಮೊಸರಿನಕೆರೆ'ಯಾಗಿ ರೂಢಿಗತವಾಗಿದೆ ಎಂದು ಊರಿನ ಪ್ರಮುಖರೊಬ್ಬರು ಅಭಿಪ್ರಾಯ ಪಡುತ್ತಾರೆ[೪೪]. ಹರಪನಹಳ್ಳಿಯ ಹಿರೇಕೆರೆ, ಅಯ್ಯನಕೆರೆ, ಮಾದಾಪುರಕೆರೆ, ಸಿದ್ದಾಪುರಕೆರೆ, ಯಲ್ಲಾಪುರಕೆರೆ, ನಾರಾಯಣಪುರಕೆರೆ ಹಾಗೂ ತೊಗರಿಕಟ್ಟೆಕೆರೆ ಸೇರಿದಂತೆ ಒಟ್ಟು ಏಳೂರು ಕೆರೆಗಳ ನೀರು ಈ ಕೆರೆಗೆ ಹರಿದು ಬರುತ್ತದೆ. ೩೮೧ ಎಕರೆ ಒಡಲಾಳವುಳ್ಳ ಈ ಕೆರೆ ಒಂದು ಕಾಲದಲ್ಲಿ ಇಲ್ಲಿನ ಜನ-ಜಾನುವಾರುಗಳ ಬಾಯಾರಿಕೆ ತಣಿಸುವ ಹಾಗೂ ನೂರಾರು ಎಕರೆ ಅಚ್ಚುಕಟ್ಟು ಭೂಪ್ರದೇಶಕ್ಕೆ ನೀರುಣಿಸುವ ಜೀವಜಲವಾಗಿದ್ದುದ್ದು ಈಗ ಕಲುಷಿತ ನೀರಿನ ಸಂಗ್ರಹದ ಗುಂಡಿಯಾಗಿದೆ. ಒಂದೂವರೆ ದಶಕದಿಂದ ಹರಪನಹಳ್ಳಿ ಪಟ್ಟಣದ ಚರಂಡಿ ನೀರು ತುಂಬಿಕೊಂಡಿರುವ ಅಯ್ಯನಕೆರೆಯ ನೀರು ಕೆರೆಗೆ ಹರಿದು ಬರುತ್ತಿರುವುದರ ಪರಿಣಾಮವಾಗಿ ಅಲಮರಸೀಕೆರೆಯ ನೀರು ಕಲುಷಿತಗೊಂಡಿದೆ. ಹಾಗಾಗಿ ಈ ಕೆರೆಯ ನೀರನ್ನು ಉಪಯೋಗಿಸಲು ಆಗುತ್ತಿಲ್ಲ. ಈ ಕೆರೆಯ ಒಟ್ಟು ಅಚ್ಚುಕಟ್ಟು ಪ್ರದೇಶ ೩೫.೧೭ ಹೆಕ್ಟೇರ್ಸ್ ೩೫.೩೬ ಹೆಕ್ಟೇರ್ಸ್ ಜಲಾವೃತ ಪ್ರದೇಶವನ್ನು ಹೊಂದಿದೆ. ಕೆರೆಯ ಸಾಮರ್ಥ್ಯ ೧.೨ರಿಂದ ೨.೭ ಎಂ.ಸಿ.ಎಫ್.ಟಿ. ಇದೆ. ಏರಿ ಉದ್ದ ೧೩೦೬-೯೩ ಮೀ. ಎತ್ತರ ೪.೪೨ ಮೀ. ಏರಿಯ ಮೇಲ್ಭಾಗದ ಅಗಲ ೦.೯೦ ಮೀ. ಇದೆ. ಬಲಕಾಲುವೆಯ ಉದ್ದ ೦.೧೦ ಕಿ.ಮೀ. ಇದ್ದು ಒಂದು ತೂಬನ್ನು ಹೊಂದಿದೆ.

**ಸತ್ತೂರುಕೆರೆ**

ದಾವಣಗೆರೆಯಿಂದ ಕಂಚಿಕೆರೆ ಮಾರ್ಗವಾಗಿ ಹರಪನಹಳ್ಳಿಗೆ ಹೋಗುವ ಮಾರ್ಗದಲ್ಲಿರುವ ಸತ್ತೂರು ಗ್ರಾಮದಲ್ಲಿ ಪಾಳೆಯಗಾರರ ಕಾಲದಲ್ಲಿ ಕಟ್ಟಿಸಿದ ಒಂದು ಕೆರೆಯಿದೆ[೪೫]. ಈಗಲೂ ರೈತರು ಈ ಕೆರೆಯ ನೀರನ್ನೇ ಕೃಷಿಗೆ ಬಳಸುತ್ತಿದ್ದಾರೆ. ಈ ಗ್ರಾಮದ ಮೂಲ ಹೆಸರು 'ಸತ್ತಿಯೂರು' ಕ್ರಮೇಣ 'ಸತ್ತೂರು' ಆಗಿದೆ ಎಂದು ಅಭಿಪ್ರಾಯಪಡಲಾಗಿದೆ. ಈ ಕೆರೆಯು ೪೦.೬೫ ಹೆಕ್ಟೇರ್ಸ್‌ನಷ್ಟು ಅಚ್ಚುಕಟ್ಟು ಪ್ರದೇಶವನ್ನು ಹೊಂದಿದ್ದು ಎರಡು ಕಾಲುವೆ ಮತ್ತು ಎರಡು ತೂಬುಗಳನ್ನು ಹೊಂದಿದೆ. ಸುಮಾರು ೩೬೮.೦೦ ಚ.ಕಿ.ಮೀ. ಜಲಾನಯನ ಪ್ರದೇಶವಿದ್ದು ೨.೫೯ ಹೆಕ್ಟೇರ್ಸ್ ಪ್ರದೇಶ ಜಲಾವೃತ ಪ್ರದೇಶವಾಗಿದೆ. ಈ ಕೆರೆಯ ಏರಿ ೮೫೪ ಮೀ. ಉದ್ದ ೮.೨೫ ಮೀ. ಎತ್ತರವಾಗಿದ್ದು ಏರಿಯ ಮೇಲ್ಭಾಗದ ಅಗಲ ೧.೨೫ ಮೀ ಇದೆ[೪೬].

**ಬಾವಿಗಳು**

ಬಾವಿಗಳು ಸಹ ಪ್ರಾಚೀನ ಕಾಲದಿಂದಲೂ ಜಲಾಶಯ ಮೂಲಗಳಾಗಿವೆ. ಹರಪನಹಳ್ಳಿ ಪಾಳೆಯಗಾರರು ಸಹ ಇವುಗಳ ನಿರ್ಮಾಣ ಮಾಡಿದ್ದಾರೆ. ಭರಮಣ್ಣನಾಯಕನ ಆಳ್ವಿಕೆಯ ಕಾಲದಲ್ಲಿದ್ದ ವೀರಾಗ್ರಣಿ ಓಬರನಾಯಕ ತಂಬ್ರಹಳ್ಳಿ ಕೋಟೆಗೆ ಸಾಮಂತ ಅರಸನಾಗಿ ರಾಜ್ಯವಾಳುತ್ತಿದ್ದನು. ಇವನು

ತಂಬ್ರಹಳ್ಳಿಯಿಂದ ಸುಮಾರು ೪ ಕಿ.ಮೀ. ದೂರದಲ್ಲಿರುವ ತಾನೇ ಕಟ್ಟಿಸಿದ ರಂಗನಾಥ ದೇವಾಲಯಕ್ಕೆ ಹೊಂದಿಕೊಂಡಂತೆ ಪಾವಟಿಗೆಗಳ ಒಂದು ಬಾವಿಯನ್ನು ನಿರ್ಮಿಸಿದನೆಂದು ತಿಳಿಯಲಾಗಿದೆ[೮೭].

ಎರಡನೆಯ ಸೋಮಶೇಖರನಾಯಕನ ಸಾಮಂತ ಭರಮಗೌಡನು ಹೂವಿನಹಡಗಲಿ ತಾಲ್ಲೂಕಿನ ಮೀರಾಕೊರನಹಳ್ಳಿ ಗ್ರಾಮದಲ್ಲಿ ಒಂದು ಬಾವಿಯನ್ನು ಕಟ್ಟಿಸಿದನು. ಅರಸೀಕೆರೆಯ ದಿವಾನ ಎರಡನೆಯ ಹಂಪರಸಪ್ಪ ಹರಪನಹಳ್ಳಿ ಪಟ್ಟಣದಿಂದ ಹೊರಗೆ ೪ ದಿಕ್ಕುಗಳಲ್ಲಿ ಆಯಾ ಮಾರ್ಗಗಳಲ್ಲಿ ೪ ಪಾವಟಿಗೆಗಳ ಬಾವಿಗಳನ್ನು ಅರಸನ ಅಪ್ಪಣೆಯ ಮೇರೆಗೆ ಕಟ್ಟಿಸಿದನೆಂದು ತಿಳಿದು ಬಂದಿದೆ. ಈಗಲೂ ಈ ಬಾವಿಗಳಿಗೆ ಹಂಪರಸಪ್ಪನ ಬಾವಿಗಳೆಂದು ಕರೆಯುವರು. ಚಿಗಟೇರಿ ಶಿವಪ್ಪನಾಯಕನು ಚಿಗಟೇರಿ ಮತ್ತು ಕಣವಿಹಳ್ಳಿಗಳಲ್ಲಿ ಒಂದೊಂದು ಇಳಿದು ಬರುವ ಬಾವಿಯನ್ನು ತೋಡಿಸಿದನು[೮೮]. ಮರಿಕೊಟ್ರಪ್ಪನಾಯಕನ ಮಗ ಎರಡನೆಯ ಬಸಂತಪ್ಪ ನಾಯಕನ ಮಗ ಮೊದಲ ವೀರಬಸಪ್ಪನಾಯಕನು ಇಳಿದು ತುಂಬುವ ಒಂದು ಬಾವಿಯನ್ನು ಕಟ್ಟಿಸಿದನು. ಆದರೆ ಈಗ ಬಾವಿಯನ್ನು ಮುಚ್ಚಲಾಗಿದೆ[೮೯]. ರಾಣಿ ಹರಿಯಾಮ್ಮಾಜಿ ಕೊರೆಗಲ್ಲು ಕಾಲುವೆಯನ್ನು ಕಟ್ಟಿಸಿದಳು[೯೦].

ಹಿರೇಮೇಗಳಗೇರಿ ಬಸವಂತಪ್ಪರಾಯರ ಕಾರ್ಯಕರ್ತರಾದ ಮೇಗಣಗೆರೆಯ ಸ್ಥಾನಿಕ ಬಾಬಾನಾಯಕನು ಕಲ್ಲೇಶ್ವರ ದೇವಾಲಯದ ಪಕ್ಕದಲ್ಲಿ ಒಂದು ಬಾವಿಯನ್ನು ಕಟ್ಟಿಸಿದನು[೯೧]. ವಿಜಯನಗರದಲ್ಲಿ ವೆಂಕಟಪತಿರಾಯರು ಆಳುತ್ತಿದ್ದಾಗ ಒಬಯ್ಯ ದೇವನಾಯಕರ ಕುಮಾರ ಮಹಾನಾಯಕಾಚಾರ್ಯ ಬಸವಯ್ಯನ ಕಾಲದಲ್ಲಿ ಏತ ಬಾವಿ ಮತ್ತು ಕಲ್ಲುದೋಣಿ ಮಾಡಿಸಿದನೆಂದು ತಿಳಿದು ಬಂದಿದೆ[೯೨]. ಬಸವಂತಪ್ಪನಾಯಕನ ತಳವಾರನೊಬ್ಬ ಹೊಲದಲ್ಲಿ ಬಾವಿ ತೋಡಿಸಿದ್ದಕ್ಕೆ ಭೂದಾನ ನೀಡಿದ್ದರು[೯೩].

ಹೀಗೆ ಕೆರೆಗಳನ್ನು ಕಟ್ಟಲು ಸಾಧ್ಯವಿಲ್ಲದ ಸ್ಥಳಗಳಲ್ಲಿ ಅಂತರ್ಜಲ ಮೂಲಗಳನ್ನು ಅವಲಂಬಿಸಬೇಕಾದ್ದರಿಂದ ಬಾವಿಗಳನ್ನು ಅಗೆದು ವ್ಯವಸಾಯಕ್ಕೆ ನೀರನ್ನು ಪೂರೈಸಿಕೊಂಡರು. ಸಾಮಾನ್ಯವಾಗಿ ರಾಜರು, ಶ್ರೀಮಂತರು ಮತ್ತು ಗ್ರಾಮಸ್ಥರು ಕೆಲವೊಮ್ಮೆ ಸಾಮಾನ್ಯರು ಬಾವಿಗಳನ್ನು ಕಟ್ಟಿಸುವುದು ಪುಣ್ಯಕಾರ್ಯವೆಂದು ನಂಬಿದ್ದರು. ಹಾಗೆಯೇ ಕಟ್ಟಿಸಿದ ಬಾವಿಗಳನ್ನು ನಾಶಪಡಿಸುವುದು ಮಹಾಪಾಪವೆಂಬ ಭಾವನೆಯೂ ಇತ್ತು. ಇಂತಹ ಬಾವಿಗಳು ಸಹ ನೀರಾವರಿಗೆ ಅನುಕೂಲವಾಗಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಮಾವಿನಕೋಟೆ ಶಾಸನವು ತುಂಗಾಭದ್ರಾ ನದಿಯಿಂದ ದೂರ ಮತ್ತು ಎತ್ತರದಲ್ಲಿರುವ ಹೊಲದಲ್ಲಿ ಬಾವಿಯನ್ನು ತೆಗೆಸಲಾಯಿತೆಂದು ತಿಳಿಸುತ್ತದೆ[೯೪]. ನೀರಾವರಿಗೆಂದು ತೋಡಿಸಿದ ಬಾವಿಗಳು ಊರಿನಿಂದ ಹೊರಗಡೆ ಅಂದರೆ ಹೊಲ, ತೋಟ, ಗದ್ದೆಗಳಲ್ಲಿದ್ದು ಸಾಮಾನ್ಯವಾಗಿ ಖಾಸಗಿಯಾಗಿ ಜನರು ಕಟ್ಟಿಸುತ್ತಿದ್ದರು ಮತ್ತು ಪಾಲಿಸುತ್ತಿದ್ದರು[೯೫]. ಬಾವಿಗಳನ್ನು ತೋಡಿದವರಿಗೆ, ಕಟ್ಟಿದವರಿಗೆ ಭೂಮಿಯನ್ನು ಇಲ್ಲವೆ ಹಣವನ್ನು

ನೀಡುತ್ತಿದ್ದರು. ಉಜ್ಜಪ್ಪ ವಡೇರಹಳ್ಳಿಯ ಶಾಸನವು ಉಜ್ಜನಿಯ ತೆಲುಗುಬಾಳ ಉಜ್ಜಪ್ಪದೇವರ ಮೊಮ್ಮಗ ಸಿದ್ದಪ್ಪ ತೆಗೆಸಿದ ಬಾವಿಯ ಪ್ರತೀಕವಾಗಿ ಗೌಡ ಮಾನ್ಯದೊಳಗೆ ಅರ್ಧ ಮಾನ್ಯವಾಗಿ ಕೊಡಲಾಯಿತೆಂದು ತಿಳಿದು ಬರುತ್ತದೆ[೯೬].

ಬಾವಿಗಳಿಂದ ನೀರನ್ನು ಮೇಲೆತ್ತಲು ಏತ ವ್ಯವಸ್ಥೆಯನ್ನು ಬಳಸಲಾಗುತ್ತಿತ್ತು. ಏತ ಬಾವಿಯಿಂದ ಕೇಶವದೇವರ ನೂರಮೂವತ್ತು ಮರಕ್ಕೆ ದೇವರ ಬಾವಿಯಿಂದ ನೀರನೆತ್ತಿ ಇಡುವರು ಎಂದು ಹರಪನಹಳ್ಳಿಯ ಶಾಸನವೊಂದರಲ್ಲಿ ಉಲ್ಲೇಖವಿದೆ[೯೭]. ಇದರಿಂದ ತೋಟ, ಗದ್ದೆಗಳಲ್ಲಿ ಬಾವಿಗಳಿದ್ದು ಏತಗಳಿಂದ ನೀರು ಹಾಯಿಸಲಾಗುತ್ತಿತ್ತೆಂದು ತಿಳಿಯುತ್ತದೆ. ಏತ ನೀರಾವರಿಯಲ್ಲಿ ಬಾವಿಯ ನೀರಿನ ಮಟ್ಟದಿಂದ ಬೇಸಾಯವಾಗಬೇಕಾದ ಜಮೀನಿನ ಮಟ್ಟಕ್ಕೆ ಕಪಿಲೆ ಎಂಬ ಚರ್ಮದ ಚೀಲದ ಮೂಲಕ ನೀರನ್ನು ಎತ್ತಲಾಗುತ್ತಿತ್ತು. ಸ್ವತಃ ಕೈಯಾರ ಅಥವಾ ಪ್ರಾಣಿಗಳ ಸಹಾಯದಿಂದ ನೀರನ್ನು ಎಳೆದು ಜಮೀನಿಗೆ ಹರಿಸಲಾಗುತ್ತಿತ್ತು[೯೮]. ಏತದ ವರ್ಣನೆಯನ್ನು ಚಿದಾನಂದಮೂರ್ತಿಯವರು ಮೇಲುಗಡೆ ಚಕ್ರ ತಿರುಗುತ್ತಿರುತ್ತದೆ ಯಂತ್ರಕ್ಕೆ ಎತ್ತುಗಳನ್ನು ಹೂಡಿರುತ್ತಾರೆ. ನೀರನ್ನು ಹೊತ್ತು ಒಂದು ಕುಂಭಗಳ ಸಾಲು ಮೇಲಕ್ಕೆ ಬರುತ್ತಿದ್ದರೆ ಮತ್ತೊಂದು ನೀರನ್ನು ಸುರಿದು ಬರಿದಾದ ಕುಂಭಗಳ ಸಾಲು ಕೆಳಕ್ಕೆ ಇಳಿಯುತ್ತಿರುತ್ತದೆ[೯೯]. ಹೀಗೆ ಪ್ರಾಚೀನ ಕಾಲದಿಂದಲೂ ತಾಂತ್ರಿಕ ವಿಧಾನಗಳಿಂದ ಬಾವಿಯಿಂದ ನೀರನ್ನು ಮೇಲೆತ್ತಿ[೧೦೦] ಸಾಗುವಳಿಗೆ ಬೇಕಾದ ನೀರನ್ನು ಪಡೆದುಕೊಂಡು ನೀರಾವರಿ ಅನುಕೂಲವನ್ನು ವಿಜಯನಗರೋತ್ತರ ಕಾಲದಲ್ಲೂ ಈ ವ್ಯವಸ್ಥೆಯ ಮೂಲಕವೇ ಪಡೆಯುತ್ತಿದ್ದರೆಂದು ಹೇಳಬಹುದು.

ಕುಡಿಯುವ ನೀರಿಗಾಗಿ ಕಟ್ಟಿಸಿದ ಬಾವಿಗಳು ಜನವಸತಿ ಪ್ರದೇಶದಲ್ಲಿ ದೇವಾಲಯದ ಪಕ್ಕದಲ್ಲಿ ನಿರ್ಮಿಸುತ್ತಿದ್ದರು. ನೀರು ಆಳದಲ್ಲಿರಲು ಮತ್ತು ನೀರಿಗೆ ಸುತ್ತಲಿನ ಮಣ್ಣು ಕುಸಿಯದಂತೆ ಸುತ್ತಲೂ ಕಲ್ಲುಗಳಿಂದ ಕಟ್ಟುತ್ತಿದ್ದರು. ಅಬ್ದುಲ್‌ರಜಾಕ್ ಹೇಳುವಂತೆ ಇಂತಹ ಬಾವಿಗಳು ಪ್ರತಿಷ್ಠಿತರ ನಿವಾಸದ ಹತ್ತಿರ ಇರುತ್ತಿದ್ದವು[೧೦೧]. ಇಂತಹ ಬಾವಿಗಳಿಂದ ಕುಡಿಯುವ ನೀರನ್ನು ತುಂಬಲು ಮೆಟ್ಟಿಲು ವ್ಯವಸ್ಥೆ ಇರುತ್ತಿತ್ತು. ಕೆಲವೊಮ್ಮೆ ಕುಡಿಯುವ ನೀರಿಗಾಗಿ ಹೊಂಡವನ್ನು ನಿರ್ಮಿಸುತ್ತಿದ್ದರು. ಹರಪನಹಳ್ಳಿ ಪಾಳೆಯಗಾರ ದಾದೇನಾಯಕನ ಹೆಂಡತಿ ಹೊನ್ನಮ್ಮಳು ಮರಣ ಹೊಂದಿದ ನಂತರ ಅವಳ ಸ್ಮರಣಾರ್ಥ ಉಚ್ಛಂಗಿದುರ್ಗದ ಬೆಟ್ಟದ ಮೇಲೆ ಅವಳು ಜಾರಿ ಬಿದ್ದ ಸ್ಥಳದಲ್ಲಿ ಹೊನ್ನೆ ಹೊಂಡವನ್ನು ನಿರ್ಮಿಸಿದನು. ಇದನ್ನು ಹೊನ್ನೆ ಝುರಿ ಎಂದು ಕರೆಯಲಾಗಿದೆ[೧೦೨]. ಈ ರೀತಿಯ ಬಾವಿಗಳು ಚಿಗಟೇರಿ[೧೦೩] ಕಣವಿಹಳ್ಳಿ[೧೦೪] ಮುಂತಾದಡೆ ಕಂಡುಬರುತ್ತವೆ. ಪಾಳೆಯಗಾರರ ನೀರಾವರಿ ನೀತಿಯನ್ನು ನೋಡಿದರೆ ನೀರಾವರಿ ಕಾರ್ಯಗಳ ನಿರ್ಮಾಣದ ಮೂಲಕ ರಾಜರುಗಳು ಪ್ರಾಂತೀಯ ಅರಸರುಗಳು, ಅಧಿಕಾರಿಗಳು, ಕೃಷಿ ವಿಸ್ತರಣೆಯಲ್ಲಿ ಕೆರೆಗಳ ನಿರ್ವಹಣೆಯಲ್ಲಿ ಅವುಗಳ ಅಭಿವೃದ್ಧಿಯಲ್ಲಿ ಆಸಕ್ತಿಯನ್ನು ಹೊಂದಿರುವ ಅಂಶಗಳನ್ನು ಶಾಸನಗಳಲ್ಲಿ ಕಂಡು ಬರುವ

ಉಲ್ಲೇಖಗಳಿಂದ ತಿಳಿಯಬಹುದಾಗಿದೆ. ಆ ಪದಗಳೆಂದರೆ ಕೆರೆ, ಕಟ್ಟೆ, ಕಾಲುವೆ, ನದಿ, ಹೊಲೆ, ತೂಬು, ಕೋಡಿ, ಸಮುದ್ರ, ಗದ್ದೆ, ಬೆದ್ದಲು, ಏತ, ಮುಂತಾದವುಗಳು. ಈ ಎಲ್ಲಾ ಪದಗಳು ಪಾಳೆಯಗಾರರ ಕಾಲದಲ್ಲಿ ನೀರಾವರಿಗೆ ನೀಡಿದ ಮಹತ್ವವನ್ನು ತೋರಿಸುತ್ತದೆ. ಈ ನೀರಾವರಿ ಯೋಜನೆಗಳಿಂದ ಜನರ ಹಾಗೂ ದನಗಳ ಆಹಾರದ ವಿಷಯದಲ್ಲಿ ಹಳ್ಳಿಗಳನ್ನು ಸ್ವಾವಲಂಬಿಯನ್ನಾಗಿಸಿದವು. ಅಭಾವ ಮತ್ತು ಪ್ರವಾಹಗಳ ವಿರುದ್ಧ ರಕ್ಷಣೆ ಒದಗಿಸಿದವು. ಕೆರೆ-ಕಟ್ಟೆಗಳಲ್ಲಿನ ನೀರಿನ ಸಂಗ್ರಹಣೆಯಿಂದ ಬಾವಿಗಳಲ್ಲಿ ಅಂತರ್ಜಲ ಮಟ್ಟ ಹೆಚ್ಚಾಗಿ ಮಣ್ಣಿನ ಸವಕಳಿ ಕಡಿಮೆಯಾಗಿ ನೀರಿನ ಸಂಗ್ರಹಣೆಯಿಂದ ವಾತಾವರಣವೂ ತಂಪಾಯಿತು. ಈ ಮೂಲಕ ಹರಪನಹಳ್ಳಿ ಪಾಳೆಯಗಾರರು ಇಂದಿಗೂ ಜನಮನದಲ್ಲಿ ಉಳಿದಿದ್ದಾರೆ.

### ೩.೩ ಧಾರ್ಮಿಕ ವ್ಯವಸ್ಥೆ

ಭಾರತವು ಅನೇಕ ಧರ್ಮ ಮತ್ತು ವಿಭಿನ್ನ ಆಚರಣೆಗಳ ತವರೂರು. ಪ್ರಾಚೀನ ಕಾಲದಿಂದಲೂ ವಿವಿಧ ರಾಜಮನೆತನಗಳ ಆಡಳಿತಾವಧಿಯಲ್ಲಿ ಅನೇಕ ಧರ್ಮಗಳು ರಾಜಾಶ್ರಯ ಪಡೆದು ಬೆಳವಣಿಗೆಯನ್ನು ಹೊಂದುತ್ತಾ ಬಂದಿರುವುದನ್ನು ನಾವು ಕಾಣಬಹುದು. ಪ್ರಮುಖ ಜನರ ನಂಬಿಕೆ ಮತ್ತು ಸಂಪ್ರದಾಯಗಳ ಹಿನ್ನೆಲೆಯಲ್ಲಿ ಬೆಳವಣಿಗೆಗೊಂಡ ಈ ಧರ್ಮಗಳು ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಪ್ರಭಾವವನ್ನು ಬೀರಿವೆ. ಮಾನವನು ತನ್ನೆಲ್ಲಾ ಆಚರಣೆ ಮತ್ತು ಸಂಪ್ರದಾಯಗಳನ್ನು ಪ್ರಾಗಿತಿಹಾಸ ಕಾಲದಿಂದಲೇ ರೂಢಿಸಿಕೊಂಡು ಬಂದಿದ್ದಾನೆ. ಇಂತಹ ಆಚರಣೆಗಳಿಗೆ ನಂತರದ ದಿನಗಳಲ್ಲಿ ಒಂದು ಚೌಕಟ್ಟು ದೊರೆತು ತತ್ವ ಸಿದ್ಧಾಂತದ ಹಿನ್ನೆಲೆಯಲ್ಲಿ ಬೇರೆ ಬೇರೆ ಧರ್ಮಗಳ ಹುಟ್ಟಿಗೆ ಕಾರಣವಾಯಿತು. ಈ ರೀತಿಯಾಗಿ ಬೆಳೆದು ಬಂದ ರೂಢಿ ಸಂಪ್ರದಾಯಗಳಿಗೆ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಪ್ರಮುಖ ಸ್ಥಾನ ದೊರೆತಿದೆ.

ಭಾರತದ ಧಾರ್ಮಿಕ ಇತಿಹಾಸದಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ, ಈ ಚರ್ತಸ್ಸಮಯಗಳಲ್ಲಿ ಯಾವುದು ಮೊದಲು ಯಾವುದು ನಂತರ ಎಂದು ಗುರುತಿಸುವುದು ಸ್ವಲ್ಪ ಕಷ್ಟವಾಗಿದೆ. ಆದರೆ ಶೈವ ಪಂಥವನ್ನು ಸಿಂಧೂ ಸಂಸ್ಕೃತಿಯಷ್ಟೇ ಪ್ರಾಚೀನವೆಂದು ನಂಬಲಾಗಿದೆ. ಅನಂತರ ವೈದಿಕ ಸಂಸ್ಕೃತಿಯ ಚತುರ್ವರ್ಣಗಳು ಕ್ರಮೇಣ ಜಾತಿಗಳಾಗಿ ಪರಿವರ್ತನೆಯಾದಾಗ ಆಯಾ ಪಂಗಡದ ಜನರು ನಿರ್ದಿಷ್ಟ ಚೌಕಟ್ಟಿನಲ್ಲಿಯೇ ಇರಬೇಕಾಯಿತು. ಇದರಿಂದ ಕೆಲವು ವರ್ಗಗಳಿಗೆ ಧರ್ಮದಲ್ಲಿ ಜಿಗುಪ್ಸೆ, ತಾತ್ಸಾರ ಮೂಡಿ ಬೌದ್ಧ, ಜೈನ ಧರ್ಮಗಳು ತಲೆ ಎತ್ತಿದವು. ವೈದಿಕ ಧರ್ಮದ ದಟ್ಟ ಛಾಯೆಯಲ್ಲಿಯೇ ಬೆಳವಣಿಗೆ ಕಂಡ ಈ ಎರಡೂ ಧರ್ಮಗಳು ಕ್ರಮೇಣ ತಮ್ಮ ಸ್ಥಾನಗಳಿಂದ ಹಿಂದೆಗೆಯಬೇಕಾಯಿತು. ಈ ಧಾರ್ಮಿಕ ಪಂಥಗಳ ಏಳು ಬೀಳುಗಳಲ್ಲಿ ೧೨ನೆಯ ಶತಮಾನದಲ್ಲಿ ಶರಣಧರ್ಮ ಉಗಮಗೊಂಡು ಇತರ ಪಂಥದ ಅನೇಕ ಜನರು ಇದರಲ್ಲಿ ಸಮಾವೇಶಗೊಂಡರು. ಇದೊಂದು

ಕಾಯಕ ಜೀವಿಗಳ ಧಾರ್ಮಿಕ ಕ್ರಾಂತಿಯೆಂದೇ ಕರೆಯಿಸಿಕೊಂಡು ವೀರಶೈವ ಅಥವಾ ಲಿಂಗಾಯತ ಎಂಬ ನಾಮದಿಂದ ಕರ್ನಾಟಕದಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡಿತು.

ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ-ಮೊಹೆಂಜೋದರೊಗಳ ಸೈಂಧವ ಸಂಸ್ಕೃತಿ (ಕ್ರಿ.ಪೂ.೩೨೫೦-೨೭೫೦)ಯಲ್ಲಿ ಕೊಂಬು ಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳು ಲಿಂಗಗಳೂ ದೊರೆತಿವೆ. ಋಗ್ವೇದದಲ್ಲಿ ರುದ್ರನು ದುಷ್ಟಶಕ್ತಿಗಳಿಗೆ ಅಧಿಪತಿಯೆಂಬಂತೆ ಚಿತ್ರಿತವಾಗಿದ್ದಾನೆ. ಅವನ ವಾಸಸ್ಥಾನವು ಪರ್ವತಗಳಲ್ಲಿ ಅವನು ಜಟೆಯನ್ನು ಎತ್ತಿ ಕಟ್ಟಿದ್ದಾನೆ. ಧರ್ಮವನ್ನು ಧರಿಸಿದ್ದಾನೆ. ಸ್ವಭಾವತಃ ಭಯಂಕರನಾದ ಅವನು ಮಂಗಳಕರ ಅಥವಾ 'ಶಿವ'ನಾಗಲೆಂದು ಪ್ರಾರ್ಥನೆ ಮಾಡಿರುವುದು ಕಂಡು ಬರುತ್ತದೆ.

ಮಹಮ್ಮದಿಯರ ದಾಳಿಯಿಂದ ಅವನತಿಯ ಅಂಚಿನಲ್ಲಿದ್ದ ಹಿಂದೂಧರ್ಮವನ್ನು ಪುನರುಜ್ಜೀವನಗೊಳಿಸಲು ಹುಟ್ಟಿಕೊಂಡ ಸಾಮ್ರಾಜ್ಯವೇ ವಿಜಯನಗರ ಸಾಮ್ರಾಜ್ಯ ತಮ್ಮ ವಿಶಾಲ ಸಾಮ್ರಾಜ್ಯದ ರಕ್ಷಣೆಗಾಗಿ ಚತುರ್ದಿಕ್ಕಿನಲ್ಲೂ ಪರಮಶೂರರಾದ ಪಾಳೆಯಗಾರರನ್ನು ದಳವಾಯಿಗಳನ್ನು, ದಂಡನಾಯಕರನ್ನು ನೇಮಿಸಿಕೊಂಡಿದ್ದರು. ವಿಜಯನಗರ ಸಾಮ್ರಾಜ್ಯ ಅಂತ್ಯವಾದ ಮೇಲೆ ಬಿಜಾಪುರದ ಆದಿಲ್‌ಷಾಹನು ತನ್ನ ಕಾರ್ಯವನ್ನು ಸಾಧಿಸಲು ಮುಂದಾಗಿ ಇದಕ್ಕೆ ವೀರರಾದ ಹಿಂದೂಗಳನ್ನು ಸದೆ ಬಡಿಯಲು ಬೇಡ ನಾಯಕರ ಸಹಾಯ ಅಗತ್ಯವೆಂದು ಮನಗಂಡು ಅನೇಕ ಶೂರರನ್ನು ಸೈನ್ಯದಲ್ಲಿ ಸೇರಿಸಿಕೊಂಡನು. ಹರಪನಹಳ್ಳಿ ಪಾಳೆಯಗಾರರು ಇದಕ್ಕೆ ಹೊರತಾಗಿರಲಿಲ್ಲ. ಆದರೆ ಅವರು ತಮ್ಮ ದೊರೆಗಳಿಗೆ ಯಾವುದೇ ರೀತಿಯ ಮೋಸ ವಂಚನೆ ಮಾಡಲು ಸಿದ್ಧರಿರಲಿಲ್ಲ.

ಹರಪನಹಳ್ಳಿ ಪಾಳೆಯಗಾರ ವಂಶದವರು ಪ್ರಮುಖವಾಗಿ ಬಲಭೀಮ, ಉಚ್ಚಂಗಮ್ಮ ಮತ್ತು ಆಂಜನೇಯಸ್ವಾಮಿಯನ್ನು ಕುಲದೇವರಾಗಿ ಆರಾಧಿಸುತ್ತಿದ್ದರು. ಆದರೆ ಇವರಿಗೆ ಶಿವನ ಕೃಪೆಯಿದ್ದುದು ಶಿವನ ಭಕ್ತರಾಗಿದ್ದುದು ಕೆಲವು ಮಾಹಿತಿಗಳಿಂದ ತಿಳಿದು ಬರುತ್ತದೆ. ಮೊದಲ ನಾಯಕದೊರೆ ದಾದೇನಾಯಕನಿಗೆ ಚಂದುಲಾಪರಮೇಶ್ವರಿಯ ಪರಮಾನುಗ್ರಹವಿದ್ದು ದೇವರಲ್ಲಿ ಭಕ್ತಿಯನ್ನಿಟ್ಟು ಪ್ರಜಾವಾತ್ಸಲ್ಯದಿಂದ ರಾಜ್ಯಭಾರ ಮಾಡುತ್ತಿದ್ದನು. ದಾದೇನಾಯಕನು ಬಾಗಳಿಯ ಕಲ್ಲಿನಾಥದೇವನ ಸನ್ನಿಧಿಯಲ್ಲಿ ತನ್ನ ಗುರುಸ್ವಾಮಿಗೂ ಮಾತಾಪಿತೃಗಳಿಗೂ ಪುಣ್ಯವಾಗಲೆಂದು ಹಾಗೂ ಸಮಸ್ತ ಪ್ರಜೆಗಳಿಗೂ ಸುಖಪ್ರಾಪ್ತಿಯಾಗಬೇಕೆಂದು ಕುರುಬರ ಮೇಲಿನ ಕುರಿ ತೆರಿಗೆಯನ್ನು ಮನ್ನಾ ಮಾಡಿ ಧರ್ಮಧಾರೆಯೆರೆದನೆಂದು ಕೊಟ್ಟೂರು ಗ್ರಾಮದ ಶಿಲಾಶಾಸನ ತಿಳಿಸುತ್ತದೆ. ಅಲ್ಲದೆ ಹರನ (ಶಿವ) ಕೃಪೆಯಿಂದ ಬಾಗಳಿ ಮತ್ತು ನೀಲಗುಂದಗಳ ಒಡೆಯನಾದನೆಂದು ತಿಳಿದು ಬಂದಿರುವುದರಿಂದ ಸಹಜವಾಗಿ ಶಿವನಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದನು, ಜೊತೆಗೆ ಮತ್ತೊಂದು ಐತಿಹ್ಯ ಇದಕ್ಕೆ ಪುಷ್ಟಿಯನ್ನು ಸಹ ನೀಡುತ್ತದೆ.

ಒಂದು ದಿನ ದಾದಾಯ್ಯನಾಯಕನ ಸ್ವಪ್ನದಲ್ಲಿ ಪರಮೇಶ್ವರನು ಬಂದು ಕುಮಾರ ತುಂಗಭದ್ರಾ ನದಿಯನ್ನು ದಾಟಿ ಬಾಗಳಿ ಎಂಬ ಪುಣ್ಯಕ್ಷೇತ್ರಕ್ಕೆ ಹೋಗಿ ನನ್ನಲ್ಲಿ ವಿಶ್ವಾಸವಿಟ್ಟು ನನ್ನ ಆಜ್ಞೆಯ ಮೇರೆಗೆ ನನ್ನ ಹೆಸರಿನಿಂದ ಮತ್ತೊಂದು ಪಟ್ಟಣ (ಹರಪುರ)ವನ್ನು ಕಟ್ಟಿಕೊಂಡು ಐಶ್ವರ್ಯವಂತರಾಗಿ ಬಾಳಿರಿ' ಎಂದು ತಿಳಿಸಿದನಂತೆ. ಹಾಗಾಗಿ ದಾದಯ್ಯ ಆಳುವ ಮುಖ್ಯ ಪಟ್ಟಣಕ್ಕೆ 'ಹರಪುರ', 'ಹರಪುರಿ' ಎಂದು ಕರೆಯಲಾಯಿತಂತೆ. ನಂತರ ಹರನ ಹರಕೆಯಿಂದಾದ ಹಳ್ಳಿಯಾದ್ದರಿಂದ ಹರಪನಹಳ್ಳಿ ಎಂದು ಹೆಸರಾಗಿ ದಿನದಿನಕ್ಕೆ ರಾಜಧಾನಿಯಾಗಿ ಬೆಳೆಯಿತೆಂದು ತಿಳಿಯಲಾಗಿದೆ. ನಂತರದ ದಿನಗಳಲ್ಲಿ ತಮ್ಮ ಕುಲಸ್ವಾಮಿಯಾದ ಬಲಭೀಮನ ದಯೆಯೊಂದಿಲ್ಲದೆ ಧೈರ್ಯವಾಗುವುದಿಲ್ಲವೆಂದು ಪ್ರತಿದಿನ ಶ್ರೀಮೊದಲಗಟ್ಟೆ ಪ್ರಾಣೇಶನ ದರ್ಶನ ಮಾಡಿಕೊಂಡು ಬಂದ ನಂತರವೇ ಊಟ ಮಾಡುತ್ತಿದ್ದನಂತೆ. ಹಾಗಾಗಿ ಪ್ರಾಣೇಶನ ದಯೆಯೂ ದಾದಾಯ್ಯನಾಯಕನ ಮೇಲಾಯಿತು. ಈ ಮೇಲಿನ ಎಲ್ಲಾ ಅಂಶಗಳಿಂದ ದಾದಯ್ಯನಾಯಕ ಶಿವಭಕ್ತನಾಗಿದ್ದನೆಂದು ಒಂದು ತೀರ್ಮಾನಕ್ಕೆ ಬರಬಹುದಾಗಿದೆ.

ಹರಪನಹಳ್ಳಿ ಪಾಳೆಯಗಾರರು ವೀರಶೈವ ಧರ್ಮವನ್ನು ಪೋಷಿಸಿ ಬೆಳೆಸಿದರು. ದೊರೆ ಮೊದಲ ಬಸವಂತನಾಯಕ ವೀರಶೈವ ಲಿಂಗದೀಕ್ಷೆಯನ್ನು ಪಡೆದುಕೊಂಡು 'ಕೊಟ್ರಪ್ಪನಾಯಕ' ಎಂದು ಹೆಸರನ್ನು ಬದಲಾಯಿಸಿಕೊಂಡನು. ಇದಕ್ಕೆ ಸಂಬಂಧಿಸಿದಂತೆ ಹರಪನಹಳ್ಳಿಯಲ್ಲಿ ದೊರೆತ ಒಂದು ಹಳೆಯ ದಾಖಲೆಯ ಉಲ್ಲೇಖದಿಂದ ಹೀಗೆ ತಿಳಿದು ಬರುತ್ತದೆ. ಮುಸ್ಟೂರು ಹಾಗೂ ಮಳವಳ್ಳಿಗಳಿಂದ ಆಗಮಿಸಿದ ಗಂಗಾಧರಸ್ವಾಮಿ ಬಸವಂತನಾಯಕನಿಗೆ ಮಹಾ ಮಹಿಮೆಗಳನ್ನು ತೋರಿಸಿ ಪುರಾಣ ಲಿಂಗ ಸಾಮರಸ್ಯ ಬೋಧಿಸಿದರು. ಇದರಿಂದ ಪ್ರೇರಿತನಾದ ದೊರೆ ತನ್ನನ್ನು ಲಿಂಗಮಯಿಯನ್ನಾಗಿ ಮಾಡಿಕೊಡಬೇಕೆಂದು ಬೇಡಿಕೊಂಡಾಗ ಪುರದ ಗುರು ವರ್ಗದವರು ವಿಚಾರಿಸಿ ಲಿಂಗಾಧಾರಣೆ ಮಾಡಿಸಿಕೊಳ್ಳಲು ಹೇಳಿದರು. ಅದರಂತೆ ಬಸವಂತನಾಯಕನನ್ನು ಹಂಪೆಗೆ ಕರೆದುಕೊಂಡು ಹೋಗಿ ಲಿಂಗದೀಕ್ಷೆ ಮಾಡಿ ಕೊಟ್ರಪ್ಪನಾಯಕ ಎಂದು ಹೆಸರಿಟ್ಟರು. ಇದಕ್ಕೆ ಸಂಬಂಧಪಟ್ಟಂತೆ ಇನ್ನೂ ಕೆಲವು ಐತಿಹ್ಯಗಳಿವೆ.

ಹರಪನಹಳ್ಳಿಯ ಅರಸರು ಕೊಟ್ಟೂರೇಶ್ವರನ ಪರಮಭಕ್ತರಾಗಿದ್ದರು. ಹಾಗಾಗಿ ಕೊಟ್ರಪ್ಪ ಮತ್ತು ಮರಿಕೊಟ್ರಪ್ಪ ಎಂಬ ಹೆಸರುಗಳನ್ನು ಇಟ್ಟುಕೊಂಡಿದ್ದರು. ವಿಜಯನಗರದ ಪತನದ ನಂತರ ಕೊಟ್ಟೂರು ಹರಪನಹಳ್ಳಿ ಪಾಳೆಯಗಾರರಿಗೆ ಸೇರಿತು. ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಕೂಲಹಳ್ಳಿ ಶ್ರೀಮದ್ಧಾನೇಶ್ವರರನ್ನು ವಿವಾಹವಾದ ಚಿಗಟೇರಿಯನ್ನಾಳುತ್ತಿದ್ದ ಶಿವನಪ್ಪನ ಅಥವಾ ಪಾಳೆಯಗಾರರ ಸಂಬಂಧಿಕಳಾದ ಬೇಡರ ಕುಲದ ಕನಕವ್ವನಾಗತಿ ಈ ವೀರಶೈವ ಶಿವಯೋಗಿಯ ಸತಿಯಾಗಿ ಅಂಗದ ಮೇಲೆ ಲಿಂಗ ಧರಿಸಿ ಲಿಂಗಾಂಗಿಯಾದಳು. ಅಲ್ಲದೆ ಕೊಟ್ಟೂರೇಶ್ವರನ ಮಠದ ಸ್ವಾಮಿಗಳು ಬೇಡರ

ಕುಲದವರಾಗಿದ್ದು ಲಿಂಗಾಯಿತ ಮತಕ್ಕೆ ಮತಾಂತರ ಹೊಂದಿ ಜಂಗಮರಲ್ಲಿ ರಕ್ತ ಸಂಬಂಧ ಬೆಳೆಸುತ್ತಾರೆ. ಬೇಡರ ಕುಲದ ಹೆಣ್ಣನ್ನೆ ಮದುವೆಯಾದರೆ ಅವಳಿಗೆ ದೀಕ್ಷೆ ಕೊಡಿಸುತ್ತಾರೆ.

ಹರಪನಹಳ್ಳಿ ಪಾಳೆಯಗಾರರು ಕೊಟ್ಟೂರು ಬಸವೇಶ್ವರರ ಅನನ್ಯ ಭಕ್ತರಾಗಿದ್ದರು. ಬಸವೇಶ್ವರರೂ ಸಹ ಅವರ ಭಕ್ತಿಯ ಬಗ್ಗೆ ಅಪಾರ ವಿಶ್ವಾಸವಿಟ್ಟಿದ್ದರು. ಒಮ್ಮೆ ಹುಟ್ಟು ಕುರುಡನೊಬ್ಬ ಬಂದು ಮಹಿಮಾವಂತನಾದ ಗುರುವೆ ನನ್ನ ಅಂಧತ್ವವನ್ನು ಹೋಗಲಾಡಿಸು ಎಂದು ಮೊರೆ ಹೊಕ್ಕಾಗ ನನ್ನ ಮಹಾಭಕ್ತನಾದ ದಾದಯ್ಯನಾಯಕನ ಬಳಿ ಹೋಗು ಅವನು ನಿನಗೆ ಕಣ್ಣು ಕೊಡುತ್ತಾನೆ ಎಂದು ಹೇಳಿದಾಗ ಕುರುಡ ದಾದಯ್ಯನಾಯಕನ ಬಳಿ ಬರುತ್ತಾನೆ. ಆಗ ದಾದಯ್ಯ ಗುರುವನ್ನು ಸ್ಮರಿಸಿದಾಗ ಕುರುಡನಿಗೆ ಕಣ್ಣು ಬಂತಂತೆ. ಕಣ್ಣಿನ ಈ ಪವಾಡದಿಂದ ದಾದಯ್ಯನಾಯಕ ಗುರುಗಳ ಬಳಿ ಬಂದು ಭಕ್ತಿಯಿಂದ ನಮಸ್ಕರಿಸಿ ತನ್ನ ವಂಶಕ್ಕೆಲ್ಲ ನೀವೇ ಗುರುಗಳಾಗಿರಬೇಕೆಂದು ಆಶೀರ್ವಾದ ಪಡೆಯುತ್ತಾನೆ. ಹಾಗೆಯೇ ಮೊದಲ ಬಸವಂತಪ್ಪನಾಯಕನಿಗೆ ಕೊಟ್ಟೂರು ಬಸವೇಶ್ವರರ ಮೇಲೆ ಅಪಾರ ಭಕ್ತಿಯಿದ್ದು ತನ್ನ ಆಡಳಿತ ವ್ಯಾಪ್ತಿಗೆ ಸೇರಿದ ಪ್ರದೇಶದಲ್ಲಿ ಅನೇಕ ಬಸಾಪುರ ಗ್ರಾಮಗಳನ್ನು ನಿರ್ಮಿಸಿದನು. ಹೀಗೆ ಪಾಳೆಯಗಾರರು ಕೊಟ್ಟೂರು ಬಸವೇಶ್ವರರ ಮೇಲಿನ ಭಕ್ತಿಯಿಂದ ಕೊಟ್ರಪ್ಪನಾಯಕ, ಮರಿಕೊಟ್ರಪ್ಪನಾಯಕ, ವೀರಬಸಪ್ಪನಾಯಕ, ಮುದಿಬಸಪ್ಪನಾಯಕ ಎಂದೆಲ್ಲ ಹೆಸರುಗಳನ್ನು ಹೊಂದಿದ್ದರು. ಅದರಲ್ಲೂ ಇವರು ಕೊಟ್ಟೂರೇಶ್ವರರು ಲಿಂಗೈಕ್ಯರಾದ ಮೇಲೂ ಅವರಲ್ಲೇ ಅಪಾರ ಭಕ್ತಿ ಹಾಗೂ ನಂಬಿಕೆಯನ್ನಿಟ್ಟಿದ್ದರೆಂದು ತಿಳಿಯಲು ಸೋಮಶೇಖರನಾಯಕನ ಕೊಟ್ಟೂರು ಮುತ್ತಿಗೆ ಅತ್ಯುತ್ತಮ ಉದಾಹರಣೆ. ಸೋಮಶೇಖರನಾಯಕನ ಪತ್ನಿ ಸೋಮಮ್ಮಾಜಿಯೂ ವೀರಶೈವ ಧರ್ಮದ ಅನುಯಾಯಿಯಾಗಿದ್ದಳು.

ಪ್ರಾಚೀನ ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂಧರ್ಮದಲ್ಲಿ ಅವನಷ್ಟೇ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ವಿಶಿಷ್ಟ ಇತಿಹಾಸವಿದೆ. ವಿಷ್ಣುವು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನೂ ಅಲ್ಲ. ಅವನು ತನ್ನ ಮೂರು ಹೆಜ್ಜೆಗಳಿಂದ ಸಮಸ್ತ ಲೋಕವನ್ನೇ ಉತ್ಸಾಹದಿಂದ ಅಳೆಯುವುದನ್ನು ಋಗ್ವೇದದಲ್ಲಿ ಬಣ್ಣಿಸಲಾಗಿದೆ. ವಿಷ್ಣುವಿನ ಪರಂಪರೆಯನ್ನು ಸಾರುವ ವೈಷ್ಣವ ಧರ್ಮ ಕರ್ನಾಟಕದಲ್ಲಿ ರಾಮಾನುಜರ ಆಗಮನಕ್ಕಿಂತ ಬಹಳ ಹಿಂದಿನಿಂದ ಪ್ರಚಾರದಲ್ಲಿತ್ತೆಂದು ಕದಂಬರ ಕಾಲದ ಹಲ್ಮಿಡಿ ಶಾಸನದ ವಿಷ್ಣುವಿನ ಪ್ರಾರ್ಥನೆಯಿಂದ ದೃಢಪಡಿಸಬಹುದಾಗಿದೆ. ಶ್ರೀರಾಮಾನುಜರ ಆಗಮನ ನಂತರ ಹೊಯ್ಸಳ ರಾಜ್ಯದಲ್ಲಿ ಶ್ರೀವೈಷ್ಣವ ಧರ್ಮ ಭದ್ರವಾಗಿ ನೆಲೆ ನಿಂತು ಔನ್ನತ್ಯವನ್ನು ಪಡೆಯಿತು. ಹಾಗೆಯೇ ಮಧ್ವಚಾರ್ಯರ ಪ್ರಭಾವದಿಂದ ಮಧ್ಯಕಾಲೀನ ಕರ್ನಾಟಕದಲ್ಲಿ ವೈಷ್ಣವ ಧರ್ಮ ಅತ್ಯಂತ ಪ್ರಭಾವಶಾಲಿಯಾಗಿ ರಾಜಾಶ್ರಯವನ್ನು ಪಡೆದುದಲ್ಲದೆ ಸಿರಿವಂತರು, ಅಧಿಕಾರಿಗಳು ಮತ್ತು ಜನ ಸಾಮಾನ್ಯರನ್ನು ಸೆಳೆಯತೊಡಗಿತು. ಕೊಟ್ಟೂರು ಗ್ರಾಮದ ಮೂರುಕಲ್ಲು ಮಠದ ಮುಂದೆ ಇರಿಸಿರುವ

ಶಾಸನ ಹೊಯ್ಸಳ ವೀರನರಸಿಂಹನ ಆಡಳಿತ ಕಾಲದಾಗಿದ್ದು ಇದರ ಆರಂಭಿಕ ಶ್ಲೋಕ ವಿಷ್ಣುವನ್ನು ಸ್ತುತಿಸುತ್ತದೆ. ಆದ್ದರಿಂದ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ವೈಷ್ಣವ ಧರ್ಮ ಸ್ವಲ್ಪಮಟ್ಟಿಗಾದರೂ ಈ ಭಾಗದಲ್ಲಿ ಪ್ರಭಾವ ಬೀರಿತ್ತೆಂದು ತಿಳಿದು ಬರುತ್ತದೆ. ಹಾಗೆಯೇ ಹರಪನಹಳ್ಳಿ ಪಾಳೆಯಗಾರರು ವೈಷ್ಣವ ಧರ್ಮಕ್ಕೂ ಆಶ್ರಯ ನೀಡಿದ್ದರೆಂದು ತಿಳಿಯಬಹುದಾಗಿದೆ. ಮೊದಲ ದೊರೆ ದಾದೇನಾಯಕ ಈಗ ದೇವರ ತಿಮ್ಮಲಾಪುರವೆಂದು ಕರೆಯುವ ಹಳ್ಳಿಯಲ್ಲಿ ವೆಂಕಟೇಶ ತಿರುಮಲ ಎಂಬ ಮೂರ್ತಿಯನ್ನಿಟ್ಟು ದೇವಾಲಯವನ್ನು ರಚಿಸಿದನೆಂದು ತಿಳಿದು ಬರುತ್ತದೆ. ಈಗ ಇದನ್ನು ಶ್ರೀಲಕ್ಷ್ಮೀವೆಂಕಟರಮಣಸ್ವಾಮಿ ದೇವಾಲಯವೆಂದು ಕರೆಯಲಾಗುತ್ತಿದೆ. ಇಲ್ಲಿಯೇ ಪಕ್ಕದಲ್ಲಿ ಕಣ್ಣು ಕೊಟ್ಟಪ್ಪ ದೇವಾಲಯವಿದೆ ಇಲ್ಲಿ ಬಂದು ಪ್ರಾರ್ಥಿಸಿದರೆ ಕಣ್ಣಿನ, ದೃಷ್ಟಿದೋಷದ ತೊಂದರೆಗಳು ಸಂಪೂರ್ಣ ನಿವಾರಣೆಯಾಗುತ್ತವೆ. ಕುರುಡು ಮಾಯವಾಗುತ್ತದೆ ಎಂಬ ಬಲವಾದ ನಂಬಿಕೆ ಸ್ಥಳೀಯರಲ್ಲಿದೆ.

ವೈದಿಕ ಧರ್ಮದಲ್ಲಿ ಉನ್ನತ ಸ್ಥಾನಮಾನ ಪಡೆದಿದ್ದ ಬ್ರಾಹ್ಮಣರಿಗೂ ತಮ್ಮ ಆಸ್ಥಾನದಲ್ಲಿ ಪ್ರಮುಖ ಸ್ಥಾನಮಾನ ನೀಡಿದ್ದರು. ಇವರ ಆಸ್ಥಾನದಲ್ಲಿದ್ದ ದಿವಾನರು, ರಾಯಸದವರು, ಜೋಯಿಸರು, ಪುರೋಹಿತರು, ವೈದ್ಯರು ಹೆಚ್ಚಾಗಿ ಬ್ರಾಹ್ಮಣರೇ ಆಗಿದ್ದರು. ಇವರು ಶಾಸ್ತ್ರ, ಪುರಾಣ, ಆಡಳಿತ, ಅರ್ಥಶಾಸ್ತ್ರ ಪಂಡಿತರು ಮತ್ತು ಕುಶಾಗ್ರಮತಿಗಳು ಆಗಿದ್ದು ರಾಜ್ಯಾಡಳಿತದಲ್ಲಿ ಅರಸರಿಗೆ ನೆರವಾಗುತ್ತಿದ್ದರು. ಪಾಳೆಯಗಾರರು ಅನೇಕ ಬ್ರಾಹ್ಮಣರಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಹಾಗಾಗಿ ಬ್ರಾಹ್ಮಣ ಧರ್ಮವನ್ನು ಗೌರವಿಸುತ್ತಿದ್ದರೆಂದು ತಿಳಿದು ಬರುತ್ತದೆ. ಇವರು ಯುದ್ಧಕ್ಕೆ ಹೊರಡುವ ಮುನ್ನ ಜೋಯಿಸರಿಂದ ಒಳ್ಳೆಯದಾಗಲೆಂದು ಓಲೆಯನ್ನು ಬರೆಯಿಸಿ ಅವರ ಆಶೀರ್ವಾದ ಪಡೆಯುತ್ತಿದ್ದರು. ಯುದ್ಧದಲ್ಲಿ ಜಯಶಾಲಿಯಾಗಿ ಬಂದ ಮೇಲೆ ಅವರಿಗೆ ಅಪಾರ ಮೊತ್ತದ ದಾನವನ್ನು ನೀಡುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರ ಮತ್ತೊಂದು ಆರಾಧ್ಯ ದೈವ ಎಂದರೆ ಉಚ್ಚಂಗೆಮ್ಮ. ಉಚ್ಚಂಗಿದುರ್ಗದ ಉಚ್ಚಂಗೆಮ್ಮ ಇವರ ಕುಲದೇವತೆಯಾಗಿದ್ದಳು. ಮೊದಲ ದೊರೆ ದಾದೇನಾಯಕ ಉಚ್ಚಂಗಿಯಲ್ಲಿ ಅರಮನೆಯನ್ನು ಕಟ್ಟಿಕೊಂಡು ಆಳ್ವಿಕೆ ನಡೆಸುತ್ತಿದ್ದ. ಈ ದೇವಿಯ ಉಚ್ಚಂಗಿದುರ್ಗದಲ್ಲಿ ವಿಶೇಷವಾಗಿ ಮೂರು ಹಬ್ಬಗಳನ್ನು ಆಚರಿಸಲಾಗುತ್ತದೆ. ಮೊದಲನೆಯದು ಒಂದು ವಾರದವರೆಗೆ ನಡೆಯುವ ಯುಗಾದಿ ಉತ್ಸವ. ಎರಡನೆಯದು ದಸರಾ ಉತ್ಸವ, ಮೂರನೆಯದು ಅನೇಕ ವರ್ಷಗಳ ನಂತರ ನಡೆಯುವ ಹಿರೇರ ಹಬ್ಬ.

ಒಂದು ವಾರದವರೆಗೆ ನಡೆಯುವ ಈ ಹಬ್ಬಕ್ಕೆ ಕರ್ನಾಟಕದ ಮೂಲೆ ಮೂಲೆಗಳಿಂದಲ್ಲದೆ ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ಮುಂತಾದ ರಾಜ್ಯಗಳಿಂದ ಭಕ್ತಾದಿಗಳು ಆಗಮಿಸುತ್ತಾರೆ. ಹಬ್ಬದ ಮೂರನೆಯ ದಿನ ದೇವಿಗೆ ಹೊಸ ವಸ್ತ್ರ ಹಾಗೂ ಆಭರಣಗಳಿಂದ ಅಲಂಕರಿಸಿ

ಉತ್ಸವಮೂರ್ತಿಯನ್ನು ಮೆರವಣಿಗೆ ಮಾಡುತ್ತಾರೆ. ಅಂದು ನಡೆಯುವ ಓಕುಳಿ ಕಾರ್ಯಕ್ರಮ ಓಕುಳಿಗುಣಿಯಲ್ಲಿಯೇ ನಡೆಯುತ್ತದೆ. ಒಂದು ನೀರು ತುಂಬಿದ ಗುಣಿಯ ಮೇಲ್ಭಾಗದಲ್ಲಿ ಎಂಟು ಅಡಿಯ ಅಂತರದಲ್ಲಿ ತೆಂಗಿನಕಾಯಿಗಳನ್ನು ಕಟ್ಟಿರುತ್ತಾರೆ. ಇವುಗಳನ್ನು ಕಿತ್ತು ನೀರಿನಲ್ಲಿ ಬೀಳಿಸುವುದೇ ಓಕುಳಿಗುಣಿ ಉತ್ಸವ. ಹೀಗೆ ತೆಂಗಿನಕಾಯಿ ಕಿತ್ತವರಿಗೆ ಒಳ್ಳೆಯದಾಗುತ್ತದೆ ಎಂಬ ಪ್ರತೀತಿ ಇದ್ದು ಗ್ರಾಮದ ನಾಯಕ ಜನಾಂಗದವರು ತೆಂಗಿನಕಾಯಿಗಳನ್ನು ಕೀಳುತ್ತಾರೆ. ಅದೇ ದಿವಸ ಚಂದ್ರದರ್ಶನ ಮಾಡಿ ಒಬ್ಬರಿಗೊಬ್ಬರು ಶುಭ ಹಾರೈಸುತ್ತಾರೆ.

ಉಚ್ಚಂಗಿದುರ್ಗಕ್ಕೆ ಆಗ್ನೇಯ ದಿಕ್ಕಿನಲ್ಲಿರುವ ಸಣ್ಣಪರ್ವತದಲ್ಲಿ ಒಂದು ಶಮೀವೃಕ್ಷವಿದೆ. ಉಚ್ಚಂಗಿದುರ್ಗದ ಪಾಳೆಯಗಾರರು ವಿಜಯದಶಮಿಯ ದಿನ ಆ ಗುಡ್ಡಕ್ಕೆ ಸೀಮೋಲ್ಲಂಘನ ಮಾಡಿ ಶಮೀ ಪೂಜಾದಿಗಳನ್ನು ಮಾಡಿಕೊಂಡು ಬರುವ ಸಂಪ್ರದಾಯವಿತ್ತು. ಪಂಚಲೋಹದಿಂದ ನಿರ್ಮಿತವಾದ ಉಚ್ಚಂಗೆಮ್ಮನ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿ ಕೊಂಡು ಬನ್ನಿಮುಡಿಯುವ ಕಾರ್ಯಕ್ರಮ ನಡೆಯುತ್ತದೆ. ಹೀಗೆ ಬನ್ನಿ ಮುಡಿಯಲು ತೆರಳುವಾಗ ಒಮ್ಮೆ ೩೬ ಅಂಗರಕ್ಷಕರ ಸೈನ್ಯ ಮತ್ತು ಇತರರ ಸಮೂಹ ಮಾತ್ರ ಪಲ್ಲಕ್ಕಿಯೊಂದಿಗೆ ತೆರಳಿತ್ತು. ಇದನ್ನರಿತ ಚಿತ್ರದುರ್ಗದ ನಾಯಕರು ಸುಸಜ್ಜಿತ ಸೈನ್ಯದೊಡನೆ ಏಕಾಏಕಿಯಾಗಿ ಮಿಂಚಿನ ಯುದ್ಧವನ್ನು ಮಾಡಿ ಉತ್ಸವ ಮೂರ್ತಿಯನ್ನು ತೆಗೆದುಕೊಂಡು ಹೋದರು. ಆಗ ಮೊದಲ ಸೋಮಶೇಖರನಾಯಕ ಈಗ ನನ್ನ ಗತಿಯೇನು ಎಂದು ದೇವಿಯನ್ನು ಪ್ರಾರ್ಥಿಸಿದಾಗ ತನ್ನನ್ನು ಪ್ರತಿಷ್ಠಾಪಿಸಿದ ಕಾಲದಿಂದಲೂ ಭೂಗರ್ಭದಲ್ಲಿರಿಸಿರುವ ಲೋಹದ ಮೂರ್ತಿಯನ್ನು ಶಾಂತಿಪೂರ್ವಕವಾಗಿ ತೆಗೆಯಿಸಿ ಉಪಯೋಗಿಸುವಂತೆ ಸ್ವಪ್ನದಲ್ಲಿ ಬಂದು ಸೂಚಿಸಿದಳಂತೆ. ಅದರಂತೆ ಸ್ವಪ್ನದಲ್ಲಿ ಕಂಡ ಭೂಮಿಯಲ್ಲಿದ್ದ ಮೂರ್ತಿ ಈಗ ಉತ್ಸವ ಮೂರ್ತಿಯಾಗಿದೆ. ಬನ್ನಿ ಮುಡಿಯುವ ಹಬ್ಬವು ವಿಶಿಷ್ಟ ರೀತಿಯಲ್ಲಿ ಆಚರಿಸಲ್ಪಡುತ್ತದೆ. ಆ ದಿನ ಸಂಜೆ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿಕೊಂಡು ವಿವಿಧ ವಾದ್ಯ ಮೇಳಗಳೊಂದಿಗೆ ಬೆಟ್ಟದಿಂದ ಕೆಳಗೆ ಹೊನ್ನೆಹೊಂಡದ ಎದುರು ಭಾಗದಲ್ಲಿರುವ ಚೌತ್ ಮನೆಯ ಬನ್ನಿಮರಕ್ಕೆ ತಂದು ಬನ್ನಿಕಟ್ಟೆಯನ್ನು ಮೂರು ಸುತ್ತು ಪ್ರದಕ್ಷಿಣೆ ಹಾಕಿಸಿ ದೇವಿ ಕಟ್ಟೆಯ ಮೇಲೆ ಪವಡಿಸಿದ ಮೇಲೆ ಪ್ರತಿ ವರ್ಷದ ಪದ್ಧತಿಯಂತೆ ದೇವಿಯ ಕೇಸರಿ ಬಣ್ಣದ ಧ್ವಜ ಹರಾಜು ನಡೆಯುತ್ತದೆ. ಹರಾಜಿನಲ್ಲಿ ದೇವಿಯ ಧ್ವಜ ತೆಗೆದುಕೊಂಡವರು ಹರಾಜಿನ ಮೊತ್ತ ಮತ್ತು ಹೊಸ ಧ್ವಜವನ್ನು ಬರುವ ವರ್ಷದ ದಸರಾ ದಿನದಂದು ತಂದು ಸಲ್ಲಿಸುತ್ತಾರೆ. ಇದಾದ ನಂತರ ಅರ್ಚಕರು ಬಿಲ್ಲನ್ನು ಹೆಗಲಿಗೆ ಏರಿಸಿ ಬಾಣಗಳನ್ನು ಹೊಡೆಯುವ ಪದ್ಧತಿಯಿದೆ.

ಹಿರೇರಹಬ್ಬದ ಆಚರಣೆಯು ಸಾಮಾನ್ಯವಾಗಿ ಮೂರು, ಐದು, ಇಲ್ಲವೆ ಒಂಬತ್ತು ವರ್ಷಕ್ಕೊಮ್ಮೆ ನಡೆಯುತ್ತದೆ. ಕೆಲವೊಮ್ಮೆ ಹನ್ನೊಂದು ವರ್ಷದವರೆಗೂ ಮುಂದೂಡಲ್ಪಡುತ್ತದೆ. ಇದು ತುಂಬಾ ವೆಚ್ಚದ್ದಾಗಿದ್ದು ಉತ್ತಮ ಬೆಳೆ ಮಳೆ ಆದಾಗ ಈ ಹಬ್ಬವನ್ನು ಆಚರಿಸುತ್ತಾರೆ. ಐದು

ದಿನಗಳವರೆಗೆ ನಡೆಯುವ ಈ ಹಬ್ಬವನ್ನು ಹೋಳಿ ಹುಣ್ಣಿಮೆಗಿಂತ ಮೊದಲು ಒಂದು ದಿನವನ್ನು ನಿಶ್ಚಯಿಸಿ ಎಲ್ಲಾ ಜನಾಂಗದ ಪ್ರಮುಖರು ಸೇರಿ ದೇವಸ್ಥಾನಕ್ಕೆ ಹೋಗಿ ದೇವಿಯ ಭಂಡಾರ ಹಚ್ಚಿಕೊಂಡು ಹಬ್ಬದ ದಿನವನ್ನು ನಿಗದಿಪಡಿಸುತ್ತಾರೆ. ನಂತರ ದೇವಿಗೆ ಬಲಿ ಕೊಡಲು ಕೋಣವನ್ನು ಬಿಟ್ಟು ಅದಕ್ಕೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ಪಟ್ಟದ ಕೋಣವನ್ನು ಬಲಿ ಕೊಡುವವರೆಗೆ ೧೮ ದಿನ ಅದರ ಪೂರ್ಣ ಉಸ್ತುವಾರಿಯನ್ನು ಹರಿಜನರೇ ನೋಡಿಕೊಳ್ಳುತ್ತಿದ್ದರು. ಹೀಗೆ ದೇವಿಗೆ ಸಂಬಂಸಿದಂತೆ ಇನ್ನೂ ಅನೇಕ ಆಚರಣೆಗಳಿದ್ದವು.

ಹರಪನಹಳ್ಳಿ ಪಾಳೆಯಗಾರರ ಮತ್ತೊಂದು ಆರಾಧನಾ ದೇವರೆಂದರೆ ಹನುಮಂತ ಅಥವಾ ಆಂಜನೇಯ. ವಿಜಯನಗರದ ಅರಸರು ಹೆಚ್ಚಾಗಿ ಆಂಜನೇಯ ದೇವಾಲಯಗಳನ್ನು ನಿರ್ಮಿಸಿ ಅದರ ಆರಾಧಕರಾಗಿದ್ದರಂತೆ. ಇವರೂ ಕೂಡ ಕೆಲವು ದೇವಾಲಯಗಳನ್ನು ನಿರ್ಮಿಸಿ ಆರಾಧಿಸುತ್ತಿದ್ದರೆಂದು ಕೆಲವು ದಾಖಲೆಗಳಿಂದ ತಿಳಿದು ಬರುತ್ತದೆ. ಮೊದಲ ಅರಸ ದಾದೇನಾಯಕ ಹರಪನಹಳ್ಳಿಯಲ್ಲಿ ೧೨ ಆಂಜನೇಯ ದೇವರ ಗುಡಿಗಳನ್ನು ನಿರ್ಮಾಣ ಮಾಡಿಸಿದ್ದನೆಂದು ಹೇಳಲಾಗಿದೆ. ಇವು ಈಗಲೂ ಕಂಡಬರುತ್ತವೆ. ಸಾಮಾನ್ಯವಾಗಿ ಎಲ್ಲಾ ಪಾಳೆಯಗಾರ ಅರಸರು ಆಂಜನೇಯನ ಪರಮಭಕ್ತರಾಗಿದ್ದುದು ಕಂಡು ಬರುತ್ತದೆ. ಇದು ತಮ್ಮ ಅರಸರ ಸಂಪ್ರದಾಯ ಮುಂದುವರಿಕೆಯಾಗಿ ಅನುಸರಿಸಿದರೆಂತಲೂ ಅಥವಾ ಸ್ವತಂತ್ರವಾಗಿ ಅನುಸರಿಸಿದರೋ ಗೊತ್ತಿಲ್ಲ.

ಒಂದು ಕಾಲಕ್ಕೆ ವಿಶೇಷವಾಗಿ ದಕ್ಷಿಣಭಾರತಕ್ಕೆ ಸೀಮಿತವಾಗಿದ್ದ ಹನುಮಂತನ ಪೂಜೆ ಈಗ ಭಾರತದಲ್ಲೆಲ್ಲ ನಡೆಯುತ್ತದೆ. ಆದರೆ ಕನ್ನಡ ನಾಡಿನಲ್ಲಿ ವಿಶೇಷವಾಗಿ ಪೂಜೆಗೊಳ್ಳುವ ಈ ದೇವತೆ ತಮ್ಮವನೇ ಎಂದು ಕರೆದುಕೊಂಡಿರುವುದೂ ಇದೆ. ಕೋಟೆಕೊತ್ತಲಗಳಲ್ಲಿ ಬೇಟೆಗಾರರ ವಸತಿಗಳಲ್ಲಿ ಪೂಜೆಗೊಳ್ಳುತ್ತಿದ್ದ ಈ ದೈವದ ಪ್ರಾಚೀನತೆ ತುಂಬಾ ಇದೆ. ಈ ದೇವತೆ ಜಾನಪದ ನೆಲೆಯಿಂದ ಬಂದುದ್ದಾಗಿದ್ದು ಮೂರ್ತಿಯ ಆಕಾರ ಇತಿಹಾಸ, ಸ್ವಭಾವ, ಪೂಜಾಪದ್ಧತಿ ಎಲ್ಲವೂ ಇದನ್ನೇ ಸೂಚಿಸುತ್ತದೆ. ನಾಡಿನ ಗುಡ್ಡಗಾಡುಗಳಲ್ಲಿ ಕಾಡುಮೇಡುಗಳಲ್ಲಿ ಮೂಲೆಮೂಲೆಯ ಹಳ್ಳಿಗಳಲ್ಲಿ ಹನುಮಂತನ ಸಣ್ಣಸಣ್ಣ ಗುಡಿಗಳು ಕಂಡು ಬರುತ್ತವೆ. ಹಾಗೆಯೇ ಊರ ಹೊರಗೆ ಅವನ ಗುಡಿಗಳಿರುವುದು ಇನ್ನೂ ವಿಶೇಷ. ಹನುಮಂತನ ತಾಂತ್ರಿಕ ಪ್ರಸ್ತುತಿ ತುಂಬ ಗಮನಾರ್ಹವಾದುದು. ಸಾಮಾನ್ಯವಾಗಿ ವಶೀಕರಣ ಮೊದಲಾದ ಸಿದ್ಧಿಗಳಿಗೆ 'ಓಂ ನಮೋ ಭಗವತೇ ಅಂಜನೇಯಾಯ ಮಹಾಬಲಯ ಸ್ವಾಹಾ' ಹಾಗೂ 'ಹಂ ಹನುಮತೇ ರುದ್ರಾತ್ಮಕಾಯೇ ಹುಂ ಫಟ್' ಎಂಬ ಮಂತ್ರಗಳು ಬಳಕೆಯಲ್ಲಿವೆ. ಶಿಲ್ಪದಲ್ಲಿ ಅಂಜಲಿಬದ್ಧನಾದ ಭಕ್ತವಿಗ್ರಹ ಮನೆಯಲ್ಲಿ ಪೂಜೆಗೆ ಶ್ರೇಷ್ಠವೆನ್ನುತ್ತಾರೆ. ಆದರೆ ಗುಡಿಗಳಲ್ಲಿ ರಣವೀರಾಂಜನೇಯನ ಮೂರ್ತಿಗಳಿಗೆ ಆದರ ಹೆಚ್ಚು. ಸಾಮಾನ್ಯವಾಗಿ ಇಂತಹ ಶಿಲ್ಪಗಳನ್ನು ನಿಂತಿರುವಂತೆ, ಕುಳಿತಿರುವಂತೆ, ನಡೆಯುತ್ತಿರುವಂತೆ, ಓಡುತ್ತಿರುವಂತೆ ಭಂಗಿಗಳನ್ನು ಮೂಡಿಸಿ ಒಂದು ಕೈಯಲ್ಲಿ ಗದೆ ಅಥವಾ ವೀರಾವೇಶದ ಮುದ್ರೆ ಇನ್ನೊಂದರಲ್ಲಿ ಮರವನ್ನೊ,

ಬೆಟ್ಟವನ್ನೋ ಹಿಡಿದಿರುವಂತೆ ತೋರಿಸುತ್ತಾರೆ. ಇಂತಹ ಆಂಜನೇಯನ ಶಿಲ್ಪಗಳು ವಿಜಯನಗರ ಸಾಮ್ರಾಜ್ಯದ ಅನೇಕ ಕಡೆ ಇವೆ. ಹಾಗೆಯೇ ಹರಪನಹಳ್ಳಿ ಪಾಳೆಯಗಾರರು ಸಹ ಅನೇಕ ದೇವಾಲಯಗಳನ್ನು ನಿರ್ಮಿಸಿ ಆಂಜನೇಯ ಪರಂಪರೆಯನ್ನು ಮುಂದುವರೆಸಿದ್ದರೆಂದು ಹೇಳಬಹುದು.

**೩.೪ ಶಿಕ್ಷಣ, ಸಾಹಿತ್ಯ ಮತ್ತು ಸಂಗೀತ**

ಭಾರತೀಯ ಇತಿಹಾಸ, ಸಂಸ್ಕೃತಿ, ಪರಂಪರೆಯನ್ನು ಗಮನಿಸಿದಾಗ ಇಲ್ಲಿ ಪಾಲಿಸಲಾಗಿದ್ದ ಶಿಕ್ಷಣ ವ್ಯವಸ್ಥೆಗೆ ಒಂದು ಸುದೀರ್ಘವಾದ ಇತಿಹಾಸವಿದೆ. ತಕ್ಷಶಿಲೆ ವಿಶ್ವದ ಅತ್ಯಂತ ಪ್ರಾಚೀನ ವಿಶ್ವವಿದ್ಯಾಲಯವಾಗಿತ್ತು. ನಳಂದ, ಉಜ್ಜೈನಿ, ಓದಂತಪುರಿ, ಕಾಶಿ, ಕಂಚಿ ಮುಂತಾದವುಗಳು ಇತಿಹಾಸ ಪ್ರಸಿದ್ಧ ಶಿಕ್ಷಣ ಕೇಂದ್ರಗಳಾಗಿದವು. ಕರ್ನಾಟಕದಲ್ಲಿ ಬಳ್ಳಿಗಾವಿ, ಸಾಲೋಟಗಿ ಪ್ರಸಿದ್ಧ ವಿದ್ಯಾಕೇಂದ್ರಗಳಾಗಿದ್ದವು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ನಾಡಿನ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳ ಅರಸರು ಶಿಕ್ಷಣ ಮತ್ತು ಸಾಹಿತ್ಯಕ್ಕೆ ಅಪಾರ ಪ್ರೋತ್ಸಾಹ ನೀಡಿದ್ದರು. ಕನ್ನಡದ ಪ್ರಪ್ರಥಮ ಶಾಸನ (ಹಲ್ಮಿಡಿ), ಕನ್ನಡದ ಪ್ರಥಮ ಕೃತಿ, (ಕವಿರಾಜಮಾರ್ಗ) ಕನ್ನಡದ ಪ್ರಥಮ ತ್ರಿಪದಿ (ಕಪ್ಪೆ ಅರಬಟ್ಟನ ಶಾಸನ) ಸಾಹಿತ್ಯ ಇತ್ಯಾದಿ ರಚನೆಗೊಂಡಿವೆ. ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಶಿಕ್ಷಣ ಮತ್ತು ಸಾಹಿತ್ಯ ಕೃಷಿ ಸಮೃದ್ಧಿಯಾಗಿತ್ತು. ಈ ಸಾಮ್ರಾಜ್ಯ ಪತನ ನಂತರ ಅಸ್ತಿತ್ವಕ್ಕೆ ಬಂದ ಸಣ್ಣ–ಮಟ್ಟ ರಾಜ ಮನೆತನಗಳೂ ಸಹ ಈ ಪರಂಪರೆಯನ್ನು ಇತಿ–ಮಿತಿಯಲ್ಲಿ ಮುಂದುವರೆಸಿದವು. ಈ ನಿಟ್ಟಿನಲ್ಲಿ ಲಿಂಗಣ್ಣ ಕವಿಯ 'ಕೆಳದಿ ನೃಪ ವಿಜಯಂ', ೬ನೇ ಚಾಮರಾಜ ಒಡೆಯರ ಅಸ್ಥಾನ ಕವಿಯ 'ಅಶ್ವಶಾಸ್ತ್ರ', ಚಿಕ್ಕದೇವರಾಜ ಒಡೆಯರ ಅಸ್ಥಾನಕವಿ ತಿರುಮಲಾರ್ಯರ 'ಚಿಕ್ಕದೇವರಾಜ ಬಿನ್ನಪಂ' ಮಹಿಳಾ ವಿದ್ವನ್ಮಣಿಗಳಾದ ಸಂಚಿಹೊನ್ನಮ್ಮನ 'ಹದಿಬದೆಯ ಧರ್ಮ' ಶೃಂಗಾರಮ್ಮನ 'ಪದ್ಮಿನಿ ಕಲ್ಯಾಣ' ಮುಂತಾದ ಕೃತಿಗಳನ್ನು ಹೆಸರಿಸಬಹುದು. ಕ್ರಿ.ಶ. ೧೫೦೦ ರಿಂದ ೧೮೦೦ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರೂ ಸಹ ನಾಡಿನ ಶಿಕ್ಷಣ, ಸಾಹಿತ್ಯ, ಸಂಗೀತ ಮುಂತಾದ ಸಾಂಸ್ಕೃತಿಕ ಪರಂಪರೆಗೆ ಆದ್ಯತೆ ನೀಡಿದ್ದರು.

ಆಧುನಿಕ ಹರಪನಹಳ್ಳಿ ಪರಿಸರ ಶಿಕ್ಷಣ ಮತ್ತು ಸಾಹಿತ್ಯ ಕೃಷಿಗೆ ಹೆಸರಾಗಿದೆ ಕ್ರಿ.ಶ. ೧೯೪೭ರಲ್ಲಿಯೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಇಲ್ಲಿ ಸಂಯೋಜನೆಗೊಂಡಿತ್ತು. ಕರ್ನಾಟಕ ಇತಿಹಾಸ ಅಕಾಡೆಮಿಯ ಸಮ್ಮೇಳನಗಳು ಹರಪನಹಳ್ಳಿ, ಹೊನ್ನಾಳಿ, ಹಗರಿಬೊಮ್ಮನಹಳ್ಳಿ, ದಾವಣಗೆರೆ ಮುಂತಾದಡೆ ಏರ್ಪಟ್ಟಿವೆ. ಹರಪನಹಳ್ಳಿ, ದಾವಣಗೆರೆ, ಹೊಸಪೇಟೆ, ನಗರಗಳು ಶಿಕ್ಷಣಕ್ಕೆ ಹೆಸರಾಗಿವೆ. ಇಂತಹ ಆಧುನಿಕ ಇತಿಹಾಸ ಹೊಂದಿರುವ ಈ ಪ್ರದೇಶ ಪಾಳೆಯಗಾರರ ಕಾಲದಲ್ಲಿಯೇ

ನಿಸ್ಸಂಶಯವಾಗಿ ಶಿಕ್ಷಣ ಮತ್ತು ಸಾಹಿತ್ಯ, ಸಂಗೀತ ಸಂಸ್ಕೃತಿಯ ಪೋಷಣಾ ಕೇಂದ್ರವಾಗಿತ್ತೆಂದು ಅಂದಾಜಿಸಬಹುದು.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಹರಪನಹಳ್ಳಿ, ನೀಲಗುಂದ, ಬಾಗಳಿ, ನಂದಿಬೇವೂರು, ಉಚ್ಚಂಗಿದುರ್ಗ, ಮುತ್ತಿಗಿ, ನಾರಾಯಣ ದೇವರಕೆರೆ, ಮುಂತಾದವು ಪ್ರಮುಖ ಶಿಕ್ಷಣ ಮತ್ತು ಸಂಸ್ಕೃತಿಯ ಕೇಂದ್ರಗಳಾಗಿದ್ದವು. ಶಿಕ್ಷಣ ಪ್ರಸಾರದಲ್ಲಿ ದೇವಾಲಯ, ಮಠ, ಅಗ್ರಹಾರಗಳು ಪ್ರಮುಖ ಪಾತ್ರ ವಹಿಸಿದ್ದವು. ಸಮಾಜದ ಉನ್ನತ ವರ್ಗದಲ್ಲಿದ್ದ ಬ್ರಾಹ್ಮಣರು ಶಿಕ್ಷಣ ವ್ಯವಸ್ಥೆಯ ಮುಂಚೂಣಿಯಲ್ಲಿದ್ದರು. ಈ ವಿದ್ವಜರು ಪಾಳೆಯಗಾರರಿಂದ ಅನೇಕ ದಾನ-ದತ್ತಿಗಳನ್ನು ಪಡೆದಿದ್ದರೆಂದು ಶಾಸನಗಳಿಂದ ಗೊತ್ತಾಗುತ್ತದೆ. ಆಧಾರಗಳನ್ನು ಪರಿಶೀಲಿಸಿದಾಗ ಈ ಕಾಲಾವಧಿಯಲ್ಲಿಯೂ ಸಾಹಿತ್ಯ ಕೃಷಿ ಸಮೃದ್ಧಿಗೊಂಡಿರುವುದು ಗೊತ್ತಾಗುತ್ತದೆ. ನೇರವಾಗಿ ಪಾಳೆಯಗಾರರ ಅಸ್ಥಾನದಲ್ಲಿಯೇ ಇದ್ದು ಶಿಕ್ಷಣ-ಸಾಹಿತ್ಯ ಕೃಷಿಯಲ್ಲಿದ್ದ ಪಂಡಿತರ ಇತಿಹಾಸ ನಮಗೆ ದೊರೆಯುವುದಿಲ್ಲ. ಆದರೆ ದಾದೇನಾಯಕನ ಕಾಲದಲ್ಲಿದ್ದ ಬಾಗಳಿಯ 'ದೇವಕವಿ' (ಮರುಳಸಿದ್ದನ ಕಾವ್ಯ) ಮೈಲಾರ ಬಸವಲಿಂಗ ಶರಣರು (ಗುರುಕರಣ ತ್ರಿವಿಧಿ) ರಚಿಸಿದರು. ೧೭ನೆಯ ಶತಮಾನದ ಮಲ್ಲಿಕಾರ್ಜುನ ಪಂಡಿತ (ಶಂಕರದಾಸಿಮಯ್ಯ ಪುರಾಣ), ಮಲ್ಲಿನಾಥ ಪಂಡಿತನ ಎಮ್ಮೆಬಸವನ ಕಾಲಜ್ಞಾನ ಮುಂತಾದ ಕೃತಿಗಳು ರಚನೆಗೊಂಡಿವೆ.

ಈ ಕಾಲದ ಸಾಹಿತ್ಯ ಕೃಷಿಯಲ್ಲಿ ಇಬ್ಬರು ಪಂಡಿತರ ಹೆಸರುಗಳು ಪ್ರಸಿದ್ಧಿಯಾಗಿವೆ. ಇಂದು ಸಾಹಿತ್ಯ ಕ್ಷೇತ್ರದ ಸಾಧಕರಿಗೆ 'ಮಹಾಲಿಂಗರಂಗ' ಎಂಬ ಪ್ರಶಸ್ತಿಯನ್ನು ಈ ಭಾಗದಲ್ಲಿ ನೀಡಲಾಗುತ್ತಿದೆ. ಈ ಮಹಾಲಿಂಗ ರಂಗ ಎಂಬ ಕವಿಯು ಉಚ್ಚಂಗಿದುರ್ಗದವನೆಂದೂ ನಂಬಲಾಗಿದೆ. ದಾವಣಗೆರೆಯಲ್ಲಿ ಈತನ ಸ್ಮಾರಕವೊಂದಿದೆ. ಜಗಳೂರು ತಾಲ್ಲೂಕಿನ ಕೊಣಚಗಲ್ಲು ರಂಗನಾಥಸ್ವಾಮಿ ಗುಡ್ಡವೂ ಈತನ ಸ್ಥಳ ಎನ್ನಲಾಗುತ್ತಿದೆ. ಉಚ್ಚಂಗಿದುರ್ಗದಲ್ಲಿ ಈತನ ಸಮಾಧಿ ಇದೆ ಎಂದೂ ಹೇಳಲಾಗುತ್ತಿದೆ ಈ ಕುರಿತು ಸ್ಪಷ್ಟತೆಗಾಗಿ ಹೆಚ್ಚಿನ ಸಂಶೋಧನೆಗಳು ನಡೆಯಬೇಕೆಂದು ಡಾ. ಎಂ. ಕೊಟ್ರೇಶ್‌ರವರು ಅಭಿಪ್ರಾಯ ಪಡುತ್ತಾರೆ. ಈತನ ಪ್ರಸಿದ್ಧ ಕೃತಿ 'ಅನುಭವಾಮೃತ'.

ಹರಪನಹಳ್ಳಿ ಪಾಳೆಯಗಾರ ಬಾಗಳಿ ಬಸಪ್ಪ ನಾಯಕನ ಆಶ್ರಯದಲ್ಲಿದ್ದ ಉಚ್ಚಂಗಿದುರ್ಗದ 'ಹರಿಯಣ್ಣ ಕವಿ', 'ಹಯರತ್ನ ಶ್ರೇಣಿ' ಎಂಬ ಕೃತಿಯನ್ನು ರಚಿಸಿದ್ದಾನೆ. ಪ್ರಾಚೀನ ಹಸ್ತಪ್ರತಿಯನ್ನು ಸಂಶೋಧಿಸಿ ಡಾ. ಎಫ್.ಟಿ. ಹಳ್ಳಿಕೇರಿಯವರು ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿ ಆ ಕಾಲದ ರಾಜಕೀಯ ಇತಿಹಾಸ ಹಾಗೂ ಕುದುರೆಗಳ ಆರೈಕೆ, ಲಾಲನೆ-ಪಾಲನೆ, ಉಪಯೋಗ, ಅಶ್ವದಳ ಇತ್ಯಾದಿ ಕುರಿತು ವೈಜ್ಞಾನಿಕ ವಿವರಣೆ ನೀಡುತ್ತದೆ. ಭೀಮೇಶ್ವರ ಎಂಬ ಅಂಕಿತದಲ್ಲಿ ನೂರಾರು ವಚನಗಳನ್ನು ಪಂಚಗಣಾಧೀಶ್ವರರಲ್ಲಿ ಒಬ್ಬರಾದ ಶ್ರೀ

ಕೋಲುಶಾಂತೇಶ್ವರರು ರಚಿಸಿದ್ದಾರೆ. ಇವರ ಮಠ ಅರಸೀಕೆರೆಯಲ್ಲಿದೆ. ಜಾನಪದ ಸಾಹಿತ್ಯ, ಲಾವಣಿ, ಕೋಲಾಟದ ಪದಗಳು, ಸೋಬಾನೆ ಪದಗಳು ಈ ಕಾಲದಲ್ಲಿ ರಚನೆಗೊಂಡಿವೆ. ಪಾಳೆಯಗಾರ ಕಾಲಾವಧಿಯ ನಂತರವೂ ಸಾಹಿತ್ಯ ಕೃಷಿ ಮುಂದುವರೆದಿದ್ದು ಈ ನಿಟ್ಟಿನಲ್ಲಿ ಹರಪನಹಳ್ಳಿ ಭೀಮವ್ವನವರ ಹಾಡುಗಳು, ಬೀಚಿಯವರ ಸಾಹಿತ್ಯ, ಚಿಕ್ಕೇರೂರು ಗೋವಿಂದಾಚಾರ್ಯ ಹರಪನಹಳ್ಳಿ ತೆಗ್ಗಿನಮಠ ಪಂಚಾಂಗ ರಚಿಸಿದ ಹಯಾತ್‌ಶಾಸ್ತ್ರಿ, ಮುದೇನೂರು ಸಂಗಣ್ಣ ಮುಂತಾದವರ ಸಾಹಿತ್ಯ ಮುಖ್ಯವಾಗಿದೆ.

ಸಂಗೀತ, ನಾಟಕ, ಕೋಲಾಟ, ಸೋಬಾನೆಪದ, ತೊಗಲು ಗೊಂಬೆಯಾಟ, ಡೊಳ್ಳು ಕುಣಿತ, ಲಾವಣಿ ಜನಪದ ಕಲೆಗಳ ಪರಂಪರೆ ಈಗಲೂ ಮುಂದುವರೆದಿವೆ. ಮೂಡ್ಲಗೆರೆಯ ಕೋಲಾಟ, ಹಲವಾಗಲು ತೊಗಲು ಗೊಂಬೆಯಾಟ, ಮರಿಯಮ್ಮನಹಳ್ಳಿ, ಕೂಡ್ಲಿಗಿ, ನಾಟಕ ಕಲಾ ಕ್ಷೇತ್ರದಲ್ಲಿ ಹೆಸರುವಾಸಿಯಾಗಿವೆ. ಹೀಗೆ ಹರಪನಹಳ್ಳಿ ಪಾಳೆಯಗಾರರು ವಿಜಯನಗರೋತ್ತರ ಹಾಗೂ ಆಧುನಿಕ ಸಾಂಸ್ಕೃತಿಕ ಪರಂಪರೆಯ ಕೊಂಡಿಯಾಗಿದ್ದಾರೆ.

**೩.೫ ಆರ್ಥಿಕ ವ್ಯವಸ್ಥೆ, ಕೃಷಿ, ಕೈಗಾರಿಕೆ, ವ್ಯಾಪಾರ, ಸಂತೆಗಳು**

ನಾಡಿನ ಸಾಂಸ್ಕೃತಿಕ ಅಭಿವೃದ್ಧಿಗೆ ಆರ್ಥಿಕ ವ್ಯವಸ್ಥೆ ಬಹು ಮುಖ್ಯವಾದುದು. ಐತಿಹಾಸಿಕವಾಗಿ ರೂಪಿತವಾದ ಸಪ್ತಾಂಗಗಳಲ್ಲಿ ಅರ್ಥವೂ ಒಂದು. ಇದು ಮಾನವನ ಆರ್ಥಿಕಾಭಿವೃದ್ಧಿಯ ವ್ಯವಸ್ಥೆಯನ್ನು ಸಮತೋಲನದಲ್ಲಿ ಮುನ್ನೆಡೆಸುತ್ತದೆ. ಈ ಮೂಲಕ ಒಂದು ಸಾಮ್ರಾಜ್ಯದ ಆರ್ಥಿಕಾಭಿವೃದ್ಧಿಯನ್ನು ಸಮತೋಲನದಲ್ಲಿಡಲು ಸಾಧ್ಯವಾಗುತ್ತದೆ. ಸಾಮ್ರಾಜ್ಯದ ರಕ್ಷಣೆಗೆ ಸೈನ್ಯವನ್ನು ಅವಲಂಬಿಸಿದಂತೆ ರಾಜ್ಯದ ಸ್ಥಿತಿಗತಿ ಆರ್ಥಿಕತೆಯನ್ನು ಅವಲಂಬಿಸಿತ್ತು. ಇದರಲ್ಲಿ ನೈಸರ್ಗಿಕ ಸಂಪನ್ಮೂಲಗಳಲ್ಲದೆ ಅವರಿಂದ ಸದುಪಯೋಗ ಪಡಿಸಿಕೊಳ್ಳುವ ಕೃಷಿ ಮೊದಲ್ಗೊಂಡು ಅನೇಕ ವೃತ್ತಿಗಳ ಉತ್ಪಾದನೆಯನ್ನು ಒಳಗೊಂಡಿದೆ. ಸಂಪನ್ಮೂಲಗಳ ಬಳಕೆ ಉತ್ಪಾದನಾ ಸಾಮರ್ಥ್ಯವನ್ನು ತೆರಿಗೆ ಅವಲಂಬಿಸಿತ್ತು. ರಾಜ್ಯದ ರಾಜಕೀಯ ಒಗ್ಗಟ್ಟು, ಸ್ಥಾನಮಾನ ಮತ್ತು ಸಾರ್ವಜನಿಕ ಚಟುವಟಿಕೆಗಳು ಸಹ ಸಂಗ್ರಹಿಸುವ ತೆರಿಗೆಯ ಮೇಲೆ ನಿಂತಿತ್ತು.

ಮಾನವನು ನಾಗರಿಕತೆಯತ್ತ ದಾಪುಗಾಲು ಹಾಕುತ್ತಿದ್ದ ಅವಧಿಯಲ್ಲಿ ನೈಸರ್ಗಿಕ ಸಂಪತ್ತುಗಳಲ್ಲಿ ಪ್ರಮುಖವಾಗಿರುವ ಭೂಸಂಪತ್ತನ್ನು ಸರಿಯಾದ ಕ್ರಮದಲ್ಲಿ ಬಳಸಲು ಆರಂಭಿಸಿದನು. ಕೃಷಿ ಮತ್ತು ಗಣಿಗಾರಿಕೆಯನ್ನು ಪ್ರಧಾನವಾಗಿರಿಸಿಕೊಂಡ ಈ ದೇಶದ ಜನತೆ ಆರ್ಥಿಕ ಸುಭದ್ರತೆಗಾಗಿ ಭೂಮಿಯನ್ನು ಆಶ್ರಯಿಸಿದರು. ನೈಸರ್ಗಿಕವಾಗಿ ದೊರೆಯುವ ಮಣ್ಣು, ನೀರು, ಖನಿಜ ಮತ್ತು ಅರಣ್ಯ ಸಂಪತ್ತುಗಳು ಭೂಮಿಯಲ್ಲಿ ಸಮಾವೇಶಗೊಳ್ಳುತ್ತವೆ. ಇದರಿಂದ ಇದು ಮಾನವನ ಬದುಕಿನ ಮೂಲ ಅಂಗವಾಗಿರುವುದರಿಂದ ಇದನ್ನು ಮಹತ್ವದ ಸಂಪನ್ಮೂಲವೆಂದು ಕರೆಯಲಾಗಿದೆ. ಭೌಗೋಳಿಕ

ಹಿನ್ನೆಲೆಯಲ್ಲಿ ಬೆಟ್ಟ, ಗುಡ್ಡ, ಖನಿಜ, ಅರಣ್ಯ ಮತ್ತು ವಿವಿಧ ಸ್ವರೂಪಗಳನ್ನೊಳಗೊಂಡ ಭೂಮಿಯನ್ನು ಅನೇಕ ವಿಭಾಗಗಳಾಗಿ ವಿಂಗಡಿಸಲಾಗಿದೆ. ಪ್ರಾಚೀನ ಶಾಸನಗಳು ಭೂಮಿಯನ್ನು ಸಾಮಾನ್ಯವಾಗಿ 'ಕೆಯಿ' ಎಂದು ಉಲ್ಲೇಖಿಸಲಾಗಿದೆ[೧೦೫]. ಇದರಲ್ಲಿ ಯೋಗ್ಯ ಮತ್ತು ಯೋಗ್ಯವಲ್ಲದ ಭೂಮಿಯೆಂದು ವಿಂಗಡಣೆ ಮಾಡಲಾಗಿದೆ.

ಪ್ರಾಗಿತಿಹಾಸ ಕಾಲದಿಂದ ಮಾನವನು ಒಂದು ಕಡೆ ನೆಲೆ ನಿಂತು ಸ್ಥಿರ ಜೀವನ ನಡೆಸಲು ಪ್ರಾರಂಭಿಸಿದಾಗ ತನ್ನ ಜೀವನ ನಿರ್ವಹಣೆಗಾಗಿ ತನ್ನ ಸುತ್ತಮುತ್ತಲಿನ ಪ್ರದೇಶವನ್ನು ವ್ಯವಸಾಯಕ್ಕೆ ಬಳಸಿಕೊಳ್ಳತೊಡಗಿದನು. ಅಲ್ಲದೆ ನದಿ, ಹಳ್ಳ, ಬಾವಿಗಳ ನೀರನ್ನು ವ್ಯವಸಾಯಕ್ಕೆ ಬಳಸಿಕೊಂಡನು. ಇದರಲ್ಲಿ ಮಳೆಯನ್ನು ಅವಲಂಬಿಸಿ ಸಾಗುವಳಿ ಮಾಡುವ ಭೂಮಿಯನ್ನು ದೇವಮಾತೃಕವೆಂದೂ ಕೆರೆ ಬಾವಿ ಮುಂತಾದ ಕೃತಕ ಜಲಾಶಯಗಳನ್ನು ಅವಲಂಬಿಸಿದ ನೀರಾವರಿ ಭೂಮಿಯನ್ನು ನದಿ ಮಾತೃಕವೆಂದು ವಿಂಗಡಿಸಲಾಗಿದೆ[೧೦೬]. ದೇವಮಾತೃಕ ಪೊಲ-ಹೊಲ-ಗದ್ದೆ-ಗಳ್ದೆಯಲ್ಲಿ ಮತ್ತು ನದಿಮಾತೃಕ ತೋಡದಲ್ಲಿ ಸೇರ್ಪಡೆಗೊಳ್ಳುತ್ತವೆ. ಇದರೊಂದಿಗೆ ಬೀಳು ಭೂಮಿಯನ್ನು ಕಾಯ್ದಿಡಲಾಗುತ್ತಿತ್ತು. ಒಂದು ವೇಳೆ ಬೀಳು ಭೂಮಿ ಇಲ್ಲದಿದ್ದರೆ ಅಂತಹ ಊರುಗಳಲ್ಲಿ ನೂರು ಬಿಲ್ಲಳತೆ (ಧನುಃಶ ಪರಿಮಿತಿಯ) ಭೂಮಿಯನ್ನು ಕಾಯ್ದಿಡಬೇಕೆಂದು ಯಜ್ಞವಲ್ಕ ಸ್ಮೃತಿಯಲ್ಲಿದೆ[೧೦೭]. ಈಗಲೂ ಪ್ರತಿಯೊಂದು ಗ್ರಾಮಗಳಲ್ಲೂ ಗೋಮಾಳ ಎಂದು ಕಾಯ್ದಿಡುವ ನಿಯಮವಿದೆ. ಇಂತಹ ಭೂಮಿ ರಾಜರ (ಸರ್ಕಾರ) ವಶದಲ್ಲಿತ್ತು. ದನಕರುಗಳಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಕಾಯ್ದಿಡಲಾಗುತ್ತಿದ್ದ ಗೋಮಾಳ ಭೂಮಿಯಂತೆ ಶಾಸನಗಳಲ್ಲಿ ಉಲ್ಲೇಖವಾದ 'ಕೆಂಗಾಡು' ಪ್ರದೇಶ ಅದೇ ವರ್ಗಕ್ಕೆ ಸೇರಿದಂತೆ ಕಾಣುತ್ತದೆ ಎಂದು ಅಭಿಪ್ರಾಯಪಡಲಾಗಿದೆ[೧೦೮]. ಅನೇಕ ಶಾಸನಗಳು ಮಣ್ಣಿನ ಸ್ವರೂಪಕ್ಕನುಗುಣವಾಗಿ ಭೂಮಿಯನ್ನು ಬೇರೆ ಬೇರೆ ಹೆಸರುಗಳಿಂದ ಕರೆದಿವೆ. ಉದಾಹರಣೆಗೆ ಕೃಷ್ಣಭೂಮಿ[೧೦೯], ಕಿಸುಗಾಡು[೧೧೦], ಕಾಶ್ಮೀರಭೂಮಿ[೧೧೧], ಕೆಸವರಗೆಯಿ[೧೧೨], ಬಿತ್ತುವಟ್ಟಿ[೧೧೩], ಕರಿಯವೊಲ[೧೧೪], ಕೆಂಗಾಡು[೧೧೫], ಹರಳುಮತ್ತರು[೧೧೬], ಸಿಂಧರ ದೇವಭೂಮಿ[೧೧೭], ಮುಂತಾದವು.

**ಕೃಷಿ**

ಆರ್ಥಿಕ ವ್ಯವಸ್ಥೆಯಲ್ಲಿ ಅನೇಕ ವೃತ್ತಿಗಳಂತೆ ಕೃಷಿ ಅಥವಾ ವ್ಯವಸಾಯ ಪ್ರಮುಖವಾಗಿ ಗೋಚರಿಸುತ್ತದೆ. ಅಲ್ಲದೆ ಇದು ಜನರ ಜೀವನಾಡಿಯೂ ಆಗಿದೆ. ಜೊತೆಗೆ ಇತರ ವೃತ್ತಿಗಳಾದ ವ್ಯಾಪಾರ, ಕೈಗಾರಿಕೆ ಮೊದಲಾದ ಸಮಸ್ತ ಆದಾಯಕ್ಕೆ ಕೃಷಿಯೇ ಮೂಲವಾಗಿತ್ತು. ವೇದಗಳ ಕಾಲದಿಂದಲೂ ವ್ಯವಸಾಯಕ್ಕೆ ಮಹತ್ವ ನೀಡಲಾಗಿದೆ. ಅದನ್ನು ಗೌರವ ಮತ್ತು ಪೂಜ್ಯ ಭಾವನೆಯಿಂದ ಕಾಣಲಾಗಿದೆ. ಪ್ರಾಚೀನ ಕಾಲದಿಂದಲೂ ಅನೇಕ ರಾಜಮಹಾರಾಜರುಗಳು ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಾಣ ಮಾಡುವುದರ ಮೂಲಕ ಕೃಷಿಗೆ ನೀರನ್ನು ಪೂರೈಸಿ ಅಭಿವೃದ್ಧಿಪಡಿಸುತ್ತಾ ಬಂದಿದ್ದಾರೆ. ಅಲ್ಲಿಂದ ಬಡ ರೈತರಿಗೆ ಕೃಷಿಗೆ ಬೇಕಾದ ಸಲಕರಣೆಗಳು ಎತ್ತು, ಬಿತ್ತುಗಳ ವೆಚ್ಚಕ್ಕೆ

ಬೇಕಾದ ಹಣವನ್ನು ರಾಜನು ಕೊಡುವುದರೊಂದಿಗೆ ಒಕ್ಕಲುತನವನ್ನು ದಂಡ, ವಿಷ್ಟ, ತೆರಿಗೆಗಳಿಂದ ನಾಶವಾಗದಂತೆ ರಕ್ಷಿಸಬೇಕೆಂದು ಕೌಟಿಲ್ಯ ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ[೧೧೮]. ಹಾಗೆಯೇ ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲೂ ಭೂಮಿ ಪ್ರಮುಖ ದಾನವಾಗಿತ್ತು.

ಯಜ್ಞವಲ್ಕ್ಯ ಸ್ಮೃತಿ ಧಾನ್ಯಾದಿ ಫಲ ಕೊಡುವ ಭೂಮಿಯನ್ನು ದಾನ ಮಾಡುವ ಮೂಲಕ ದಾತೃಸ್ವರ್ಗ ಲೋಕದಲ್ಲಿ ಪೂಜ್ಯನಾಗುವನು ಎಂದಿದೆ[೧೧೯]. ಭೂಮಿ ಫಲವತ್ತತೆಯ ಮೇಲೆ ಫಲಗಿಟ್ಟಿಸಿಕೊಳ್ಳಬಹುದಾಗಿತ್ತು. ಯಸ್ಯಯಸ್ಯ ಯದಾ ಭೂಮಿ ತಸ್ಯ ತಸ್ಯ ತದಾಫಲ ಎಂಬ ಶಾಸನದ ಹೇಳಿಕೆಗಳು ಇದನ್ನು ಪ್ರಚುರಪಡಿಸುತ್ತವೆ[೧೨೦].

ವ್ಯವಸಾಯವನ್ನು ಮೂಲ ವೃತ್ತಿಯನ್ನಾಗಿ ಮಾಡಿಕೊಂಡ ಒಕ್ಕಲಿಗರನ್ನು ಕುರಿತು ಕುಡುವಕ್ಕಲಿಗ ಮಕ್ಕಳು, ಗೌಡೊಕ್ಕಲು, ತೋಟಿಗರು, ಸಮಸ್ತ ತೋಟಿಗರು ಎಂದೆಲ್ಲಾ ಉಲ್ಲೇಖಗಳು ಶಾಸನಗಳಲ್ಲಿ ಕಂಡು ಬಂದಿವೆ[೧೨೧]. ಹರಪನಹಳ್ಳಿ ತಾಲ್ಲೂಕಿನ ನೀಲಗುಂದ ಶಾಸನ ಸಮಸ್ತ ತೋಟಿಗರುಂ ಕೊನೆಕಾರವುಳಿಯಮುನ್ನೂರ್ಬ್ಬರು ಎನ್ನುವುದರಿಂದ ಇದು ವ್ಯವಸಾಯ ವರ್ಗವನ್ನು ಸೂಚಿಸುತ್ತದೆ[೧೨೨]. ಹೊಲ, ಗದ್ದೆ, ತೋಟಗಳಲ್ಲಿ ಬೆಳೆ ಬೆಳೆಯುತ್ತಿದ್ದ ಬಗ್ಗೆಯೂ ಶಾಸನಗಳಲ್ಲಿದೆ. ನೀರಿನ ವ್ಯವಸ್ಥೆ ಹೆಚ್ಚು ಇದ್ದ ಅನೇಕ ಗ್ರಾಮಗಳಲ್ಲಿ ಕಬ್ಬು ಉತ್ಪಾದನೆ ಹೆಚ್ಚಿನ ಪ್ರಮಾಣದಲ್ಲಿತ್ತು. ತೋಟಸ್ಥಳ ಕಬ್ಬಲುಗಟ್ಟಿ ಎಂದು ನೀಲಗುಂದ ಶಾಸನ ಉಲ್ಲೇಖಿಸಿದೆ[೧೨೩]. ನದಿ, ಕೆರೆ, ಕಟ್ಟೆ, ಬಾವಿ ಮೊದಲಾದ ಸತತ ನೀರಿನ ಆಶ್ರಯವಿರುವ ತೋಟಗಳಲ್ಲಿ ತೆಂಗು, ಅಡಿಕೆ, ವೀಳ್ಯದಲೆ, ಮಾವು, ಹುಣಿಸೆ, ನೇರಲೆ, ಹಲಸು, ನಿಂಬೆ ಮೊದಲಾದವುಗಳನ್ನು ಬೆಳೆಯಲಾಗುತ್ತಿತ್ತು. ಹಾಗೆಯೇ ಹೂದೋಟಗಳಿದ್ದದರ ಬಗ್ಗೆಯೂ ಶಾಸನಗಳು ತಿಳಿಸುತ್ತವೆ. ಚಿರಸ್ತಿಹಳ್ಳಿ ಶಾಸನ ಅರಕೆರೆಯ ಕೆಳಕೆ ದೇವರ ಮೂಡಣ ಹೂದೋಟವಿರುವುದನ್ನು ತಿಳಿಸುತ್ತದೆ[೧೨೪].

ಈ ರೀತಿ ಕೃಷಿಗೆ ಸಂಬಂಧಿಸಿದ ಅನೇಕ ವಿಚಾರಗಳು ಅನೇಕ ಶಾಸನಗಳಿಂದ ತಿಳಿಯಬಹುದಾಗಿದೆ. ಕೃಷಿಯು ಜನ ಸಾಮಾನ್ಯರ ಹಸಿವು ಮತ್ತು ಬಯಕೆಗಳನ್ನು ಈಡೇರಿಸುತ್ತಿದ್ದುದಲ್ಲದೆ ರಾಜ್ಯದ ಬೊಕ್ಕಸಕ್ಕೆ ಸಾಕಷ್ಟು ಪ್ರಮಾಣದಲ್ಲಿ ಆದಾಯ ಬರುತ್ತಿತ್ತು. ಹಾಗಾಗಿ ಪ್ರಜೆಗಳಿಂದ ಪ್ರಭುಗಳವರೆಗೆ ಕೃಷಿ ಪೋಷಿಸಲ್ಪಡುತ್ತಿತ್ತು. ಆದ್ದರಿಂದಲೇ ಅಂದಿನ ಜನ ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು ಎಂದು ನಂಬಿದ್ದರು[೧೨೫].

**ಮಣ್ಣಿನ ಲಕ್ಷಣಗಳು**

ವಿಜಯನಗರದ ಅರಸರು ವ್ಯವಸಾಯಕ್ಕೆ ಅದರ ಅಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದಂತೆ[೧೨೬] ಅವರ ಸಾಮಂತ ಅರಸರಾದ ಹರಪನಹಳ್ಳಿ ಪಾಳೆಯಗಾರರು ಸಹ ಇದೇ

ಪರಂಪರೆಯನ್ನು ಮುಂದುವರೆಸಿದರು. ಈ ಪ್ರದೇಶ ವ್ಯಾಪ್ತಿಯಲ್ಲಿನ ವಿಜಯನಗರ ಮತ್ತು ಪಾಳೆಯಗಾರರ ಕಾಲದ ಶಾಸನಗಳು ಮತ್ತು ಸಾಹಿತ್ಯಿಕ ಗ್ರಂಥಗಳಿಂದ ಮತ್ತು ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ಕೃಷಿ ಭೂಮಿಯನ್ನು ಮಣ್ಣಿನ ಗುಣಲಕ್ಷಣಗಳು ಪರಿಸ್ಥಿತಿ ನೀರಾವರಿ ಸೌಲಭ್ಯ, ಮಳೆ, ಬೆಳೆಯ ತೆರಿಗೆ ಇವುಗಳ ಆಧಾರದ ಮೇಲೆ ವರ್ಗೀಕರಿಸಲಾಗುತ್ತಿತ್ತು[೧೨೭]. ಹಾಗೆಯೇ ಕೃಷಿ ಭೂಮಿಯನ್ನು ಉಳುಮೆಗನುಗುಣವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ[೧೨೮]. ಗದ್ದೆ, ಬೆದ್ದಲು, ತೋಟ ಎಂದು ಮಣ್ಣಿನ ಚಹರೆಯ ಮೇಲೆ ಉಳುವ ಭೂಮಿಯನ್ನು ವಿಂಗಡನೆ ಮಾಡಲಾಗುತ್ತಿತ್ತು. ಕೆಂಪು, ಬಿಳಿ, ಕಪ್ಪು, ಭೂಮಿಗಳ ಆಧಾರದ ಮೇಲೆ ಭೂಮಿಯನ್ನು ಉತ್ತಮ ಮಧ್ಯಮ, ಕನಿಷ್ಠ ಎಂದು ವಿಂಗಡಿಸಲಾಗುತ್ತದೆ[೧೨೯]. ಅರಸರು, ಅಧಿಕಾರಿಗಳು, ಗ್ರಾಮಸ್ಥರು ದೇವರಿಗೆ ಇಲ್ಲವೆ ವ್ಯಕ್ತಿಗಳಿಗೆ ದಾನ ನೀಡಿದಾಗ ಎರೆಯ ಹೊಲ, ಕುಳದ ಎರೆಹೊಲ, ವಕ್ಕಳ, ಎರೆಹೊಲ, ವಕ್ಕಳ ಎರೆಯ ಮತ್ತರು, ಖಂಡುಗ ಎರೆಯ ಹೊಲ, ಬೆದ್ದಲು, ಕೆಂಗಾಡು ಎಂದು ಉಲ್ಲೇಖಿಸಲಾಗಿದೆ.

ವಿದೇಶಿ ಪ್ರವಾಸಿಗರಾದ ಫ್ರಾನ್ಸಿಸ್ ಬುಕನಾನ್ ಮತ್ತು ಕ್ಯಾಪ್ಟನ್ ಫ್ರೆಡರಿಕ್ ಚಾಲ್ಮರ್ಸ್‌ರವರು ಮಣ್ಣಿನ ಲಕ್ಷಣಗಳ ಬಗ್ಗೆ ವರದಿ ನೀಡಿದ್ದರು. ಮಣ್ಣಿನ ಬಣ್ಣ ಬಹು ಬೇಗನೆ ಬದಲಾಗದ ಕಾರಣದಿಂದ ಈ ಪ್ರದೇಶ ಮಣ್ಣು ಪಾಳೆಯಗಾರರ ಕಾಲದಲ್ಲೂ ಅದೇ ರೀತಿಯ ಲಕ್ಷಣಗಳನ್ನು ಹೊಂದಿತ್ತು ಎಂದು ತಿಳಿಯಬಹುದಾಗಿದೆ. ಚಾಲ್ಮರ್ಸ್ ವರದಿಯ ಪ್ರಕಾರ ಈ ಪ್ರದೇಶದ ಭೂಮಿಯು ವೈವಿಧ್ಯಮಯವಾಗಿದ್ದು ದಕ್ಷಿಣ ಮತ್ತು ಪಶ್ಚಿಮ ಭಾಗಗಳಲ್ಲಿ ಕಂಡು ಬರುತ್ತದೆ. ಉತ್ತರದ ಮಧ್ಯಭಾಗ ಹಾಗೂ ಈಶಾನ್ಯ ಭಾಗಗಳಲ್ಲಿ ಕಪ್ಪು, ವಾಯುವ್ಯದಲ್ಲಿ ಕಪ್ಪು ಮಿಶ್ರಿತ ಬೂದು ಬಿಳಿ ಮಣ್ಣು ಕಂಡು ಬರುತ್ತದೆ[೧೩೦]. ಹಾಗೆಯೇ ಹರಪನಹಳ್ಳಿ ತಾಲ್ಲೂಕು ಪ್ರದೇಶದಲ್ಲಿ ಮರಳು–ಕೆಂಪು ಮಿಶ್ರಿತ ಜೇಡಿ ಮತ್ತು ಕಪ್ಪು–ಜೇಡಿ ಮಣ್ಣಿನ ಭೂಮಿ ಇದೆ. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಕೃಷಿ ಭೂಮಿಯನ್ನು ಉಳುಮೆಗನುಗುಣವಾಗಿ ಗದ್ದೆ, ಬೆದ್ದಲು, ತೋಟಗಳೆಂದು ವರ್ಗೀಕರಿಸಲಾಗಿತ್ತು[೧೩೧]. ಕ್ರಿ.ಶ.೧೩೩೬ರಲ್ಲಿ ಆತ್ಮರಾಮಸ್ವಾಮಿಗಳಿಗೆ ಮತ್ತು ಆನಂದನಿಧಿಸ್ವಾಮಿಗಳಿಗೆ ಬಾಗಳಿಯ ಕಲಿದೇವರ ಮುಂದೆ ತೋಟ, ಗದ್ದೆ, ಎರೆಯ ಮತ್ತರು, ಮೂರು ಭೂಮಿಯನ್ನು ನೀಡಿದ್ದರ ಬಗ್ಗೆ ಶಾಸನವೊಂದು ಉಲ್ಲೇಖಿಸುತ್ತದೆ[೧೩೨].

ವಿಜಯನಗರದಲ್ಲಿ ವೆಂಕಟಪತಿರಾಯರು ಆಳ್ವಿಕೆ ನಡೆಸುತ್ತಿದ್ದಾಗ ಕಸವನಹಳ್ಳಿ ಮುರವರ್ಗವನ್ನು ಜೀರ್ಣೋದ್ಧಾರ ಮಾಡಿದ ತಿರುಕಪ್ಪನಿಗೆ ಕುಳದ ಎರೆ ಭೂಮಿಯನ್ನು ನೀಡಿದ ಬಗ್ಗೆ ತಿಳಿದು ಬಂದಿದೆ[೧೩೩]. ಕ್ರಿ.ಶ.೧೭೧೨ರಲ್ಲಿ ಬಾಗಳಿ ಬಸಪ್ಪನಾಯಕರ ಸೋಮಶೇಖರನಾಯಕನು ಅಶ್ವಲಾಯನ ಸೂತ್ರದ ಭಾರದ್ವಾಜಗೋತ್ರದ ವಿಠಲಯ್ಯನಿಗೆ ಅಗ್ರಹಾರದ ಮೈದೂರು ಗ್ರಾಮದ ಅರಮನೆಗೆ ನಡೆದು ಬರುವ ದಾರಿಯಲ್ಲಿ ಎರೆಹೊಲ ಬೀಜವರಿ ಹತ್ತು ಗಿದ್ದನಕ್ಕೆ ಪಡಲಿ ನಲವತ್ತುಪಡಿ ಹೊಲವನ್ನು ಸರ್ವಮಾನ್ಯವಾಗಿ ನೀಡಿದನು[೧೩೪]. ಬಾಗಳಿ ಹಿರಿಯಮ್ಮಾಜಿಯು ಜೋಯಿಸರ ಪ್ರಸನ್ನಭಟ್ಟರು

ಪ್ರತಿಷ್ಠಾಪನೆ ಮಾಡಿದ ವಿರೂಪಾಕ್ಷದೇವರ ಅಮೃತಪಡಿಗೆ ಒಂದು ವಕ್ಕಳ ಗದ್ದೆಯನ್ನು ಬಾಗಳಿಯಲ್ಲಿ ನೀಡಿದರು[೧೩೫]. ಈ ಮೇಲಿನ ಅಂಶಗಳಿಂದ ಮಳೆಯ ಆಶ್ರಯದಿಂದ ಭೂಮಿ ಹೊಲ, ಬೆದ್ದಲು, ನೀರಿನ ಅನುಕೂಲವಿರುವ ಭೂಮಿಯಲ್ಲಿ ತೋಟಗಳಿದ್ದವೆಂದು ತಿಳಿಯಬಹುದಾಗಿದೆ. ಹೊಸದಾಗಿ ಉಳುಮೆಗೆ ಕೆಂಗಾಡಿನಂತ ಭೂಮಿಗಳು ಒಳಪಡುತ್ತಿತ್ತು. ಸಾಗುವಳಿಗೆ ಒಳಪಟ್ಟ ಭೂಮಿಯನ್ನು ಕುಳದ ಭೂಮಿ[೧೩೬] ಬೀಜವರಿ ಭೂಮಿ[೧೩೭], ವಕ್ಕುಳ[೧೩೮], ಭೂಮಿಯೆಂದು ಸಾಮಾನ್ಯವಾಗಿ ಕರೆಯುತ್ತಿದ್ದುದಾಗಿ ಶಾಸನಗಳಿಂದ ತಿಳಿಯುತ್ತದೆ.

**ಉಳುಮೆಯ ವಿಧಾನ**

ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಕೃಷಿಯ ವಿಧಾನವೆಂದರೆ ಭೂಮಿಯನ್ನು ಉಳುವುದು. ಆದರೆ ಕಾಲದಿಂದ ಕಾಲಕ್ಕೆ ಉಳುಮೆಯ ವಿಧಾನದಲ್ಲಿ ಅನೇಕ ಬದಲಾವಣೆಗಳಾಗಿರುವುದನ್ನು ಕಾಣಬಹುದಾಗಿದೆ. ಈ ರೀತಿಯ ವ್ಯವಸಾಯ ಕ್ರಮದ ಬಗ್ಗೆ ಸ್ಪಷ್ಟವಾದ ಚಿತ್ರಣವನ್ನು ನೀಡುವಂತಹ ಶಾಸನಗಳು ವಿರಳ. ಆದರೆ ಕೆಲವು ಸಾಹಿತ್ಯಿಕ ಗ್ರಂಥಗಳಲ್ಲಿ ಕೃಷಿಗೆ ಸಂಬಂಧಿಸಿದ ಕೆಲವೊಂದು ಅಂಶಗಳ ಬಗ್ಗೆ ಮಾಹಿತಿ ಲಭ್ಯವಾಗುತ್ತದೆ. ಭೂಮಿಯಲ್ಲಿ ಕೃಷಿ ಮಾಡುವವರನ್ನು ಒಕ್ಕಲಿಗ ಎಂದು ಕರೆಯುವರು[೧೩೯]. ಭೂಮಿಯನ್ನು ಉತ್ತು-ಬಿತ್ತಿ ಹರಗಿ ಬೆಳೆ ತೆಗೆಯುವುದು ರೈತನ ಮುಖ್ಯ ಕರ್ತವ್ಯ[೧೪೦]. ಶ್ರೀಕೃಷ್ಣದೇವರಾಯನು ತನ್ನ ಅಮುಕ್ತ ಮೌಲ್ಯದ ಗ್ರಂಥದಲ್ಲಿ ಪ್ರಸ್ತಾಪಿಸಿರುವಂತೆ ರೈತನು ತನ್ನ ಹೊಲವನ್ನು ಮೊದಲು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ನಂತರ ಫಲವತ್ತಾಗಿ ಮಾಡಲು ಯತ್ನಿಸುತ್ತಾನೆ[೧೪೧] ಎಂದೆಲ್ಲ ಮಾಹಿತಿಗಳಿವೆ. ಹೀಗೆ ಭೂಮಿಯನ್ನು ಕೃಷಿ ಮಾಡಿ ಬೆಳೆ ತೆಗೆಯುವ ರೈತನನ್ನು ಭೂಮಿ ತಾಯಿಯ ಮಕ್ಕಳೆಂದು ಒಕ್ಕಲು ಮಕ್ಕಳೆಂದು ಕರೆಯುವರು[೧೪೨]. ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು ಅಂತಹ ಊರು ಇದ್ದು ಏನು ಫಲ ಎಂದು ದಾಸರು ತಮ್ಮ ಸಾಹಿತ್ಯದಲ್ಲಿ ತಿಳಿಸಿದ್ದಾರೆ. ಸರ್ವಜ್ಞನು 'ಎತ್ತೊಮ್ಮೆ ಹೂಡುವುದು, ಉತ್ತೊಮ್ಮೆ ಹರಗುವುದು, ಬಿತ್ತೊಮ್ಮೆ ಹರಗಿ ಕಳೆದೆಗೆದರಾ ಬೆಳೆಯು ಎತ್ತಗೈ ಯುದ್ಧ ಸರ್ವಜ್ಞ'[೧೪೩] ಎಂದು ತನ್ನ ವಚನದಲ್ಲಿ ತಿಳಿಸಿದ್ದಾನೆ.

ಕುಂಟೆ ಹೊಡೆಯುವುದು, ಹರಗುವುದು ವ್ಯವಸಾಯದ ಪ್ರಮುಖ ಕಾರ್ಯಗಳು. ಕುಂಟೆ ಹೊಡೆಯುವುದು ಹೊಲವನ್ನು ಹರಗುವುದಕ್ಕಾಗಿ ಸಾಧಾರಣವಾಗಿ ಮೊದಲು ರೆಂಟೆ ಹೊಡೆದು [ನೇಗಿಲು] ನಂತರ ಕುಂಟೆ ಹೊಡೆಯುತ್ತಾರೆ. ಕುಂಟೆ ಹೊಡೆಯುವುದರಿಂದ ಮಣ್ಣು ಸಡಿಲಗೊಂಡು ಸಸಿಗಳಿಗೆ ಬೇರು ಬಿಡಲು ಅನುಕೂಲವಾಗುತ್ತದೆ. ಮತ್ತು ಹೆಂಟೆಗಳು ಒಡೆದುಕೊಳ್ಳುತ್ತವೆ. ಉಳಿದಂತಹ ಹೆಂಟೆಗಳನ್ನು ಕೊರಡಿನಿಂದ ಒಡೆಯಲಾಗುತ್ತದೆ. ಹೀಗೆ ಕೊರಡಿನಿಂದ ಒಡೆದಾಗ ಮಣ್ಣು ಸಮವಾಗುತ್ತದೆ. ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮ ಮಾಡಿ ರೆಂಟೆ ಹೊಡೆದು ಬೆಳೆಸುವುದು 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಉಕ್ತಿಯಿದೆ[೧೪೪]. ಹರಪನಹಳ್ಳಿ ಪ್ರದೇಶದಲ್ಲಿಯೂ

ಮರದ ಕುಂಟೆಯಿಂದ ಎದ್ದ ಹೆಂಟೆಗಳನ್ನು ಹರಗಿ ಸಣ್ಣ ಸಣ್ಣ ಹೆಂಟೆಗಳನ್ನಾಗಿ ಮಾಡುತ್ತಿದ್ದರು[೧೪೫]. ಇದು ಇಂದು ನಿನ್ನೆಯ ವಿಧಾನವಲ್ಲ. ಪ್ರಾಚೀನ ಕಾಲದಿಂದಲೂ ಅನುಕರಿಸುವ ಕೃಷಿ, ಉಳುಮೆಯ ವಿಧಾನವಾಗಿದೆ. ಹಾಗಾಗಿ ಬಹುಶಃ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಇದೇ ವಿಧಾನವನ್ನು ಅನುಕರಿಸುತ್ತಿದ್ದರೆಂದು ಹೇಳಬಹುದಾಗಿದೆ. ಅಲ್ಲದೇ ಇದು ಸಾರ್ವಕಾಲಿಕ ಹಾಗೂ ಸಾರ್ವತ್ರಿಕ ವಿಧಾನವೂ ಹೌದು.

ಕನಕದಾಸರು ದಾಸರಲ್ಲೇ ಅತ್ಯಂತ ಶ್ರೇಷ್ಠರು. ಇವರು ತಮ್ಮ ಕೀರ್ತನೆಗಳಲ್ಲಿ ಪಾರಮಾರ್ಥಿಕ ಕೃಷಿಯನ್ನು ಸಹಜ ಕೃಷಿಯ ಹಲವು ಉಪಮೆಗಳ ಮೂಲಕ ಅರ್ಥೈಸಿದ್ದಾರೆ.

ಅವರ ಪ್ರಕಾರ ದೇವರನ್ನು ಸದಾ ನೆನೆಯಬೇಕು. ಆ ಮೂಲಕ ಆನಂದ ಪಡೆಯಬೇಕು. ದೇವರೆಂದರೆ ಅಂತರಂಗದಲ್ಲಿ ಬೆಳೆಯಬೇಕಾದ ಬೆಳೆ. ಅಂದರೆ ದೇವರೆಂಬ ಬೆಳೆಯನ್ನು ಬೆಳೆಯಲು ನಾರಾಯಣ ಎಂಬ ಬೀಜವನ್ನು ಬಿತ್ತಬೇಕು. ಬಿತ್ತಲು ನಾಲಿಗೆಯೇ ಕೂರಿಗೆ, ಹೃದಯವೇ ಹೊಲ, ಶರೀರವೇ ನೇಗಿಲು, ಉಸಿರಿನ ಉಚ್ವಾಸ ನಿಶ್ವಾಸಗಳೇ ಹೂಡಿರುವ ಎತ್ತುಗಳು, ಜ್ಞಾನ ಮತ್ತು ಅರಿವುಗಳು ಅದಕ್ಕೆ ಕಟ್ಟಿರುವ ಹಗ್ಗ, ಕ್ರೋಧ, ಮದ, ಮತ್ಸರಾಧಿಗಳು ಆ ಹೊಲದಲ್ಲಿ ಬೆಳೆಯುವ ಕಳೆಗಳು, ಅವುಗಳನ್ನು ಕೀಳಬೇಕು. ಪಂಚೇಂದ್ರಿಯಗಳ ಸಹಾಯದಿಂದ ಅಟ್ಟಣೆ ಹಾಕಿ ಚಂಚಲತೆಯೆಂಬ ಹಕ್ಕಿ ಹಾರಿಸಬೇಕು. ಬೆಳಿಗ್ಗೆ ಮತ್ತು ಸಂಜೆ ಎಂಬ ಹುಟ್ಟು ಮತ್ತು ಸಾವುಗಳ ಕೊಳಗದಿಂದ ಆಯುಷ್ಯದ ರಾಶಿಯನ್ನು ಅಳೆಯಬೇಕು. ಹೀಗೆ ಪಾರಮಾರ್ಥಿಕ ಚಿಂತನೆ ಅಂತರಂಗದ ಕೃಷಿಯಾಗಿ ಮಾರ್ಪಾಡಾಗುತ್ತದೆ ಎಂದು ಮಾರ್ಮಿಕವಾಗಿ ತಿಳಿಸಿದ್ದಾರೆ. ಈ ಕೀರ್ತನೆಯನ್ನು ಕೃಷಿ ಉಪಕರಣಗಳಲ್ಲಿ ನೇಗಿಲ ಜೊತೆಗೆ ಕೂರಿಗೆ, ಮಿಣೆ, ಕಣ್ಣಿ, ಹಗ್ಗಗಳ ಉಲ್ಲೇಖಗಳಿರುವುದನ್ನು ಗಮನಿಸಬಹುದಾಗಿದೆ[೧೪೬]. ಇದೇ ರೀತಿ ಸರ್ವಜ್ಞರು ಸಹ ತಮ್ಮ ವಚನಗಳಲ್ಲಿ ಕೃಷಿಯ ಬಗ್ಗೆ ಈ ರೀತಿ ವ್ಯಕ್ತಪಡಿಸಿದ್ದಾರೆ. 'ಉತ್ತೊಮ್ಮೆ ಹರಗದಲೆ, ಬಿತ್ತೊಮ್ಮೆ ನೋಡದಲೆ, ಹೊತ್ತೇರಿ ಹೊಲಕೆ ಹೋದರೆ ಅವನತ್ತ ನೆತ್ತರವ ಸುಡುವ ಸರ್ವಜ್ಞ'[೧೪೭]. ಅಂದರೆ ರೈತನು ಸೂರ್ಯ ಮೂಡುವ ಹೊತ್ತಿಗೆ ಪೂರ್ವ ದಿಕ್ಕಿಗೆ ನಿಂತು ಸೂರ್ಯನಿಗೆ ಕೈಮುಗಿದು ಉಳುಮೆ ಆರಂಭಿಸಿ ಬಿಡಬೇಕು ಎಂದು ತಿಳಿಸುತ್ತಾ ಸೋಮಾರಿಗಳ ವ್ಯವಸಾಯವನ್ನು ಟೀಕೆ ಮಾಡಿದ್ದಾರೆ.

ವಚನ ಹಾಗೂ ದಾಸ ಸಾಹಿತ್ಯದಂತೆ ಪುರಾಣ ಕಾವ್ಯಗಳಲ್ಲಿ ಕೃಷಿಯ, ಉಳುಮೆಯ ಬಗ್ಗೆ ವರ್ಣನೆಯಿದೆ. ಮಹಾಕಾವ್ಯಗಳಲ್ಲಿ ಒಂದಾದ ರಾಮಾಯಣದಲ್ಲಿ ತಿಳಿದು ಬರುವಂತೆ ಸೀತೆಯು ಹುಟ್ಟಿದ್ದೇ ನೇಗಿಲು ಸಾಲಿನಲ್ಲಿ[೧೪೮], ಈ ನೇಗಿಲನ್ನು ಮರದಿಂದ ತಯಾರಿಸಲಾಗಿದ್ದು[೧೪೯], ಪಶುಗಳ ಸಹಾಯದಿಂದ ಹೊಲವನ್ನು ಉಳುಮೆ ಮಾಡಲಾಗುತ್ತೆ[೧೫೦], ನೇಗಿಲನ್ನು ಬಿತ್ತನೆ ಮಾಡುವುದಕ್ಕೂ ಮೊದಲು ಪೂಜಿಸುತ್ತಾರೆ[೧೫೧]. ಜ್ಯೋತಿಷ್ಯ-ಖಗೋಳ ನಕ್ಷತ್ರಗಳ ಆಧಾರದ ಮೇಲೆ ಬೀಜವನ್ನು

ಬಿತ್ತುತ್ತಾರೆ[೧೫೨]. ಖುಷ್ಕಿ ಜಮೀನುಗಳಲ್ಲಿ ಕೈ ಬಿತ್ತನೆ ಮಾಡುತ್ತಾರೆ[೧೫೩]. ಹೀಗೆ ರೈತರು ಒಂದು ನಿಯೋಜಿತ ಕ್ರಮದಲ್ಲಿ ಉಳುಮೆ ಮಾಡಿ ಬೆಳೆಯನ್ನು ಬೆಳೆಯುತ್ತಿದ್ದರೆಂದು ಅನೇಕ ಸಾಹಿತ್ಯಿಕ ಗ್ರಂಥಗಳಿಂದ ತಿಳಿದು ಬರುತ್ತದೆ.

ಸಾಮಾನ್ಯವಾಗಿ ಆರಿದ್ರ, ಮಾಘ, ಹುಬ್ಬೆ, ಉತ್ತರೆ ಮುಂತಾದ ನಕ್ಷತ್ರಗಳ ಸಮಯದಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದರು[೧೫೪]. ಹಾಗೂ ಒಂದೇ ರೀತಿಯ ಬೆಳೆಗಳನ್ನು ಎಲ್ಲಾ ಭಾಗಗಳಲ್ಲಿಯೂ ಬೆಳೆಯುತ್ತಿದ್ದರು[೧೫೫]. ಕೆಲವೊಮ್ಮೆ ಜೇಷ್ಠ, ಆಷಾಢ, ಶ್ರಾವಣ, ಭಾದ್ರಪದ ಮಾಸಗಳು ಬಂದರೂ ಮಳೆ ಬಾರದಿದ್ದಾಗ ಜನರು ದೇವರನ್ನು ಪ್ರಾರ್ಥಿಸಿ ಅನೇಕ ಪೂಜೆಗಳನ್ನು ಮಾಡುತ್ತಾರೆ[೧೫೬]. ಹಾಗೆಯೇ ಬೆಳೆಗಳಿಗೆ ನೀರು ಮತ್ತು ಗೊಬ್ಬರವನ್ನು ಹಾಕಿ ಬೆಳೆಸುತ್ತಿದ್ದರು[೧೫೭]. ಅಲ್ಲದೆ ರೈತರಿಗೆ ಬೆಳೆಗಳ ಋತು ಆಧಾರಿತ ವಿಭಜನೆಯ ಬಗ್ಗೆ ಉತ್ತಮ ತಿಳುವಳಿಕೆ ಇತ್ತು. ಪ್ರಮುಖವಾಗಿ ಕೆಲವು ಶಾಸನಗಳು ಕಾರ್ತಿಕ ಮತ್ತು ವೈಶಾಖ ಮಾಸದ ಬೆಳೆಗಳನ್ನು ಉಲ್ಲೇಖಿಸುತ್ತವೆ. ಕಾರ್ತಿಕ ಮಾಸದ ಬೆಳೆಗಳು ನವೆಂಬರ್ – ಜನವರಿಯ ಮಾಸದವುಗಳಾದರೆ ವೈಶಾಖ ಬೆಳೆಗಳು ಏಪ್ರಿಲ್ – ಮೇ ತಿಂಗಳದವುಗಳಾಗಿವೆ. ರೈತರಿಗೆ ವರ್ಷಕ್ಕೆ ಎರಡು ಬೆಳೆಯನ್ನು ತೆಗೆಯುವುದು ಮತ್ತು ಬೆಳೆಯ ಆವರ್ತನದ ಬಗ್ಗೆಯೂ ತಿಳಿದಿತ್ತು[೧೫೮]. ಈ ರೀತಿಯ ವ್ಯವಸ್ಥೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಇತ್ತೆಂದು ತಿಳಿಯಬಹುದಾಗಿದೆ. ಈ ಪ್ರದೇಶದಲ್ಲಿನ ರೈತರು ಬೇಸಿಗೆಯಲ್ಲಿ ನೇಗಿಲು ಹೊಡೆದು ಮಳೆಗಾಲ ಬರುವವರೆಗೂ ನೆಲವನ್ನು ಮಾಗಿ ಮಾಡಿ ಮುಂಗಾರು ಮಳೆಗೆ ಮುನ್ನ ಕೊಟ್ಟಿಗೆ ಗೊಬ್ಬರವನ್ನು ಹಾಕುತ್ತಿದ್ದರು. ಜೊತೆಗೆ ಕುರಿಗಳನ್ನು ರಾತ್ರಿ ಹಗಲು ಹೊಲದಲ್ಲಿ ತರುಬಿ ಅವುಗಳ ಹಿಕ್ಕಿ ಮತ್ತು ಮೂತ್ರವನ್ನು ಭೂಮಿಗೆ ಸೇರಿಸಿ ಫಲವತ್ತತೆಗೊಳಿಸುತ್ತಿದ್ದರು. ಹಾಗೆಯೇ ಮಳೆ ಬಿದ್ದ ಕೂಡಲೆ ಕುಂಟೆ–ರೆಂಟೆಗಳಿಂದ ಹೆಂಡೆಗಳನ್ನು ಹೊಡೆದು ಹೊಲವನ್ನು ಸಾಫ್ ಮಾಡುತ್ತಿದ್ದರು. ಅಲ್ಲದೇ ಈ ಪ್ರದೇಶ ರೈತರಿಗೂ ಆವರ್ತನ ಬೆಳೆಯ ಬಗ್ಗೆ ತಿಳಿದಿತ್ತು. ಹಿಂಗಾರು ಮತ್ತು ಮುಂಗಾರು ಬೆಳೆಗಳನ್ನು ಬೆಳೆಯುತ್ತಿದ್ದರು[೧೫೯].

ಬಿತ್ತನೆಯಾದ ಮೇಲೆ ಪೈರನ್ನು ಕಾಯಲು ಹೊಲಗಾಹಿ ಇರುತ್ತಿದ್ದನು. ಹಕ್ಕಿಗಳ ಬಾಧೆಯನ್ನು ತಡೆಯಲು ಕವಣಿ–ಕಲ್ಲುಗಳನ್ನು ಬಳಸುತ್ತಿದ್ದರು[೧೬೦]. ಒಕ್ಕಲು ಕೆಲಸಕ್ಕೆ ಕಣವನ್ನು ಸಿದ್ಧ ಮಾಡಿಕೊಂಡು ಎತ್ತುಗಳು ಅಥವಾ ದನಗಳ ಸಹಾಯದಿಂದ ಹುಲ್ಲನ್ನು, ತೆನೆಯನ್ನು ತುಳಸಿ, ಧಾನ್ಯ[೧೬೧]ವನ್ನು ಬೇರ್ಪಡಿಸಿ ಹುಲ್ಲಿನ ರಾಶಿಯನ್ನು ಕಣದಲ್ಲಿ ಒಡ್ಡು ಹಾಕುತ್ತಾರೆ[೧೬೨]. ನಂತರ ಧಾನ್ಯಗಳನ್ನು ಕಣಜ[೧೬೩] ಎಂದು ಕರೆಯಲಾಗುತ್ತಿದ್ದ ಮಣ್ಣಿನ ಗುಡಾಣಗಳಲ್ಲಿ ತುಂಬಿ ಬಿಡುತ್ತಿದ್ದರು. ಬಹುಶಃ ಇದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿತ್ತು[೧೬೪]. ಹಾಗಾಗಿ ಹರಪನಹಳ್ಳಿ ಪಾಳೆಯಗಾರರ ಆಳ್ವಿಕೆಯ ಅವಧಿಯಲ್ಲೂ ರೈತರು ಈ ರೀತಿ ಕಣಜಗಳಲ್ಲಿ ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರು ಅನೇಕ ಗ್ರಾಮದ ಮನೆಗಳಲ್ಲಿ ಹಗೇವು ಮತ್ತು ವಾಡೇವುಗಳು ಕಂಡು ಬರುತ್ತವೆ. ಕಣಜಗಳಲ್ಲಿ ತುಂಬಿ ಹೆಚ್ಚಾದ ಧಾನ್ಯಗಳನ್ನು ಬಂಡಿ, ಪ್ರಾಣಿ,

ಮೂಟೆ, ಹೆಡಿಗೆ ಮತ್ತು ಜಲ್ಲೆಗಳ ಮೇಲೆ ಹೊತ್ತುಕೊಂಡು ವ್ಯಾಪಾರಕ್ಕಾಗಿ ಸಂತೆಗೆ ಒಯ್ಯಲಾಗುತ್ತಿತ್ತು[೧೬೬]. ಹೀಗೆ ಪ್ರಾಚೀನ ಕಾಲದಿಂದಲೂ ರೈತರು ಉಳುಮೆ ಫಸಲಿನ ರಕ್ಷಣೆ, ವಿಲೇವಾರಿ, ಧಾನ್ಯ ಸಂಗ್ರಹಣೆ ಮುಂತಾದವುಗಳನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದರು.

**ಕೃಷಿ ಸಲಕರಣೆಗಳು**

ಕಾಲದಿಂದ ಕಾಲಕ್ಕೆ ಬದಲಾವಣೆಯಾದ ಕೃಷಿಯ ಬೆಳವಣಿಗೆಯ ಜೊತೆಗೆ ಅದರ ಸಲಕರಣೆಗಳೂ ಕೂಡ ಬದಲಾವಣೆ ಬೆಳವಣಿಗೆಯಾಗಿ ಮಣ್ಣಿನ ಫಲವತ್ತತೆಯಲ್ಲಿ ಬಹುಮುಖ್ಯ ಪಾತ್ರವಹಿಸಿದವು. ಇದರಿಂದ ಭೂಮಿಯು ಫಲವತ್ತತೆಯ ಜೊತೆಗೆ ಇಳುವರಿಯೂ ಹೆಚ್ಚಾಗಲು ಸಹಾಯಕವಾಯಿತು. ಕಬ್ಬಿಣದ ಅವಿಷ್ಕಾರವು ಕೃಷಿಯ ಸಲಕರಣೆಗಳ ವಿಷಯದಲ್ಲಿ ಮಹತ್ತರ ಪರಿಣಾಮವನ್ನುಂಟು ಮಾಡಿತು. ಗ್ರಾಮೀಣ ಜನರ ಬದುಕನ್ನು ಇಡಿಯಾಗಿ ಆವರಿಸಿಕೊಂಡಿರುವ ಕೃಷಿ ಅವರ ಜೀವನದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ. ಹಾಗಾಗಿ ರೈತರು ತಮ್ಮ ಕೃಷಿಯ ಬೆಳವಣಿಗೆಗೆ ಬೇಕಾದ ಸಲಕರಣೆಗಳಲ್ಲಿ ಆಸಕ್ತಿವಹಿಸಿದ್ದರು. ಈ ಸಂದರ್ಭದಲ್ಲಿ ಕೃಷಿ ಸಲಕರಣೆಗಳ ತಯಾರಿಕೆಯಲ್ಲಿ ಪರಿಣಿತ ತಾಂತ್ರಿಕರಾದ ಬಡಗಿ[೧೬೭], ಚಮ್ಮಾರ[೧೬೮] ಮುಂತಾದ ಕುಶಲ ಕರ್ಮಿಗಳ ನೆರವಿನಿಂದ ತಮಗೆ ಬೇಕಾದ ಸಲಕರಣೆಗಳನ್ನು ಪಡೆದುಕೊಂಡರು. ಇದೇ ಪದ್ಧತಿಯನ್ನು ವಿಜಯನಗರೋತ್ತರ ಕಾಲದ ಹರಪನಹಳ್ಳಿ ಅರಸರ ಕಾಲದ ಜನರು ಸಹ ತಮ್ಮ ಜೀವನದ ಆಧಾರವನ್ನಾಗಿ ನಂಬಿದ್ದ ಕೃಷಿಯನ್ನು ನಿರ್ವಹಿಸಲು ಅವುಗಳ ಬಳಕೆ ಇಂದಿಗೂ ಒಕ್ಕಲಿಗರಲ್ಲಿದೆ.

ವ್ಯವಸಾಯವನ್ನು ಮೂಲ ವೃತ್ತಿಯನ್ನಾಗಿ ಮಾಡಿಕೊಂಡ ಒಕ್ಕಲಿಗರ ಕುರಿತು ಕೆಲವು ಶಾಸನಗಳು ಕುಡುವಕ್ಕಲಿಗ ಮಕ್ಕಳು, ಗೌಡೊಕ್ಕಲು, ತೋಟಿಗರು, ಸಮಸ್ತತೋಟಿಗರು ಎಂದು ಉಲ್ಲೇಖಿಸಿವೆ. ನೀಲಗುಂದ ಶಾಸನವು 'ಸಮಸ್ತ ತೋಟಿಗರಂ, ಕೊನೆಕಾರ ವುಳಿಯಮುನ್ನೂರ್ಬ್ಬರು' ಎನ್ನುವುದರಿಂದ ಇದು ವ್ಯವಸಾಯ ವರ್ಗವನ್ನು ಉಲ್ಲೇಖಿಸುತ್ತದೆ[೧೬೯]. ಕೋಗಳಿ ಶಾಸನವೊಂದು 'ವೊಕ್ಕಲಿಂಗ ಬೆಳೆ ಇಂತು ಕೆರೆ ಗದ್ದೆ ತೋಟ ಆದಾಯಯಿನ್ತಿನಿತು' ಎಂದು ಉಲ್ಲೇಖಿಸಿದೆ[೧೭೦]. ಇತರ ಸಂಘಗಳಂತೆ ಇವರೂ ಸಹ ಸಂಘವನ್ನು ಕಟ್ಟಿಕೊಂಡ 'ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿಂದ ಮಾರ್ಗಗಳ ದೊರೆ ನಮ್ಮೊಳೆಂಬಂತೆ' ವರ್ತಿಸುತ್ತಿದ್ದರಂತೆ[೧೭೧]. ಹಾಗಾಗಿ ಒಕ್ಕಲಿಗರು ಪ್ರಾಚೀನ ಕಾಲದ ಎಲ್ಲಾ ರಾಜಮನೆತನಗಳ ಅವಧಿಯಲ್ಲಿ ಪ್ರಭಾವ ಬೀರಿದ್ದರೆಂದು ತಿಳಿಯಬಹುದಾಗಿದೆ. ಹಾಗೆಯೇ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಈ ವರ್ಗ ಪ್ರಚಲಿತದಲ್ಲಿತ್ತೆಂದು ಹೇಳಬಹುದಾಗಿದೆ. ಇವರು ಬಳಸುತ್ತಿದ್ದಂತಹ ಸಲಕರಣೆಗಳ ಬಗ್ಗೆ ಶಾಸನಗಳು ಸಾಹಿತ್ಯಿಕ ಗ್ರಂಥಗಳು ವಿದೇಶಿ ಬರಹಗಳು, ಗಾದೆ ಮಾತುಗಳು ತಿಳಿಸಿಕೊಡುತ್ತವೆ.

ಸಾಮಾನ್ಯವಾಗಿ ಎತ್ತು, ನೇಗಿಲು, ನೊಗ, ಕುಂಟೆ, ಕೊರಡು, ಕೂರಿಗೆ, ಸಡ್ಡೆ, ಹಲುಬೆ, ರೋಣಗಲ್ಲು, ಕೈಹಲುಬೆ, ನೆರೆಕೋಲು, ಗೋರು, ಪುಟ್ಟಿ, ಮೊರ, ಬರಲು ಮುಂತಾದ ಕೃಷಿ ಸಲಕರಣೆಗಳು ರೈತರಿಗೆ ಬೇಕೇ ಬೇಕು. ಇವುಗಳನ್ನು ಹತಾರುಗಳು, ಮುಟ್ಟುಗಳು ಹಾಗೂ ಗಳೇವುಗಳೆಂದು ಕರೆಯಲಾಗುತ್ತದೆ[೧೭೨]. ಇವುಗಳಲ್ಲಿ ನೇಗಿಲಿಗೆ[೧೭೩] ಪ್ರಥಮ ಸ್ಥಾನ. ಕುಂಟೆಗೆ[೧೭೪] ಎರಡನೆಯ ಸ್ಥಾನ, ಕೂರಿಗೆ[೧೭೫], ನೊಗ[೧೭೬], ಬಂಡಿ[೧೭೭], ಬಾರಿಕೋಲು[೧೭೮], ಕವಣೆ[೧೭೯], ಕುಡುಗೋಲು[೧೮೦], ಮಿಣೆ[೧೮೧], ಗಾಣ[೧೮೨], ಕೊಳಗ[೧೮೩], ಸೇರು[೧೮೪], ಹಗ್ಗ[೧೮೫] ಮುಂತಾದವು ನಂತರದ ಸ್ಥಾನದಲ್ಲಿವೆ. ಈ ಎಲ್ಲಾ ಸಲಕರಣೆಗಳು ಎಲ್ಲಾ ಕಾಲದಲ್ಲೂ ಇವುಗಳನ್ನೆ ಮುಂದುವರೆಸಲಾಯಿತೆಂದು ತಿಳಿಯಬಹುದಾಗಿದೆ. ಇವುಗಳ ಜೊತೆಗೆ ಹಾರೆ, ಗುದ್ದಲಿ, ಸಳ, ಕತ್ತರಿ, ಕೊಡಲಿ, ಬಾಚಿ, ಮೊಳೆ, ಸುತ್ತಿಗೆ ಮುಂತಾದವುಗಳನ್ನು ಬಳಸುತ್ತಿದ್ದರು. ಒಟ್ಟಾರೆ ಕೃಷಿಗೆ ಒಂದು ಸಲಕರಣೆಯಿಲ್ಲದಿದ್ದರೂ ನಡೆಯುವುದಿಲ್ಲ ಎಂಬ ಸನ್ನಿವೇಶವಿದೆ.

**ಕೃಷಿ ಭೂಮಿಯ ವಿಭಜನೆ**

ಪ್ರಾಚೀನ ಕಾಲದಿಂದಲೂ ರೈತರು ವಿವಿಧ ರೀತಿಯ ಜಮೀನಿನಲ್ಲಿ ಕೃಷಿಯನ್ನು ಮಾಡುತ್ತಾ ಬಂದಿದ್ದಾರೆ. ಹಾಗೆಯೇ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ರೈತರು ವಿವಿಧ ಬಗೆಯ ಭೂಮಿಯಲ್ಲಿ ವ್ಯವಸಾಯವನ್ನು ಮಾಡಿದ್ದರೆಂದು ಕೆಲವು ಶಾಸನಗಳು ಮತ್ತು ಸಾಹಿತ್ಯಿಕ ಗ್ರಂಥಗಳಿಂದ ತಿಳಿದು ಬರುತ್ತದೆ. ಮಣ್ಣು, ನೀರು ಸ್ವಾಭಾವಿಕ ಸಸ್ಯ ವರ್ಗಗಳನ್ನು ಸದುಪಯೋಗಪಡಿಸಿಕೊಳ್ಳುವ ಜಾಣ್ಮೆ ಹಿಂದಿನ ತಲೆಮಾರಿನವರಿಗೆ ಕರಗತವಾಗಿತ್ತು. ಹಾಗಾಗಿ ಇತರೆ ಪ್ರಾಂತೀಯ ಬೇಸಾಯ ಪದ್ಧತಿಗಳನ್ನೇ ಈ ಪ್ರದೇಶದ ಜನರು ರೂಢಿಸಿಕೊಂಡಿದ್ದರು. ಶಾಸನಗಳ ಹಾಗೂ ಸಾಹಿತ್ಯಿಕ ಆಧಾರಗಳಿಂದ ಆಗ ಚಾಲ್ತಿಯಲ್ಲಿದ್ದ ಕೃಷಿ ಭೂಮಿಯನ್ನು ಸಾಗುವಳಿಯಲ್ಲದ ಬೀಳು ಭೂಮಿ ಮತ್ತು ಸಾಗುವಳಿ ಭೂಮಿ ಎಂದು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ.

ಸಾಗುವಳಿಯಲ್ಲದ ಬೀಳು, ಬಂಜರು ಭೂಮಿಯನ್ನು ಕುರಿತಂತೆ ಸ್ಪಷ್ಟವಾದ ಚಿತ್ರಣವನ್ನು ನೀಡುವ ಶಾಸನಗಳು ವಿರಳವಾದರೂ ಸಾಹಿತ್ಯಿಕ ಗ್ರಂಥಗಳಲ್ಲಿ ಅಲ್ಪಸ್ವಲ್ಪ ಮಾಹಿತಿ ದೊರೆಯುತ್ತದೆ. ಸಾಗುವಳಿಯಲ್ಲದ ಬೀಳು ಭೂಮಿ ಎಂದರೆ ಮುಖ್ಯವಾಗಿ ಅರಣ್ಯಪ್ರದೇಶ, ಬಂಜರು ಭೂಮಿ, ಗುಡ್ಡ ಬೆಟ್ಟಗಳನ್ನೊಳಗೊಂಡಿರುತ್ತದೆ[೧೮೬]. ದಾನ ಪ್ರಸಂಗದಲ್ಲಿ ಬಂಜರು ಭೂಮಿಯನ್ನು 'ಕೆಯ್' ಎಂಬ ಸಾಧನವನ್ನು ಇಟ್ಟುಕೊಂಡು ದಾನವನ್ನು ನೀಡುತ್ತಿದ್ದರೆಂದು ಮುಂದೆ ವ್ಯವಸಾಯ ಯೋಗ್ಯವಾದ ಭೂಮಿಯನ್ನು 'ಕೆಯ್' ಅಥವಾ 'ಕೆಯಿ' ಎಂದು ಕರೆಯಲಾಯಿತು. ಹರಪನಹಳ್ಳಿಯ ಶಾಸನವೊಂದರಲ್ಲಿ 'ಮತ್ತರು ಕೆಯ್' ಎಂಬ ಉಲ್ಲೇಖವಿದೆ[೧೮೭]. ಅಲ್ಲದೇ ಅನೇಕ ಪ್ರಾಚೀನ ಶಾಸನಗಳು ಭೂಮಿಯನ್ನು ಸಾಮಾನ್ಯವಾಗಿ 'ಕೆಯಿ' ಎಂದು ಕರೆದಿವೆ[೧೮೮]. ಆದರೂ ಈ ಭೂಮಿಯನ್ನು ಕಾಲಾನುಕ್ರಮದಲ್ಲಿ ಸಾಗುವಳಿ ಮಾಡಲಾಯಿತು. ರಾಜ್ಯದ ಆರ್ಥಿಕತೆಯಲ್ಲಿ ಕೃಷಿ

ಪ್ರಧಾನವಾಗಿದ್ದರ ಎಲ್ಲಾ ರಾಜಮನೆತನಗಳು ಕೃಷಿ ಮತ್ತು ನೀರಾವರಿಗೆ ಹೆಚ್ಚು ಪ್ರೋತ್ಸಾಹ ಹಾಗೂ ಗಮನ ನೀಡಿದ್ದರು. ಹರಪನಹಳ್ಳಿ ಪಾಳೆಯಗಾರರೂ ಇದಕ್ಕೆ ಹೊರತಾಗಿರಲಿಲ್ಲ. ಭೂಮಿಯನ್ನು ದಾನ ನೀಡುವಾಗ ಶಾಸನಗಳಲ್ಲಿ 'ಕಾಡಾರಂಬ' (ಒಣಬೇಸಾಯ)[೧೮೯] ಅಂದರೆ ಮಳೆಯನ್ನೆ ಅವಲಂಬಿಸಿ ಮಾಡಬೇಕಾದ ವ್ಯವಸಾಯ ಪದ್ಧತಿಯನ್ನು ಕಾಡಾರಂಬ, ಹೊಲಗಾಡು ಅಥವಾ ಮಳೆಗಾಡು ಎಂದು ಜಮೀನನ್ನು ಹೊಲ ಮತ್ತು ಬೆದ್ದಲು ಎಂದು ಕರೆಯುತ್ತಿದ್ದರು. ನೀರಾರಂಬ (ಗದ್ದೆ ಬೇಸಾಯ), ದೇವಮಾತೃಕ, ನದಿಮಾತೃಕ, ಗದ್ದೆ, ಹೊಲ, ಬೆದ್ದಲು, ತೋಟ ಎಂಬ ಉಲ್ಲೇಖಗಳು ಕಂಡು ಬರುತ್ತವೆ. ಇದರಿಂದ ಕೃಷಿ ಯೋಗ್ಯವಾದ ಸಾಗುವಳಿ ಭೂಮಿಯನ್ನು ಮಳೆ ಆಧಾರಿತ ಕೃಷಿ ಭೂಮಿ ಮತ್ತು ನೀರಾವರಿ ಆಧಾರಿತ ಕೃಷಿ ಭೂಮಿ ಎಂದು ವಿಂಗಡಿಸಲಾಗಿದೆ.

ಹರಪನಹಳ್ಳಿ ಪಾಳೆಯಗಾರರು ಒಣ ಬೇಸಾಯ ಮತ್ತು ನೀರಾವರಿಗೆ ಸಮಾನ ಆದ್ಯತೆ ನೀಡಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಇವರ ಕಾಲದಲ್ಲಿ ಕೃಷಿ ಭೂಮಿಯನ್ನು ಗದ್ದೆ, ಬೆದ್ದಲು, ತೋಟಗಳೆಂದು ಕರೆಯುತ್ತಿದ್ದರು. ಈ ಬಗ್ಗೆ ದಾನ ನೀಡಿದ ಶಾಸನಗಳಲ್ಲಿ ಇವುಗಳ ಉಲ್ಲೇಖವನ್ನು ಕಾಣಬಹುದು. ಇದನ್ನು ಕುರಿತಂತೆ ಈ ಹಿಂದೆ ಆಗಲೇ ತಿಳಿಸಲಾಗಿದೆ. ಹರಪನಹಳ್ಳಿ ಪಾಳೆಯಗಾರರ ಬಾಗಳಿ ಬಸಪ್ಪನಾಯಕ ಕೋಗಳಿ ಪಂಟಕೆ ಸಲ್ಲುವ ಕೊಟ್ಟೂರು ಸೀಮೆಯ ಡಣಾಯಕನಕೆರೆ ಪಟ್ಟಡಿ, ಮಗಿಮಾವಿನಹಳ್ಳಿಯಕೆರೆ, ಮಾಗಣಿಯಲ್ಲಿ ಗದ್ದೆ ಬೀಜುವರಿ ಒಂದು ವಕ್ಕಳವನ್ನು ಸರ್ವಮಾನ್ಯವಾಗಿ ನೀಡಿದ ಭೂದಾನ ಪತ್ರವಿದೆ[೧೯೦]. ಹೀಗೆ ಭೂಮಿಯನ್ನು ದೇವಾಲಯ ಮತ್ತು ವ್ಯಕ್ತಿಗಳಿಗೆ ದಾನ ನೀಡುವಾಗ ಒಂದು ಗ್ರಾಮದ ಎಲ್ಲಾ ದಿಕ್ಕುಗಳು ಮತ್ತು ಹೊಲಗಳನ್ನು ಸ್ಪಷ್ಟವಾಗಿ ತಿಳಿಸುವ ಲಿಂಗಮುದ್ರೆ ಕಲ್ಲುಗಳನ್ನು ನೆಟ್ಟು ಗುರುತಿಸುವ ಕ್ರಮ ಚಾಲ್ತಿಯಲ್ಲಿತ್ತು. ಕಾಲದಲ್ಲಿನ ಅನೇಕ ಲಿಂಗ ಮುದ್ರೆ ಕಲ್ಲುಗಳು ದೊರೆತಿವೆ. ನಿಬಗೂರು ಗ್ರಾಮದ ಚರ್ತುಸೀಮೆಯ ಗಡಿಗಳಿಗೆ ನೆಟ್ಟ ಕಲ್ಲುಗಳ ವಿವರಣೆಯಲ್ಲಿ ಯಾವ ದಿಕ್ಕಿನಲ್ಲಿ ಯಾವ ಗ್ರಾಮವಿದೆ ಅಲ್ಲದೆ ಯಾವ ಭೂಮಿಯನ್ನು ಹೊಂದಿದೆ ಎಂಬುದನ್ನು ತಿಳಿಸುತ್ತದೆ. ಮೂಡಲು ಕಟ್ಟಿಗೆಹಳ್ಳಿಯ ಹೋದ ಮೇರೆ ತೆಂಕಲು ಬಿದರಕೆರೆಯ ಹೊಲದಗಡಿ ಪಡವಲು ಅದೇ ಬಿದರಿಕೆರೆಯ ಹೊಲದ ಮೇರೆ ಮೂಡಲು ವಾಯುವ್ಯಕ್ಕೆ ಮಾಕುಂಟಿಯ ಹೊಲದ ಮೇರೆ, ಆಗ್ನೇಯ ಬಡಗಲು ಈಶಾನ್ಯ ಕೋಡಿಹಳ್ಳಿಯ ಹೊಲದ ಮೇರೆ ಎಂದೆಲ್ಲಾ ವಿವರಣೆ ಶಾಸನವೊಂದರಲ್ಲಿದೆ[೧೯೧].

ಈ ಪ್ರದೇಶದಲ್ಲಿನ ಮಳೆ ಆಧಾರಿತ ಸಾಗುವಳಿ ಭೂಮಿಯು ಬೀಜುವರಿ ಪದ್ಧತಿಯ ವಿಧಾನದಲ್ಲಿ ಬೆದ್ದಲು ಹೊಲಗಳ ಉಲ್ಲೇಖಗಳು ಕಂಡು ಬರುತ್ತವೆ. ಉದಾಹರಣೆಗೆ ಶಾಸನಗಳಲ್ಲಿ ಒಂದು ಖಂಡುಗ ಭೂಮಿ ಎಂಬಂತಹ ಉಲ್ಲೇಖಗಳಿವೆ. ಖಂಡುಗ ಭೂಮಿ ಎಂದರೆ ಆ ಪ್ರಮಾಣದ ಬೀಜವನ್ನು ಬಿತ್ತುವ ಭೂಮಿ ಅಥವಾ ಅಷ್ಟು ಪ್ರಮಾಣದ ಧಾನ್ಯವನ್ನು ಬೆಳೆಯುವ ಭೂಮಿಯಾಗಿರಬಹುದು ಎಂದರ್ಥ. ಹರಿದ್ರಾನದಿಗೆ ಕಟ್ಟೆ ಕಟ್ಟಿದ ಬುಳ್ಳಪ್ಪನಿಗೆ ಅಗ್ರಹಾರದ ಜನರು ಆ

ಜಲಾಶಯದ ವಾರ್ಷಿಕ ನಿರ್ವಹಣೆಯ ಜವಾಬ್ದಾರಿವಹಿಸಿ ತಮ್ಮ ಪಾಲಿನ ಒಂದು ಖಂಡುಗ ಭೂಮಿಯನ್ನು ದಾನವಾಗಿ ನೀಡಿದರೆಂದು ತಿಳಿದು ಬರುತ್ತದೆ[೧೯೨]. ಇದರ ಜೊತೆಗೆ 'ವಕ್ಕಳ', 'ನಾಗುಳ', 'ಕುಳ', 'ಕಂಬ', 'ಮತ್ತರು', 'ಮಾರು', 'ಅಕ್ಕಡಿ' ಪದಗಳೂ ಬಳಕೆಯಾಗಿವೆ. ಈ ಬಗ್ಗೆ ಹರಪನಹಳ್ಳಿಯ ಪಾಳೆಯಗಾರರ ಶಾಸನಗಳಲ್ಲೂ ಉಲ್ಲೇಖಗಳಿವೆ. ರಾಣಿಹರಿಯಮ್ಮಾಜಿ ಕ್ರಿ.ಶ.೧೭೧೦ರಲ್ಲಿ ಕೊರೆಗಲ್ಲು ಕಾಲುವೆಯ ಕಟ್ಟೆಯನ್ನು ಕಟ್ಟಿಸಿ ಅದರ ಮಹೋತ್ಸವದ ಕಾಲದಲ್ಲಿ ತಮ್ಮ ಪುರೋಹಿತರೂ, ಜೋಯಿಸರೂ ಆದ ದೇವೋತ್ತಮಭಟ್ಟರು, ಹನುಮಂತಭಟ್ಟರು, ಪದ್ಮನಾಭಭಟ್ಟರು ಹಾಗೂ ನಾಗಭಟ್ಟರಿಗೆ ಆನ್ವೇರಿಯಲ್ಲಿ 'ವಕ್ಕ' ಗದ್ದೆಯನ್ನು ದಾನವನ್ನಾಗಿ ನೀಡಿ ಶಾಸನ ಹಾಕಿಸಿದ್ದಾರೆ[೧೯೩]. ಕ್ರಿ.ಶ.೧೬೬೦ರಲ್ಲಿ ಕಸವನಹಳ್ಳಿ ಪುರವರ್ಗವನ್ನು ಜೀರ್ಣೋದ್ಧಾರ ಮಾಡಿದ ಗಿರಿಯಲ್ಲಿಪ್ಪನ ಮೊಮ್ಮಗ ತಿರುಕಪ್ಪನಿಗೆ ಕುಳದ ಎರೆಭೂಮಿಯನ್ನು ನೀಡಿದ ಬಗ್ಗೆ ಉಲ್ಲೇಖವಿದೆ[೧೯೪]. ಇನ್ನೂ ಅನೇಕ ಶಾಸನಗಳಿದ್ದು ಅವುಗಳ ಬಗ್ಗೆ ಶಾಸನಗಳು ಎಂಬ ಅಧ್ಯಾಯದಲ್ಲಿ ಮುಂದೆ ಚರ್ಚಿಸಲಾಗುತ್ತದೆ.

ವರ್ಷವಿಡೀ ಮಳೆ ಬಾರದಿದ್ದಾಗ ಕೃಷಿಯಲ್ಲಿ ಹಿನ್ನಡೆಯುಂಟಾಗಿದ್ದರಿಂದ ನೀರನ್ನು ಸಂಗ್ರಹಿಸಿಡುವ ಕೃತಕ ಜಲಾಶಯಗಳ ನಿರ್ಮಾಣವನ್ನು ಬಹು ಪೂರ್ವದಲ್ಲಿ ಕಂಡುಕೊಂಡಿದ್ದರು. ಅಂತಹ ಕೃತಕ ಜಲಾಶಯಗಳಲ್ಲಿ ಕೆರೆ, ಕಟ್ಟೆ, ಕಾಲುವೆ ಮತ್ತು ಬಾವಿಗಳು ಪ್ರಮುಖವಾಗಿವೆ. ಪ್ರಾಚೀನ ಕಾಲದ ಎಲ್ಲಾ ರಾಜಮನೆತನಗಳು ಇವುಗಳ ನಿರ್ಮಾಣದಲ್ಲಿ ಆಸಕ್ತಿ ತೋರಿಸಿದ್ದರೂ ಅವುಗಳ ನಿರ್ಮಾಣ ಕಾರ್ಯ ಬಹು ವಿಸ್ತಾರವಾಗಿದ್ದು ವಿಜಯನಗರ ಅರಸರ ಕಾಲದಲ್ಲಿ. ಹಾಗಾಗಿ ಇವರ ಅಧೀನ ಅರಸರುಗಳಾದ ಹರಪನಹಳ್ಳಿ ಪಾಳೆಯಗಾರರು ಸಹ ಅವರ ಪರಂಪರೆಯನ್ನೇ ಮುಂದುವರೆಸಿ ಅನೇಕ ಕೆರೆ, ಕಾಲುವೆ, ಕಟ್ಟೆ, ಬಾವಿಗಳನ್ನು ನಿರ್ಮಾಣ ಮಾಡಿರುವುದಲ್ಲದೆ ಕೆಲವುಗಳ ದುರಸ್ತಿ ಕಾರ್ಯಗಳನ್ನು ಕೈಗೊಂಡಿರುವುದು ಶಾಸನಗಳಿಂದ ತಿಳಿಯಬಹುದಾಗಿದೆ. ಈ ವಿಷಯವನ್ನು ಕುರಿತು ಈಗಾಗಲೇ ಚರ್ಚಿಸಲಾಗಿದೆ. ನೀರಾವರಿ ಭೂಮಿಯನ್ನು ದಾನ ನೀಡುವಾಗ ಗದ್ದೆ, ಕೆರೆಯ ಕೆಳಗಿನ ಗದ್ದೆ, ಕಂಬಗದ್ದೆ, ಕೊಳಗಗದ್ದೆ ಮುಂತಾಗಿ ಶಾಸನಗಳಲ್ಲಿ ಉಲ್ಲೇಖಗಳಿವೆ. ಹರಪನಹಳ್ಳಿ ಪಾಳೆಯಗಾರ ಮುಮ್ಮಡಿ ಬಸಪ್ಪನಾಯಕನು ಹರಪನಹಳ್ಳಿ ಜೋಯಿಸರಾದ ನರಸಿಂಹಭಟ್ಟರಿಗೆ ಹಾಗೂ ನಾರಾಯಣದೇವರ ಕರೆಯ ಜೋಯಿಸ ಮಧ್ವಚಾರ್ಯರಿಗೂ ತಮ್ಮ ಪುತ್ರೋತ್ಸವದ ಸಂದರ್ಭದಲ್ಲಿ ತಲಾ ಒಬ್ಬೊಬ್ಬರಿಗೆ ನಾರಾಯಣದೇವರಕೆರೆಯ ಹಿಂದಿನ ಐದು ಬೀಜುವರಿ ಭೂಮಿಯನ್ನು ಉಂಬಳಿ ಹಾಕಿ ಕೊಟ್ಟಿದ್ದಾನೆ[೧೯೫]. ಬಾಗಳಿಯ ಮಹಾನಾಯಕಾಚಾರ್ಯನಾದ ಬಸಪ್ಪನಾಯಕನು ಮೈದೂರಿನಲ್ಲಿ ಬಾವಿಯನ್ನು ಕಟ್ಟಿಸಿದನು[೧೯೬]. ಹಿರೇಮೇಗಳಗೆರೆಯಲ್ಲಿ ಬಸವಂತರಾಯರ ಕಾರ್ಯಕರ್ತನಾದ ಮೇಗಣಗೆರೆಯ ಸ್ಥಾನಿಕ ಬಾಬಾನಾಯಕನು ಸಿದ್ಧನ ಬಾವಿಯನ್ನು ನಿರ್ಮಿಸಿದನು[೧೯೭] ಇದಲ್ಲದೆ ಬಾಗಳಿ[೧೯೮], ಅಲಗಿಲವಾಡ[೧೯೯]ದಲ್ಲಿ ಕೆರೆಗಳಿದ್ದುದಾಗಿ ಹರಪನಹಳ್ಳಿ ಪಾಳೆಯಗಾರರ ನಿರೂಪ ಮತ್ತು

ಶಾಸನಗಳಿಂದ ತಿಳಿದು ಬಂದಿದೆ. ಇನ್ನೂ ಉಳಿದ ಕೆರೆ, ಕಾಲುವೆ, ಬಾವಿಗಳ ಬಗ್ಗೆ ಹಿಂದೆ ಈಗಾಗಲೇ ಚರ್ಚೆಗೊಳಗಾಗಿದೆ. ಈ ರೀತಿಯಾಗಿ ನಾಯಕ ಅರಸರು ಬಣ್ಣ ಮತ್ತು ನೀರಾವರಿ ಭೂಮಿಯೆನ್ನದೆ ನೀರಿನ ಮೂಲವನ್ನು ನಿರ್ಮಾಣ ಮಾಡಿಕೊಂಡು ಸಾಧ್ಯವಾದ ಮಟ್ಟಿಗೆ ಜನ ಸಮುದಾಯಗಳಿಗೆ ನೆರವಾಗುತ್ತಿದ್ದರು. ಇದಕ್ಕೆ ಪೂರಕವಾಗಿ ಜನತೆ ಲಾಭ ಪಡೆದ ಪ್ರತಿಫಲವಾಗಿ ವಿಶೇಷ ಸಂದರ್ಭಗಳಲ್ಲಿ ತಮ್ಮ ಭೂಮಿಯನ್ನು ದೇವಾಲಯಗಳಿಗೆ ದಾನ ನೀಡುತ್ತಿದ್ದರು. ಒಂದು ವೇಳೆ ಅಲ್ಲಿ ದೇವಾಲಯವಿಲ್ಲದಿದ್ದರೂ ದೇವಾಲಯವನ್ನು ಪ್ರತಿಷ್ಠಾಪಿಸಿ ದಾನ ನೀಡಿದ ಉದಾಹರಣೆಗಳೂ ಇವೆ.

**ಕೃಷಿ ಉತ್ಪನ್ನಗಳು**

ಸಾಮಾನ್ಯವಾಗಿ ಪ್ರಾಚೀನ ಕಾಲದ ಜನತೆಗೆ ಮಣ್ಣಿನ ವರ್ಗೀಕರಣ, ನೀರಾವರಿಯ ಮಹತ್ವವನ್ನು ಕುರಿತು ವಿವಿಧ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ವ್ಯಾಪಾರ, ವಾಣಿಜ್ಯ, ತೆರಿಗೆ, ದಾನ ಶಾಸನಗಳು ಮುಂತಾದ ವಿಷಯಗಳನ್ನು ಕುರಿತು ಅಧ್ಯಯನ ನಡೆಸಿದಾಗ ಕೆಲವೊಂದು ಬೆಳೆಗಳ ಕುರಿತಾದ ಉಲ್ಲೇಖಗಳು ಕಂಡು ಬಂದಿವೆ. ಫ್ರಾನ್ಸಿಸ್ ಬುಕನಾನ್‌ನು ಈ ಪ್ರದೇಶಗಳಲ್ಲಿ ಭೇಟಿ ನೀಡಿ ಇಲ್ಲಿನ ಬೆಳೆಗಳನ್ನು ಕೃಷಿ ಮತ್ತು ವಾಣಿಜ್ಯ ಬೆಳೆಗಳೆಂದು ವರ್ಗೀಕರಿಸಿದ್ದಾನೆ[೨೦೦]. ಆದರೆ ಅಧ್ಯಯನ ದೃಷ್ಟಿಯಿಂದ ಆ ಕಾಲದ ಬೆಳೆಗಳನ್ನು ಆಹಾರದ ಬೆಳೆಗಳು, ವಾಣಿಜ್ಯ ಬೆಳೆಗಳು ಮತ್ತು ತೋಟದ ಬೆಳೆಗಳು ಎಂದು ವಿಂಗಡಿಸಬಹುದಾಗಿದೆ. ಇದೇ ರೀತಿಯ ವರ್ಗೀಕರಣವನ್ನು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಕಾಣಬಹುದಾಗಿದೆ. ಇವರ ಕಾಲದಲ್ಲಿ ಗದ್ದೆಯಲ್ಲಿ ಭತ್ತವನ್ನು ತೋಟಗಳಲ್ಲಿ ತೆಂಗು, ಅಡಿಕೆ, ಬಾಳೆ, ವೀಳ್ಯದೆಲೆ, ಹಣ್ಣು, ತರಕಾರಿ, ಮಳೆಯಾಶ್ರಿತ ಬೆದ್ದಲು ಭೂಮಿಯಲ್ಲಿ ರಾಗಿ, ಜೋಳ, ದ್ವಿದಳ ಧಾನ್ಯ, ಎಣ್ಣೆ ಬೀಜಗಳನ್ನು ಬೆಳೆಯುತ್ತಿದ್ದರೆಂದು ತಿಳಿಯಲಾಗಿದೆ[೨೦೧].

ಈ ಪ್ರದೇಶದಲ್ಲಿ ಹರಿಯುವ ತುಂಗಭದ್ರ ನದಿಯು ಅಲ್ಲಲ್ಲಿ ಉಪನದಿಗಳು ಹುಟ್ಟಿ ಹಳ್ಳಕೊಳ್ಳಗಳಾಗಿ ಹರಿದು ನೀರಾವರಿಗೆ ಅನುಕೂಲ ಮಾಡಿಕೊಟ್ಟಿವೆ. ಈ ಪ್ರದೇಶವು ಭತ್ತ ಬೆಳೆಯುವ ಗದ್ದೆ ಪ್ರದೇಶವಾಗಿತ್ತೆಂದು ಶಾಸನಗಳಿಂದ ದೃಢಪಡುತ್ತವೆ. ವಿಜಯನಗರದ ಅರಸ ಎರಡನೆ ದೇವರಾಯನ ಮಂತ್ರಿ ನಾಗಣ್ಣ ದಂಡನಾಯಕನ ಆದೇಶದಂತೆ ಪ್ರಾಂತ್ಯಾಧಿಕಾರಿ ಬುಳ್ಳಪ್ಪ ತುಂಗಭದ್ರೆಯ ಉಪನದಿ ಹರಿದ್ರಾನದಿಗೆ ಕಟ್ಟೆ ಕಟ್ಟಿಸಿದ್ದರಿಂದ ಇಲ್ಲಿ ಹಸಿರು ಗದ್ದೆಗಳು ನಿರ್ಮಾಣಗೊಂಡವು[೨೦೨]. ಇದರಿಂದ ತೃಪ್ತಗೊಂಡ ಜನತೆ ಬುಳ್ಳಪ್ಪನಿಗೆ ಎರಡು ಖಂಡುಗ ಭತ್ತ ಬೆಳೆಯುವ ಭೂಮಿ ನೀಡಿದರು. ಒಟ್ಟಾರೆ ಭತ್ತ ಆಹಾರ ಬೆಳೆಯ ಪ್ರಮುಖ ಬೆಳೆಯಾಗಿದ್ದು ಕೆರೆ, ಕೋಡಿ, ಹಳ್ಳ, ತೊರೆಗಳ ಪಕ್ಕದಲ್ಲಿ ಭತ್ತವನ್ನು ಬೆಳೆಯುತ್ತಿದ್ದರೆಂದು ತಿಳಿಯಬಹುದಾಗಿದೆ[೨೦೩]. ಕೌಟಿಲ್ಯನು ಸಹ ಭತ್ತವು ಜನರ ಪ್ರಮುಖ ಆಹಾರ ಬೆಳೆ ಎಂದು ತಿಳಿಸಿದ್ದಾರೆ[೨೦೪]. ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ಡೊಮಿಂಗೊ ಫಯಾಸ್ ಜೋಳ[೨೦೫]ವನ್ನು ಹೆಚ್ಚಾಗಿ ಬೆಳೆಯುತ್ತಿದ್ದರೆಂದು

ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ಗೋಧಿ[೨೦೬]ಯನ್ನು ಹೆಚ್ಚಾಗಿ ಬಳಸುತ್ತಿರಲಿಲ್ಲ ಎಂದು ತಿಳಿಸಿದ್ದಾನೆ. ಬುಕನಾನ್‌ನು ನೀಡಿರುವ ಬೆಳೆಗಳ ಪಟ್ಟಿಯಲ್ಲಿ ಜೋಳ, ಅವರೆ, ತೊಗರಿ, ಹೆಸರು, ಮಡಕೆಕಾಳು, ಹುರಳಿ, ಅಲಸಂದಿ, ಕಡಲೆ, ನವಣೆ, ಸಜ್ಜೆ, ರಾಗಿ, ಭತ್ತ, ಗೋಧಿ, ಹತ್ತಿಗಳು ಪ್ರಮುಖವಾಗಿವೆ[೨೦೭].

ಭತ್ತ, ಜೋಳ, ಗೋಧಿಯಂತೆ ರಾಗಿಯೂ ಪ್ರಮುಖ ಆಹಾರ ಬೆಳೆಯಾಗಿತ್ತು. ಕನಕದಾಸರ ರಾಮಧಾನ್ಯ ಚರಿತೆಯಲ್ಲಿ ಎಲ್ಲಾ ಧಾನ್ಯಗಳ ವರ್ಣನೆ ಇದ್ದರೂ ಸಹ ರಾಗಿಗೆ ಹೆಚ್ಚು ಮಹತ್ವ ನೀಡಲಾಗಿದೆ[೨೦೮]. ಅನಾದಿ ಕಾಲದಿಂದಲೂ ದಕ್ಷಿಣ ಕರ್ನಾಟಕ ರಾಗಿ ವಲಯವಾಗಿತ್ತೆಂದು ತಿಳಿದು ಬಂದಿದೆ[೨೦೯]. ಬುಕನಾನ್‌ನು ಸಹ ಈ ಪ್ರದೇಶದ ಸುತ್ತಲಿರುವ ಎರೆ ಮತ್ತು ಮರಳು ನೆಲ ರಾಗಿ ಬೆಳೆಗೆ ಅರ್ಹವಾಗಿದೆ ಎಂದು ತಿಳಿಸಿದ್ದಾನೆ[೨೧೦]. ಹರಪನಹಳ್ಳಿ ತಾಲ್ಲೂಕಿನಲ್ಲಿ ಇದೇ ರೀತಿಯ ಮಣ್ಣು ಇರುವುದರಿಂದ ರಾಗಿಯೂ ಈ ಕಾಲದ ಪ್ರಮುಖ ಬೆಳೆಯಾಗಿತ್ತೆಂದು ತಿಳಿಯಬಹುದಾಗಿದೆ. ದ್ವಿದಳ ಧಾನ್ಯಗಳ ಬಗ್ಗೆಯೂ ಶಾಸನಗಳಲ್ಲಿ ಉಲ್ಲೇಖಗಳಿವೆ. ಶಾಸನ ಮತ್ತು ಸಾಹಿತ್ಯಿಕ ಆಧಾರಗಳಲ್ಲಿ ಹೆಚ್ಚಾಗಿ ಧಾನ್ಯ ಮತ್ತು ಹಣ್ಣುಗಳ ಉಲ್ಲೇಖಗಳಿದ್ದು ತರಕಾರಿಗಳ ಉಲ್ಲೇಖಗಳು ಕಡಿಮೆ. ಮೆಣಸಿನಕಾಯಿ, ಸೊಪ್ಪು[೨೧೧], ಕುಂಬಳಕಾಯಿ[೨೧೨], ಹಾಗಲಕಾಯಿ, ಸೌತೆ, ಹಂದರವರೆ, ಹೀರೆಕಾಯಿ, ಬೆಂಡೆಕಾಯಿ, ಗುಳದಕಾಯಿ[೨೧೩]ಗಳನ್ನು ಬೆಳೆಯುತ್ತಿದ್ದರೆಂದು ತಿಳಿದು ಬಂದಿದೆ. ಆದರೆ ಇವುಗಳ ಉಲ್ಲೇಖಗಳಿಲ್ಲದಿದ್ದರೂ ಇವು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದ ಆಹಾರದ ಪದಾರ್ಥಗಳಾಗಿವೆ.

ನೀರಾವರಿ ಅನುಕೂಲ ಇರುವ ಭೂಮಿಯಲ್ಲಿ ಹೆಚ್ಚು ಆದಾಯ ಬರುವ ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಎಲೆ, ಕಬ್ಬು, ಬಾಳೆಗಳನ್ನು ಬೆಳೆಯುತ್ತಾರೆ. ಕೆಲವೊಂದು ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಲ್ಲಿ ಕೆಲವೊಂದು ಉಲ್ಲೇಖಗಳು ಕಂಡು ಬರುತ್ತವೆ. ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗರಾದ ಇಟಲಿಯ ನಿಕಾಲೊಕಾಂಟಿ, ಪರ್ಷಿಯಾದ ಅಬ್ದುಲ್ ರಜಾಕ್, ಪೋರ್ಚ್‌ಗಲ್ಲಿನ ಡೊಮಿಂಗೊ ಫಯಾಸ್ ಮತ್ತು ನ್ಯೂನಿಜ್‌ರು ಎರೆನೆಲ[೨೧೪] ಅಥವಾ ಕಪ್ಪುನೆಲ ಭತ್ತ ಮತ್ತು ಕಬ್ಬಿನ ಬೆಳೆಗೆ ಅನುಕೂಲವಾಗಿದ್ದು ತುಂಗಭದ್ರ ನದಿಯ ಆಸರೆ ಯುದ್ದಕ್ಕೂ ಬೆಳೆಯುತ್ತಿದ್ದರೆಂದು ಅಭಿಪ್ರಾಯಪಟ್ಟಿದ್ದಾರೆ[೨೧೫]. ತುಂಗಭದ್ರಾ ನದಿಯು ಶಿವಮೊಗ್ಗ ಹೊನ್ನಾಳಿ, ಹರಿಹರ ಮತ್ತು ಹರಪನಹಳ್ಳಿ ತಾಲ್ಲೂಕುಗಳ ಮೂಲಕ ಹರಿಯುವುದರಿಂದ ಅಂದಿನಿಂದಲೂ ಭತ್ತ ಮತ್ತು ಕಬ್ಬನ್ನು ಇಂದಿಗೂ ಮುಖ್ಯ ಬೆಳೆಗಳಾಗಿ ಬೆಳೆಯುತ್ತಿದ್ದಾರೆ. ವಾಣಿಜ್ಯ ಬೆಳೆಗಳಲ್ಲಿ ಅತ್ಯಂತ ಪ್ರಮುಖ ಬೆಳೆಗಳೆಂದರೆ ಕಬ್ಬು. ಇದನ್ನು ಇಕ್ಷುದಂಡ[೨೧೬] ಎಂದು ಕರೆಯುತ್ತಾರೆ. ಕಬ್ಬನ್ನು ಹೆಚ್ಚಿನ ನೀರು ಪೂರೈಕೆ ಮತ್ತು ಅದಕ್ಕೆ ಹೊಂದಿಕೊಳ್ಳುವ ಭೂಮಿಯೂ ಇರುವ ಕಡೆ ಕಬ್ಬನ್ನು ಹೆಚ್ಚಾಗಿ ಬೆಳೆಯುತ್ತಾರೆ[೨೧೭]. ಸಾಮಾನ್ಯವಾಗಿ ಬೇಸಿಗೆ ಕಾಲದಲ್ಲಿ ಕಬ್ಬನ್ನು ಕತ್ತರಿಸಲಾಗುತ್ತಿತ್ತು[೨೧೮]. ಇದು ಹೆಚ್ಚು ಲಾಭ ತರುವ ನಗದು ಬೆಳೆಯಾಗಿತ್ತು[೨೧೯]. ಕಬ್ಬಿನ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತೆಂದು ತಿಳಿಯಲಾಗಿದೆ[೨೨೦].

ಕಬ್ಬಿನಂತೆ ತೆಂಗು ಸಹ ಪ್ರಮುಖ ವಾಣಿಜ್ಯ ಬೆಳೆ. ಸರ್ವಜ್ಞನ ವಚನದಲ್ಲಿ ಮರಳು ನೆಲ ತೆಂಗು ಬೆಳೆಯಲು ಸೂಕ್ತ ಎಂದು ತಿಳಿದು ಬರುತ್ತದೆ[೨೨೧]. ಎಳನೀರು[೨೨೨] ಮತ್ತು ತೆಂಗಿನಕಾಯಿ[೨೨೩]ಯನ್ನು ವಿದೇಶಗಳಿಗೂ ರಫ್ತು ಮಾಡುತ್ತಿದ್ದುದರಿಂದ[೨೨೪] ಇವುಗಳಿಗೆ ದೇಶಿಯವಾಗಿ ಮಾತ್ರವಲ್ಲದೆ ವಿದೇಶಗಳಲ್ಲೂ ಹೆಚ್ಚಿನ ಬೇಡಿಕೆ ಇದ್ದುದು ಸಾಮಾನ್ಯವಾಗಿತ್ತು. ಕ್ರಿ.ಶ.೧೫೩೬-೩೭ರಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ನ್ಯೂನಿಜನು ಎಲೆತೋಟ[೨೨೫]ದಲ್ಲಿ ಬೆಳೆಯುತ್ತಿದ್ದ ನಾಗವಲ್ಲಿ[೨೨೬] ಅಥವಾ ವೀಳ್ಯೆದೆಲೆ[೨೨೭]ಯನ್ನು ರಾಜಧಾನಿಯ ಹೊರಗಡೆಯಲೆಲ್ಲಾ ಬೆಳೆಯುತ್ತಾರೆ[೨೨೮]ಎಂದು ತಿಳಿಯಪಡಿಸಿದ್ದಾನೆ. ಇದನ್ನು ಅಡಿಕೆ[೨೨೯]ಯೊಂದಿಗೆ ಜನರು ಯಾವಾಗಲೂ ಬಾಯಿಯಲ್ಲಿ ಸೇವಿಸುತ್ತಾರೆಂದು ಡೊಮಿಂಗೊ ಫಯಾಸ್ ತಿಳಿಸುತ್ತಾನೆ[೨೩೦]. ಹತ್ತಿಯು ಪ್ರಮುಖ ವಾಣಿಜ್ಯ ಬೆಳೆಯಾಗಿದ್ದು[೨೩೧] ಈ ಪ್ರದೇಶದ ಸುತ್ತಮುತ್ತ ಹೆಚ್ಚಾಗಿ ಬೆಳೆಯುತ್ತಿದ್ದರೆಂದು ಬುಕನಾನ್ ತಿಳಿಸಿದ್ದಾನೆ[೨೩೨]. ಸರ್ವಜ್ಞ ಒಣಭೂಮಿಯಲ್ಲಿ ಹತ್ತಿಯನ್ನು ಬೆಳೆಯುತ್ತಿದ್ದರೆಂದು[೨೩೩] ತಿಳಿಸುತ್ತಾನೆ. ಗಾಣಗಳಿದ್ದುದರ[೨೩೪] ಬಗ್ಗೆಯೂ ಶಾಸನಗಳು ಉಲ್ಲೇಖಿಸುತ್ತವೆ.

### ೩.೫.೧ ವ್ಯಾಪಾರ ವಹಿವಾಟು

ಒಂದು ದೇಶದ ಸಾಮ್ರಾಜ್ಯದ ಖರ್ಚು ವೆಚ್ಚ ವ್ಯವಸಾಯ ಮತ್ತು ಉತ್ಪಾದನಾ ವಸ್ತುಗಳ ಮೇಲೆ ಆಕರಿಸುತ್ತಿದ್ದ ತೆರಿಗೆಗಳನ್ನು ಅವಲಂಬಿಸಿತ್ತು. ಅಲ್ಲದೆ ನಿರ್ಯಾತ ಹಾಗೂ ಆಯಾತಗಳಿಂದಾಗಿ ಸರ್ಕಾರಕ್ಕೆ ಹೆಚ್ಚು ಆದಾಯ ಬರುತ್ತಿತ್ತು. ಹಳ್ಳಿಗಳು ಬಹುಮಟ್ಟಿಗೆ ಸ್ವಯಂಪೂರ್ಣವಾಗಿದ್ದು ಕೃಷಿ ಆಧಾರಿತ ಅರ್ಥ ವ್ಯವಸ್ಥೆ ಇದ್ದುದರಿಂದ ಉತ್ಪನ್ನಗಳಿಗೆ ವ್ಯಾಪಕವಾದ ಮಾರುಕಟ್ಟೆಯಿತ್ತು. ಹಳ್ಳಿಗಳಲ್ಲಿ ಉತ್ಪಾದಿಸಲು ಸಾಧ್ಯವಾಗದ ವಸ್ತುಗಳನ್ನು ಪಟ್ಟಣಗಳ ಕೈಗಾರಿಕೆಗಳು ವ್ಯಾಪಾರಿ ವರ್ಗಗಳ ಮೂಲಕ ಒದಗಿಸುತ್ತಿದ್ದರು. ಈ ಪ್ರದೇಶ ಬೇರೆ ಬೇರೆ ಪ್ರದೇಶಗಳ ನಡುವೆ ಇಂತಹ ವ್ಯಾಪಾರ ವಾಣಿಜ್ಯದ ವಹಿವಾಟು ಒಂದು ಪರಿಣಾಮಕಾರಿಯಾದ ಕೊಂಡಿಯಂತೆ ಕಾರ್ಯ ನಿರ್ವಹಿಸಿತು. ಅವರಲ್ಲೂ ರಾಜ್ಯದ ಆರ್ಥಿಕತೆಯಲ್ಲಿ ಆಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿತ್ತು. ಈ ರೀತಿಯ ವ್ಯಾಪಾರ ವಹಿವಾಟು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಒಂದು ಆರ್ಥಿಕ ಪ್ರಕ್ರಿಯೆ. ಉತ್ಪಾದನೆಯಾದ ವಸ್ತುಗಳಿಗೆ ಸರಿಯಾದ ಮಾರುಕಟ್ಟೆ ಸಿಕ್ಕರೆ ಮಾತ್ರ ರೈತ ಆ ಮೂಲಕ ಸರ್ಕಾರದ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸಾಧ್ಯವಾಗುತ್ತದೆ.

### ವರ್ತಕರು

ವ್ಯಾಪಾರವನ್ನು ವೃತ್ತಿಯನ್ನಾಗಿಸಿಕೊಂಡವರನ್ನು ವರ್ತಕರು ಸೆಟ್ಟಿಗಳೆಂದು ಕರೆಯಲಾಗಿದೆ. ಬಿ.ಆರ್.ಹಿರೇಮಠ್‌ರವರು ತಮ್ಮ ಶಾಸನಗಳಲ್ಲಿ ಕರ್ನಾಟಕದ ವರ್ತಕರು ಎಂಬ ಗ್ರಂಥದಲ್ಲಿ ವಿನಿಮಯ ವರ್ತಕರು ಮತ್ತು ಉತ್ಪಾದಕ ವರ್ತಕರು ಎಂಬ ಎರಡು ವರ್ತಕರ ಗುಂಪುಗಳನ್ನು ತಿಳಿಸಿದ್ದಾರೆ. ಸೆಟ್ಟಿ, ಬಣಜಿಗ, ಸೆಟ್ಟಿಗುತ್ತ, ನಖರ, ಮುಮ್ಮರಿದಂಡ, ವಡ್ಡ ವ್ಯವಹಾರಿ, ಗಾತ್ರಿಕ, ಸೆಟ್ಟಿಕಾರ, ಹಲರು, ಎಳಮೆ,

ಸಾಲಿಕೆ, ಒಲ್ಲಾಗಳುಗಳು, ನಾನಾದೇಶಿ, ಉಭಯ ನಾನಾದೇಶಿಗಳು ಮುಂತಾದವರು. ವಿನಿಮಯ ವರ್ತಕರಾದರೆ ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಮೇದ ಮೊದಲಾದವರು. ಉತ್ಪಾದಕ ವಿನಿಮಯ ವರ್ತಕರಾಗಿದ್ದರು. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಸೆಟ್ಟಿ[೨೩೫], ಬಣಜಿಗರು[೨೩೬], ಮುಮ್ಮರಿದಂಡ[೨೩೭]ಗಳೆಂಬ ವರ್ತಕ ವರ್ಗಗಳು ಬಾಗಳಿ, ಹಲವಾಗಲು, ಹರಿವೆ ಬಸಾಪುರಗಳಲ್ಲಿ ನೆಲೆಸಿದ್ದರು. ಹರಪನಹಳ್ಳಿಯ ಸೋಮಶೇಖರನಾಯಕನು ಶೃಂಗೇರಿ ಮಠಕ್ಕೆ ಬಸಾಪುರ ಗ್ರಾಮವನ್ನು ನೀಡುವ ಸಂದರ್ಭದಲ್ಲಿ ಅಲ್ಲಿ ಜೀವನ ಮಾಡುವ ಹತ್ತು ಜನರ ಹೆಸರಿನಲ್ಲಿ ಅನ್ನದಾನ ಸೆಟ್ಟಿಯು ಒಬ್ಬನಾಗಿದ್ದನು. ಇದರಿಂದ ವರ್ತಕರು ಗ್ರಾಮದಲ್ಲಿಯೂ ನೆಲೆಸಿದ್ದರೆಂದು ತಿಳಿದು ಬರುತ್ತದೆ[೨೩೮]. ಬಣಜಿಗ ಸೆಟ್ಟಿ ವರ್ಗವು ಪಾರಂಪರಿಕವಾಗಿ ವ್ಯಾಪಾರದಲ್ಲಿ ತೊಡಗಿತ್ತು. ಸಂಸ್ಕೃತದ 'ವಣಿಜ' 'ಶ್ರೇಷ್ಠನ್' ಪದಗಳ ಕನ್ನಡ ರೂಪ 'ಬಣಂಜಿಗ'. ಇವರನ್ನು ಬಣಜಿಗ, ಬಿರುದರ ಬಣಂಜಿಗ[೨೩೯], ವೀರಬಣಂಜಿ[೨೪೦], ಸ್ಥಳದಹನ್ನವಣಿಗ[೨೪೧], ವಣಿಜಸ್ವಾಮಿ[೨೪೨], ಮುಂತಾದ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ವರ್ತಕರು ಸಂತೆ ಪೇಟೆಗಳಿಗೆ ಬಂದ ವಸ್ತುಗಳನ್ನು ಖರೀದಿಸಿ ಅಂಗಡಿ ಇಲ್ಲವೆ ಮನೆಗಳಲ್ಲಿಟ್ಟು ವ್ಯಾಪಾರ ಮಾಡುತ್ತಿದ್ದರು. ಹಾಗಾಗಿ ಇವರನ್ನು ಅಂಗಡಿ ಸೆಟ್ಟಿಯರೆಂದು ಕರೆಯಲಾಗಿದೆ[೨೪೩]. ಕುರುಗೋಡು ಶಾಸನ ಇವರನ್ನು ಪಟ್ಟಣದ ನಖರರು[೨೪೪] ಎಂದು ಕರೆದಿದೆ. ಹಲುವಾಗಿಲ[೨೪೫] ಮತ್ತು ಉಚ್ಚಂಗಿ[೨೪೬] ಶಾಸನಗಳಲ್ಲಿ ಇವರ ಉಲ್ಲೇಖವಿದೆ. ಮತ್ತೊಂದು ವರ್ತಕ ವರ್ಗವಾದ ಕುರುಗೋಡು ಶಾಸನ ಮುಮ್ಮರಿ ದಂಣ್ಡಗಳಂಭಣ್ಡೇ ತೂಗಿಸಿಕೊಂಡು ವ್ಯಾಪಾರ ಮಾಡುತ್ತಿದ್ದುದನ್ನು ತಿಳಿಸುತ್ತದೆ[೨೪೭]. ಇದರಿಂದ ಸರಕುಗಳನ್ನು ಹೇರಿಕೊಂಡು ಸಂತೆ-ಪೇಟೆಗಳಿಗೆ ಹೋಗಿ ವ್ಯಾಪಾರದಲ್ಲಿ ತೊಡಗಿದ್ದುದನ್ನು ಸೂಚಿಸುತ್ತದೆ. ಎಲೆ, ಅಡಿಕೆ, ಅರಿಷಿಣ, ಮೆಣಸು, ಜೀರಿಗೆ, ಅಜವಾನ ಮೊದಲಾದವು ವ್ಯಾಪಾರ ವಸ್ತುಗಳಾಗಿದ್ದವು[೨೪೮]. ಇವರು ತಮ್ಮನ್ನು ಅಯ್ಯವಳೆ ಐನೂರ್ವರ ಅನ್ವಯ(ವಂಶ)ದವರೆಂದು ಹೇಳಿಕೊಂಡಿದ್ದಾರೆ[೨೪೯]. ಇವರುಗಳು ಆಯಾ ಗ್ರಾಮ ಪಟ್ಟಣಗಳಿಗೆ ಮೂಲಸ್ತಂಭರೆನಿಸಿದ್ದರು. ಕೆಲವರು ಪಟ್ಟಣಸ್ವಾಮಿಗಳಾಗಿ ಪ್ರಸಿದ್ಧಿಯಾಗಿದ್ದರು. ಮುಂಮ್ಮರಿದಂಡ ಪಟ್ಟಣಸ್ವಾಮಿಗಳೆಂದು ಕೊಟ್ಟೂರು ಶಾಸನದಲ್ಲಿ ಉಲ್ಲೇಖವಿದೆ[೨೫೦]. ಲಕ್ಕಿಸೆಟ್ಟಿ ಎಂಬುವನು ಬಾಗಳಿಯ ಪಟ್ಟಣಸ್ವಾಮಿಯಾಗಿದ್ದನು[೨೫೧]. ಇವನ ಹೆಂಡತಿ ಲಿಂಗಮ್ಮಳು ನೆಲ್ಲು ಹಣವನ್ನು ಬಾಗಳಿಯ ಕಲಿದೇವರಿಗೆ ನೀಡಿದಳೆಂದು[೨೫೨] ತಿಳಿದು ಬರುತ್ತದೆ. ವಡ್ಡವ್ಯವಹಾರಿಗಳು ಅರಸನಿಂದ ನೇಮಕಗೊಂಡು ಬೆಲೆ ಬಾಳುವ ವಸ್ತುಗಳ ಸಗಟು ವ್ಯಾಪಾರ ಕೈಗೊಂಡಿದ್ದರೆಂದು ತಿಳಿದು ಬಂದಿದೆ. 'ವಡ್ಡ' ಎಂಬುದು 'ಹಿರಿಯ' ಎಂದರ್ಥ. ನೀಡಿದ್ದು ಇವರನ್ನು ಹಿರಿಯ ವ್ಯಾಪಾರಿಗಳೆಂದು ಸೂಚಿಸುತ್ತದೆ. ಇವರಲ್ಲಿ ಕೆಲವರು ಅಧಿಕಾರಿಗಳಾಗಿದ್ದು ಆಡಳಿತದ ಜವಾಬ್ದಾರಿಯನ್ನು ಹೊಂದಿದ್ದರು. ದುಗ್ಗವತಿ ಶಾಸನ ಮಲೆಯಾಳ ವಡ್ಡವ್ಯವಹಾರಿ ನಂಬಿಗಣ್ಣಿ ಸೆಟ್ಟಿಯರು ಕೋಗಳಿ-೫೦೦ ಬಳಿ ಬಿಕ್ಕಿಗ-೭೦ರ ದುಗ್ಗವತಿಯನ್ನು ಆಳುತ್ತಿದ್ದನೆಂದು ತಿಳಿಸಿದೆ[೨೫೩]. ಬಾಗಳಿ ಶಾಸನ ಶ್ರೀಮನ್ಮಹಾವಡ್ಡಾಬ್ಯುವಹಾರಿ ಚಿನ್ನಗೆಯ ಕಪ್ಪಸೆಟ್ಟಿಯರು ಎಂದಿದೆ[೨೫೪].

ನಾನಾದೇಶಿ–ಉಭಯ ನಾನಾದೇಶಿಯ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಕುಗಳನ್ನು ತೆಗೆದುಕೊಂಡು ಹೋಗಿ ವಿವಿಧ ಪಟ್ಟಣಗಳಲ್ಲಿ ಮಾರಾಟ ಮಾಡುತ್ತಿದ್ದರು. ಲಾಳ, ಮಲೆಯಾಳ, ಚೋಳ, ತೆಲುಗು, ಕನ್ನಡ, ತೆಂಕ, ಕಂಚಿ, ಬಡ, ಹಿಮಗಾತು, ವಾದಿಯಾಗಿ ಸಮಸ್ತ ನಾನಾದೇಶಿಗಳು ಎಂಬುದರಿಂದ ಇವರ ವ್ಯಾಪಾರದ ಪ್ರಾದೇಶಿಕ ವಿಸ್ತಾರವನ್ನು ಸೂಚಿಸುತ್ತದೆ[೨೫೫]. ವಡ್ಡವ್ಯವಹಾರಿಗಳು ತಮ್ಮನ್ನು ನಾನಾದೇಶಿ ವಡ್ಡವ್ಯವಹಾರಿಗಳೆಂದು ಕರೆದುಕೊಂಡಿರುವುದರಿಂದ ಇವರಿಬ್ಬರಲ್ಲಿ ಸಾಮ್ಯತೆ ಕಂಡು ಬರುತ್ತದೆ[೨೫೬]. ಬಾಗಳಿ ಶಾಸನ ನಾನಾದೇಶಿ ತಂಬುಲಿಗರು ಎಂದು ಕರೆದಿರುವುದರಿಂದ ತಂಬುಲಿಗರಿಗೂ ನಾನಾದೇಶಿ ಸೆಟ್ಟಿಗರಿಗೂ ಸಂಬಂಧಗಳು ಸ್ಪಷ್ಟಗೊಳ್ಳುವುದಿಲ್ಲ[೨೫೭]. ಎಲೆಯ ಮಾರಾಟವನ್ನೇ ಮುಖ್ಯವಾಗಿರಿಸಿಕೊಂಡ ತಂಬುಲಿಗರು ಎಣ್ಣೆ ಮಾರಾಟ ಮಾಡುತ್ತಿದ್ದ ತೆಲ್ಲಿಗ ಸೆಟ್ಟಿಗಳಂತೆ ನಾನಾದೇಶಿಗಳೆಂದು ಕರೆದುಕೊಂಡಿರಬೇಕು. ನಾನಾದೇಶಿ ಮಲೆಯಾಳ ಹೊರಯಚ್ಚಸೆಟ್ಟಿಯನ್ನು ಸೋಗಿ ಶಾಸನ ಉಲ್ಲೇಖಿಸುತ್ತದೆ. ಒಟ್ಟಾರೆ ಇವರು ಧಾರ್ಮಿಕ–ಸಾಮಾಜಿಕ ಕಾರ್ಯಗಳಲ್ಲಿ ಪ್ರಮುಖರಾಗಿ ಸೇರುತ್ತಿದ್ದರು. ಮೇಲಿನ ವಿನಿಮಯ ವರ್ತಕರಂತೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಉತ್ಪಾದಕ ವರ್ತಕರು ಇದ್ದರು. ಅಂದರೆ ಇವರು ಗೃಹ ಕೈಗಾರಿಕೆಗಳಿಗೂ ಪ್ರೋತ್ಸಾಹ ನೀಡಿದ್ದರು. ಬಡಗಿ[೨೫೯], ಕಂಚುಗಾರ, ಅಕ್ಕಸಾಲಿಗ[೨೬೦], ಕುರುಬ[೨೬೧], ಮುಂತಾದ ವೃತ್ತಿಯವರು ನೆಲೆಸಿದ್ದರು. ಇವರು ದಿನ ಬಳಕೆಯ ವಸ್ತುಗಳನ್ನು ಉತ್ಪಾದಿಸುತ್ತಿದ್ದರು. ಬುಕನಾನ್‌ನು ತನ್ನ ಬರವಣಿಗೆಯಲ್ಲಿ ಹರಪನಹಳ್ಳಿಯ ಕುರುಬರು ನಯವಾದ ಕಂಬಳಿಗಳನ್ನು ಉತ್ಪಾದಿಸುತ್ತಿದ್ದರೆಂದು ತಿಳಿಸಿದ್ದಾನೆ[೨೬೨].

**ವ್ಯಾಪಾರದ ವಸ್ತುಗಳು**

ಹರಪನಹಳ್ಳಿ ಪಾಳೆಯಗಾರರ ಬಹುಭಾಗ ಪ್ರದೇಶವು ಬಯಲು ಪ್ರದೇಶವಾಗಿದ್ದು ನೀರಾವರಿಗಾಗಿ ಅನೇಕ ಕೆರೆಕಟ್ಟೆ, ಬಾವಿಗಳನ್ನು ನಿರ್ಮಿಸಿ ಕೃಷಿಗೆ ಪ್ರೋತ್ಸಾಹ ನೀಡಿದ್ದರು. ಈ ಪ್ರದೇಶದಲ್ಲಿ ಭತ್ತ ಅಥವಾ ಅಕ್ಕಿ[೨೬೩], ಬೇಳೆ, ಬೆಲ್ಲ, [ಕಬ್ಬು] ಕಣಕ [ಗೋಧಿಹಿಟ್ಟು] ಸೊಪ್ಪು[೨೬೪], ರಾಗಿ, ಜೋಳ, ಶೇಂಗಾ, ಹತ್ತಿ[೨೬೫], ಔಡಲ ಮತ್ತು ಕುಸುಮೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ತಮಗೆ ಸಾಕಾಗುವಷ್ಟು ಇಟ್ಟುಕೊಂಡು ಉಳಿದುದನ್ನು ಮಾರಾಟ ಮಾಡುತ್ತಿದ್ದರು. ದವಸಗಳನ್ನು[೨೬೬] ಮಾರಾಟ ಮಾಡುತ್ತಿದ್ದರೆಂದು ಹರಪನಹಳ್ಳಿ ಶಾಸನದಿಂದ ತಿಳಿದು ಬಂದಿದೆ. ಇವುಗಳ ಜೊತೆಗೆ ಈ ಪ್ರದೇಶದಲ್ಲಿ ತುಪ್ಪ, ಎಣ್ಣೆ, ಅಡಿಕೆ, ಮೆಣಸು[೨೬೭], ಎಳ್ಳು, ಉಪ್ಪು[೨೬೮], ರಾಗಿ[೨೬೯], ಹುಲ್ಲು[೨೭೦], ಬಟ್ಟೆ[೨೭೧], ಹಣ್ಣು, ತರಕಾರಿ, ಮಾಂಸ[೨೭೨], ಕುದುರೆ[೨೭೩], ಕಂಬಳಿ[೨೭೪], ಮುಂತಾದವುಗಳು ವ್ಯಾಪಾರದ ವಸ್ತುಗಳಾಗಿದ್ದವೆಂದು ತಿಳಿದು ಬಂದಿದೆ.

ಹಾಗಾಗಿ ಹರಪನಹಳ್ಳಿ ಪಾಳೆಯಗಾರರ ಕಾಲಾವಧಿಯಲ್ಲಿ ಈ ವಸ್ತುಗಳೂ ವ್ಯಾಪಾರ ವಸ್ತುಗಳಾಗಿದ್ದವೆಂದು ಹೇಳಬಹುದು. ಇವರ ಕಾಲದಲ್ಲಿ ಗದ್ದೆಗಳಲ್ಲಿ ರಸ್ತಾಳೆ, ಕಬ್ಬುಗಳನ್ನು ಸಾಕಷ್ಟು ಬೆಳೆಯುತ್ತಿದ್ದರು.

**ವ್ಯಾಪಾರ ಕೇಂದ್ರಗಳು**

ಉತ್ಪಾದನೆಯಾಗುತ್ತಿದ್ದ ವಸ್ತುಗಳ ಸಂಗ್ರಹಣೆ ಮತ್ತು ವಿತರಣೆಯ ಮಾಧ್ಯಮಗಳಾಗಿ ವಾಣಿಜ್ಯ-ವ್ಯಾಪಾರ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದವು. ರಾಜ್ಯದ ಆರ್ಥಿಕತೆಯಲ್ಲಿ ಅಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿದೆ. ಅಂತರಿಕ ವ್ಯಾಪಾರದಲ್ಲಿ ಗ್ರಾಮ ಮತ್ತು ಪಟ್ಟಣ ಪ್ರದೇಶಗಳು ಪರಸ್ಪರ ಒಂದುಗೂಡಿ ಕೆಲಸನಿರ್ವಹಿಸುತ್ತಿದ್ದವು. ಒಳನಾಡು ವ್ಯಾಪಾರದಿಂದಾಗಿಯೇ ಅನೇಕ ಗ್ರಾಮೀಣ ಪ್ರದೇಶಗಳು ಪೇಟೆ ಪಟ್ಟಣಗಳಾಗಿ ಪರಿವರ್ತನೆಗೊಂಡವು. ಇದರಿಂದಾಗಿ ಆಂತರಿಕ ವ್ಯಾಪಾರವು ಚುರುಕುಗೊಂಡಿತು. ಈ ವ್ಯಾಪಾರದ ಪ್ರಮುಖ ಪ್ರದೇಶಗಳು ಕೇಂದ್ರಗಳೆಂದರೆ ಸಂತೆಗಳು, ಅಂಗಡಿಗಳು, ಪೇಟೆ, ಪಟ್ಟಣಗಳು.

**ಸಂತೆಗಳು**

ಸಂತೆ ಅಥವಾ ಬಜಾರ್ ಎಂಬ ವಾಣಿಜ್ಯ ಪಾರಿಭಾಷಿಕ ಪದದ ಪರಿಕಲ್ಪನೆ, ಅರ್ಥ, ವ್ಯಾಪ್ತಿ ಮತ್ತು ಉಪಯುಕ್ತತೆ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿರುವುದನ್ನು ಇತಿಹಾಸದುದ್ದಕ್ಕೂ ಕಾಣಬಹುದು. ವಾಣಿಜ್ಯ ಚಟುವಟಿಕೆಗಳ ವಿಕಾಸದ ವಿವಿಧ ಹಂತಗಳನ್ನು ಗುರುತಿಸುವಲ್ಲಿ ಸಂತೆಯನ್ನು ಪ್ರಾರಂಭಿಕ ಹಂತವೆಂದು ಗುರುತಿಸಬಹುದಾಗಿದೆ. ವಾಣಿಜ್ಯ ಎಂಬ ಪದದ ಅರ್ಥ, ವ್ಯಾಪ್ತಿ ಬಹುವ್ಯಾಪಕವಾಗಿದ್ದು ಅದು ಹತ್ತು ಹಲವು ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿರುವುದು. ಆ ಚಟುವಟಿಕೆಗಳ ಒಂದು ಭಾಗವೇ ಸಂತೆ. ಮಧ್ಯಕಾಲೀನ ಆರ್ಥಿಕ, ವಾಣಿಜ್ಯ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಸಂತೆಯು ಮೂಲತಃ ಒಂದು ಸಮಷ್ಟಿಯ ಕೊಳ್ಳುವ ಮತ್ತು ಮಾರುವ ಆರ್ಥಿಕ ಚಟುವಟಿಕೆಯ ಕೇಂದ್ರ. ಇದು ತನ್ನದೇ ಆದ ಒಂದು ಸೀಮಿತ ಅರ್ಥ ಮತ್ತು ಭೌಗೋಳಿಕ ವ್ಯಾಪ್ತಿಯನ್ನು ಹೊಂದಿದೆ. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಪಾಳೆಯಗಾರರ ಶಾಸನಗಳೂ ಮತ್ತು ಸಾಹಿತ್ಯಿಕ ಗ್ರಂಥಗಳಿಂದ ಆ ಕಾಲದ ಸಂತೆ ಅವುಗಳ ರಚನೆ ಅವುಗಳು ಒಳಗೊಂಡಿರುವ ವಿವಿಧ ವರ್ತಕ ಸಮುದಾಯ ವರ್ತಕರ ವರ್ಚಸ್ಸು, ಸುಂಕಪದ್ಧತಿ, ತೂಕ-ಅಳತೆ ಮುಂತಾದ ವಿಷಯಗಳು ತಿಳಿದು ಬರುತ್ತವೆ. ವಿದೇಶಿ ಪ್ರವಾಸಿಗರ ವರದಿಗಳು ಸಹ ಸಂತೆಗಳ ಬಗ್ಗೆ ಕೆಲವು ಮಾಹಿತಿಯನ್ನು ನೀಡುತ್ತವೆ.

ಕೃಷಿ ಉತ್ಪನ್ನಗಳ ವ್ಯಾಪಾರವು ಹೆಚ್ಚಿದ್ದರಿಂದ ಸಂತೆಗಳ ಸ್ಥಾಪನೆ ಮತ್ತು ವಿಸ್ತರಣೆಗೆ ಅವಕಾಶವಾಯಿತು. ಇವು ಮಧ್ಯಯುಗೀನ ನಗರಗಳ ಬೆಳವಣಿಗೆಗೆ ಎಡೆ ಮಾಡಿಕೊಟ್ಟವು. ಹಾಗಾಗಿ

ಸಂತೆಗಳು ದೇಶಿಯ ಕೃಷಿ ಉತ್ಪನ್ನಗಳ ಮಾರಾಟ ಹಾಗೂ ಒಳನಾಡು ವ್ಯಾಪಾರದ ಮುಖ್ಯ ಕೇಂದ್ರಗಳಾಗಿದ್ದವು. ಹೀಗೆ ಮಾರುವವರು ಮತ್ತು ಕೊಳ್ಳುವವರು ವಾರಕ್ಕೆ ಒಂದು ದಿನ ನಿರ್ದಿಷ್ಟ ಪ್ರದೇಶದಲ್ಲಿ ಮತ್ತು ಸಮಯದಲ್ಲಿ ಸೇರುವುದೇ ಸಂತೆ[೨೬೫]. ಸಂತೆಗಳು ಗ್ರಾಮ ಮತ್ತು ಪಟ್ಟಣಗಳಲ್ಲಿ ನಡೆಯುತ್ತಿದ್ದವು. ಶಾಸನಗಳು ಮತ್ತು ಗ್ರಂಥಗಳೂ ಉಲ್ಲೇಖಿಸುವಂತೆ ಅನೇಕ ಪಟ್ಟಣಗಳು ಈ ಭಾಗದ ಕೆಲವು ಭಾಗಗಳಲ್ಲಿ ಕಂಡು ಬರುತ್ತವೆ. ದಿಡಗೂರು[೨೬೬], ಬಾನುಮತಿಪಟ್ಟಣ[೨೬೭], ಬಾಗಳಿ[೨೬೮], ಮೈದೂರು[೨೬೯], ತಂಬ್ರಹಳ್ಳಿ[೨೭೦], ಹರಪನಹಳ್ಳಿ[೨೭೧], ಕೋಟೆಮಲ್ಲೂರು[೨೭೨], ಹಂಪಾಪಟ್ಟಣ[೨೭೩], ಬಾಗಳಿ[೨೭೪], ಉಚ್ಚಂಗಿ[೨೭೫], ಚಿಗಟೇರಿ, ನಾರಾಯಣದೇವರಕೆರೆ[೨೭೬], ಪ್ರಮುಖವಾಗಿದ್ದವು.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಕೋಟೆ ಮತ್ತು ಮಾರುಕಟ್ಟೆಗಳ ನಡುವೆ ನೇರ ಸಂಪರ್ಕವಿತ್ತು. ಕೋಟೆಗಳಲ್ಲಿ ದಾಸ್ತಾನು ಮಾಡಿದ ದವಸ ಧಾನ್ಯಗಳನ್ನು ವ್ಯಾಪಾರಿಗಳು ಸಂಗ್ರಹಿಸುತ್ತಿದ್ದರು. ಮೊದಲ ಅರಸ ದಾದೇನಾಯಕ ಹರಪನಹಳ್ಳಿಯಲ್ಲಿ ಎರಡು ಸುತ್ತಿನ ಕೋಟೆಗಳನ್ನು ಕಟ್ಟಿಕೊಂಡು ಆಡಳಿತ ನಡೆಸಿದನು. ಲಿಂಗಣ್ಣ ಕವಿಯು 'ಆದಿಯೊಳು ಉಚ್ಚಂಗಿಯೆಂಬ ಸ್ಥಳದೊಳಿನ ಅನಂತರಂ ಹರಿಪುರ ಪ್ರತಿನಾಮ ಹರಪನಹಳ್ಳಿ ಎಂಬ ಕೋಟೆಯಂ ಬಲಿಸಿ ಆ ಕೋಟೆಯೊಳಿರ್ದ' ಎಂದು ವರ್ಣಿಸಿದ್ದಾನೆ[೨೭೭]. ಸ್ಥಳವು ಇವರ ರಾಜಧಾನಿಯಾಗಿ ಇನ್ನೂರ ಮೂವತ್ತನಾಲ್ಕು ವರ್ಷಗಳ ಕಾಲ ಆಳ್ವಿಕೆಗೆ ಒಳಪಟ್ಟಿತ್ತು. ಕಾಲದಲ್ಲಿ ಸಂತೆಗಳಲ್ಲಿ ಅರಬರು, ಪಿಂಡಾರಿಗಳು, ಗಂಟೆ ಚೌಡಿಯರು, ಪುಡಾರಿಗಳು, ಅಂಗಡಿಯವರನ್ನು ಹೆದರಿಸಿ ದವಸ-ಧಾನ್ಯ ತಿಂಡಿ, ಅಡಿಕೆ, ಎಲೆ, ಕಿರಾಣಿ ಮತ್ತು ಹಣವನ್ನು ಪಡೆಯುತ್ತಿದ್ದರು. ಕೊಡದಿದ್ದರೆ ಅವರ ಅಂಗಡಿಗಳನ್ನು ಕೊಳ್ಳೆ ಹೊಡೆದು ಪದಾರ್ಥಗಳನ್ನು ದಾರಿಗೆ ಎಸೆಯುತ್ತಿದ್ದರು[೨೭೮]. ಮೊದಲ ಸೋಮಶೇಖರನಾಯಕನ ಕಾಲದಲ್ಲಿ ಒಬ್ಬ ದಳವಾಯಿ ಕುದುರೆ ಏರಿ ಪಟ್ಟಣದಲ್ಲಿ ಸಂತೆ ನಡೆಯುವಾಗ ಉಪದ್ರವ ನೀಡುವುವವರನ್ನು ಹಿಡಿದು ಚಾಟಿ ಏಟು ಹಾಕುತ್ತಿದ್ದ. ಸಂತೆಯವರಿಂದ ದಳವಾಯಿಗೆ ಸಂತೆಗೆ ಇಷ್ಟು ಹೊನ್ನು ಹರಪನಹಳ್ಳಿ ೧೦.೫ ಆಣೆವರಿ ಕೊಡುವ ವ್ಯವಸ್ಥೆಯಿತ್ತು[೨೭೯].

ಸಂತೆಗಳಲ್ಲಿ ಬಯಲು ಅಂಗಡಿ ಮತ್ತು ಕಟ್ಟಿದ ಅಂಗಡಿಗಳಿದ್ದು ಸಂತೆಯ ದಿನ ಮಾತ್ರ ತೆರೆದಿರುತ್ತಿದ್ದವು[೨೮೦]. ಸ್ಥಳೀಯ ವರ್ತಕರು, ವ್ಯಾಪಾರಿ ಮುಖಂಡರು ಮತ್ತು ಗೌಡರುಗಳು ಸೇರಿ ಸಂತೆಯನ್ನು ನಡೆಸುತ್ತಿದ್ದರು[೨೮೧]. ಸ್ಥಳೀಯ ಉತ್ಪಾದಕರು, ವ್ಯಾಪಾರಸ್ಥರಲ್ಲದೇ ಹೊರಗಿನ ವ್ಯಾಪಾರಸ್ಥರು ಸಂತೆಯಲ್ಲಿ ವ್ಯಾಪಾರ ನಡೆಸುತ್ತಿದ್ದರು[೨೮೨]. ಸಂತೆಯ ದಿನ ದವಸ-ಧಾನ್ಯ ಇತ್ಯಾದಿಗಳನ್ನು ರಾಶಿ ರಾಶಿಯಾಗಿ ಹಾಕಿ ತೂಗಿ ಎಣಿಸಿ ಇಲ್ಲವೆ ಅಳೆದು ಮಾರುತ್ತಿದ್ದರು[೨೮೩]. ಇಲ್ಲಿ ಸ್ಥಳೀಯ ಉತ್ಪನ್ನಗಳ ಮಾರಾಟದೊಂದಿಗೆ ಹೊರಗಿನಿಂದ ಬಂದ ವಸ್ತುಗಳು ಸೇರುತ್ತಿದ್ದವು. ಹೆಚ್ಚು ಸರಕುಗಳು ಬಂದಾಗ ಬೆಲೆಯು ಕಡಿಮೆಯಾಗಿ ಗ್ರಾಹಕರಿಗೆ ಅನುಕೂಲವಾಗುತ್ತಿತ್ತು[೨೮೪].

ಹೀಗೆ ಸಂತೆಗಳು ಆಧುನಿಕ ಪೂರ್ವಕಾಲದ ಬಹುಮುಖ್ಯ ವ್ಯಾಪಾರ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಹೀಗಾಗಿ ೧೬ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರ ಕಾಲಾವಧಿಯಲ್ಲೂ ಬಹುಮುಖ್ಯ ಮಾರಾಟ ವ್ಯಾಪಾರ ಕೇಂದ್ರಗಳಾಗಿದ್ದವು. ಈ ಅವಧಿಯಲ್ಲಿ ಅನೇಕ ಹೊಸ ಸಮುದಾಯಿಕ ಚಟುವಟಿಕೆಗಳನ್ನು ಹೊಸ ಸಂತೆ ಕೇಂದ್ರಗಳನ್ನು ಸ್ಥಾಪಿಸಲಾಯಿತು. ಈ ಕೇಂದ್ರಗಳು ಗ್ರಾಮೀಣ ಆರ್ಥಿಕ ಚಟುವಟಿಕೆಗಳಲ್ಲಿ ನಿರ್ಣಾಯಕ ಪಾತ್ರವಹಿಸಿದ್ದವು. ಅಲ್ಲದೆ ಗ್ರಾಮೀಣ ಜನತೆಯ ಆರ್ಥಿಕತೆಯ ಭಾಗವಾಗಿ ಹುಟ್ಟಿಕೊಂಡವು. ಸಂತೆ ನಡೆಯುತ್ತಿದ್ದ ಸ್ಥಳಗಳು ಉತ್ಪಾದಕರಿಗೆ, ವರ್ತಕರಿಗೆ ಹಾಗೂ ರೈತರಿಗೆ ಅನುಕೂಲಗಳನ್ನು ಮಾಡಿಕೊಟ್ಟವು. ಬಹುಮುಖ್ಯವಾಗಿ ಇವು ಉತ್ಪಾದಕರು ವಸ್ತುಗಳನ್ನು ವಿನಿಮಯ ಮಾಡಿಕೊಳ್ಳಲು ಹೆಚ್ಚಾಗಿದ್ದನ್ನು ಮಾರಾಟ ಮಾಡಲು ರೂಪುಗೊಂಡಿದ್ದವು.

**ಪಟ್ಟಣಗಳು**

ಪ್ರಾಚೀನ ಭಾರತದ ಅರಸ ಮನೆತನಗಳಂತೆ ವಿಜಯನಗರೋತ್ತರ ಕಾಲದ ಪಾಳೆಯಗಾರರೂ ಸಹ ತಮ್ಮ ರಾಜ್ಯವನ್ನು ಆಡಳಿತದ ಹಿತದೃಷ್ಟಿಯಿಂದ ಹಲವು ಭಾಗಗಳಾಗಿ ವಿಭಾಗಿಸಿ ಆಳ್ವಿಕೆ ನಡೆಸಿರುವುದು ತಿಳಿದಿರುವ ವಿಷಯವೇ. ಇಂತಹ ಶ್ರೇಣೀಕೃತ ವಿಭಾಗದ ಒಂದು ವಿಭಾಗವೇ ನಗರ ಅಥವಾ ಪಟ್ಟಣ. ಸಾಮಾನ್ಯವಾಗಿ ನಗರ ಎಂದರೆ ನಾಗರಿಕರು ವಾಸಿಸುವ ಸ್ಥಳ ಅಥವಾ ಪ್ರದೇಶಕ್ಕೆ ನಗರ ಎಂದು ಕರೆಯಲಾಗಿದೆ. ಅಲ್ಲದೆ ಮುಖ್ಯ ಪಟ್ಟಣ ಅಥವಾ ಪುರ ಎಂದೂ ಕರೆಯಲಾಗಿದೆ. ಶಿವಕೋಟ್ಯಾಚಾರ್ಯರ ವಡ್ಡಾರಾಧನೆಯಲ್ಲಿ ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣ, 'ಮುಖಂಗಳಂ ವಿಹಾರಿಸುತಂ' ಎಂದು ಉಲ್ಲೇಖವಿದೆ. ಪುರ, ನಗರ ಮತ್ತು ಪಟ್ಟಣವೆಂಬ ಪದಗಳು ನಗರ ಅಥವಾ ಪಟ್ಟಣವನ್ನು ಸೂಚಿಸುತ್ತಿತ್ತು[೨೫]. ಇಂತಹ ನಗರ ಮತ್ತು ಪಟ್ಟಣವನ್ನು ಅದರ ವ್ಯಾಪಕತೆ, ಜನಸಂಖ್ಯೆ, ಉದ್ಯೋಗ, ವ್ಯಾಪಾರ-ವಾಣಿಜ್ಯ ಮುಂತಾದ ಆಧಾರಗಳನ್ನು ಗಮನಿಸಿ ನಿರ್ಧರಿಸಲಾಗುತ್ತದೆ. ಪಟ್ಟಣಗಳಲ್ಲಿ ಜನಸಂಖ್ಯೆ, ವರ್ತಕರು ಮತ್ತು ವ್ಯಾಪಾರ ಹೆಚ್ಚಾಗಿರುತ್ತಿತ್ತು[೨೬]. ಸರಳವಾಗಿ ಹೇಳುವುದಾದರೆ ಕೃಷಿಯೇತರ ಚಟುವಟಿಕೆಯ ಕೇಂದ್ರವನ್ನು ನಗರ ಅಥವಾ ಪಟ್ಟಣ ಎಂದು ಕರೆಯಲಾಗಿದೆ.

ನಗರಗಳ ಬೆಳವಣಿಗೆಗೆ ಸಂಬಂಧಿಸಿದಂತೆ ಅವುಗಳ ಕಾರ್ಯ ಚಟುವಟಿಕೆಗಳಿಗನುಗುಣವಾಗಿ ಅವುಗಳನ್ನು ವಿಂಗಡನೆ ಮಾಡಬಹುದಾಗಿದೆ. ಅಂತಹವುಗಳಲ್ಲಿ ವ್ಯಾಪಾರಿ ನಗರಗಳೆಂದು, ರಾಜಕೀಯ ಆಡಳಿತ ಕೇಂದ್ರಗಳು, ಕೋಟೆದುರ್ಗಗಳು, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪಟ್ಟಣಗಳೆಂದು ವಿಂಗಡಿಸಲಾಗಿದೆ. ಹೀಗೆ ವಿಭಾಗಿಸುವಾಗ ಸಂಖ್ಯಾ-ಸಂಖ್ಯೆಯ ನಿಖರ ಮಾಹಿತಿ ಇಲ್ಲದಿರುವುದು ಒಂದು ನ್ಯೂನತೆ ಆದರೂ ಗುಣಾತ್ಮಕ ವ್ಯಾಖ್ಯೆಯಿಂದ ಊರು, ಪಟ್ಟಣ, ನಗರ ಎಂದು ವಿಭಾಗಿಸಲು ಸಾಧ್ಯವಿದೆ. ಸಾಮಾನ್ಯವಾಗಿ ಹರಪನಹಳ್ಳಿ ಪಾಳೆಯಗಾರರು ಸಹ ತಮ್ಮ ಆಡಳಿತಾವಧಿಯಲ್ಲಿ ಅನೇಕ

ಆಡಳಿತ ವಿಭಾಗಗಳನ್ನು ಹೊಂದಿದ್ದರು. ಆದರೆ ಅವುಗಳು ವಿಜಯನಗರ ಅರಸರ ಕಾಲದ ಆಡಳಿತ ವಿಭಾಗಗಳಾಗಿದ್ದವು. ಅಂದರೆ ವಿಜಯನಗರದ ಅರಸರು ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳನ್ನು ಶ್ರೇಣೀಕೃತ ವಿಭಾಗಗಳನ್ನಾಗಿ ವಿಂಗಡಿಸಿದ್ದರು. ಅವುಗಳೆಂದರೆ ರಾಜ್ಯ[೨೯೭], ನಾಡು[೨೯೮], ಮಹಾನಾಡು[೨೯೯], ಸೀಮೆ[೩೦೦], ಸ್ಥಳ[೩೦೧], ವೇಂಠೆ[೩೦೨], ಚಾವಡಿ[೩೦೩], ವಳಿತ[೩೦೪], ಪೇಟೆ[೩೦೫], ಪಟ್ಟಣ,[೩೦೬] ನಗರ[೩೦೭], ಪುರ[೩೦೮], ಗ್ರಾಮ[೩೦೯], ಹಳ್ಳಿ[೩೧೦] ಮುಂತಾದವುಗಳು. ಇವುಗಳಲ್ಲೆ ಕೆಲವು ವಿಭಾಗಗಳನ್ನು ಪಾಳೆಯಗಾರರು ಅಳವಡಿಸಿಕೊಂಡಿದ್ದರು. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ವೇಂಠೆ (ಪೆಂಟೆ), ಪಟ್ಟಡಿ, ಸೀಮೆ, ಪುರ, ರಾಜ್ಯ, ಚಾವಡಿ ಮುಂತಾದವುಗಳ ಉಲ್ಲೇಖ ಶಾಸನಗಳಿಲ್ಲಿ ಕಂಡು ಬಂದಿದೆ.

ವಿಜಯನಗರದ ಅರಸರು ಮತ್ತು ಅವರ ಪ್ರಾಂತೀಯ ಪಾಳೆಯಗಾರರು ಅನೇಕ ಅಗ್ರಹಾರಗಳನ್ನು ಸ್ಥಾಪಿಸಿ ಅವುಗಳನ್ನು ಪುರಗಳನ್ನಾಗಿ ಪರಿವರ್ತಿಸಿ ಅವುಗಳಿಗೆ ದಾನ-ದತ್ತಿಗಳನ್ನು ಬಿಟ್ಟಿರುವುದು ತಿಳಿದು ಬರುತ್ತದೆ. ಕ್ರಿ.ಶ.೧೫೧೦ರಲ್ಲಿ ವೀರಪ್ರತಾಪಸದಾಶಿವರಾಯ ಪಾಂಡ್ಯನಾಡು ಉಚ್ಚಂಗಿ ವೇಂಠೆಗೆ ಸಲ್ಲುವ ಬಿಳಿಚೋಡು ಸೀಮೆಯೊಳಗಿನ ಹೊಸಕೆರೆಯನ್ನು ಗೌರಪುರವೆಂದು[೩೧೧] ಹೆಸರಿಸಿ ಅವುಗಳನ್ನು ಅಗ್ರಹಾರವನ್ನಾಗಿ ನಿರ್ಮಿಸಿದರು. ಕ್ರಿ.ಶ.೧೬೬೦ರಲ್ಲಿ ವೀರಪ್ರತಾಪ ವೆಂಕಟಪತಿದೇವ ಮಹಾರಾಯರ ಕುಮಾರ ಬಾಗಳಿ ಬಸವಪ್ಪನಾಯಕರು ಶ್ರೀದೇವರಿಗೆ ನೀಡಿದ್ದ ಕಸವನಹಳ್ಳಿ ಪುರವರ್ಗವು ಹಾಳು ಬಿದ್ದದುದನ್ನು ಜೀರ್ಣೋದ್ಧಾರ ಮಾಡಿದನು[೩೧೨]. ಕ್ರಿ.ಶ.೧೭೦೧ರಲ್ಲಿ ಸೋಮಶೇಖರನಾಯಕನು ಶೃಂಗೇರಿ ಒಂದನೇ ಸಚ್ಚಿದಾನಂದ ಭಾರತಿಸ್ವಾಮಿಗಳವರ ಮಠಕ್ಕೆ ಹಲವಾಗಿಲು ಬಳಿಯ ಬಸಾಪುರವನ್ನು ಸರ್ವಮಾನ್ಯವಾಗಿ ನೀಡಿದರು[೩೧೩]. ಬಾಗಳಿಯು ಪ್ರಮುಖ ಅಗ್ರಹಾರವಾಗಿ ಆಡಳಿತ ಕೇಂದ್ರ ಮತ್ತು ದೇವಾಲಯ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದಿತ್ತು. ಬಾಗಳಿಯು ಕ್ರಿ.ಶ.೧೩೩೬ರಲ್ಲಿ ೫೦ ಜನರ ಅಗ್ರಹಾರವಾಗಿದ್ದಿತ್ತು[೩೧೪]. ಹರಪನಹಳ್ಳಿ ನಾಯಕ ದಾದೇನಾಯಕನ ಸಹೋದರ ಬಾಗಳಿಯಲ್ಲಿ ಸದಾಶಿವರಾಯನ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನು[೩೧೫]. ಇದರಿಂದಾಗಿ ಕೆಲವು ಕೇಂದ್ರಗಳು ಸುತ್ತಮುತ್ತಲಿನ ಗ್ರಾಮ ಪರಿಸರದಲ್ಲಿ ವಿಶೇಷ ಪ್ರಾಮುಖ್ಯತೆ ಪಡೆದು ವ್ಯಾಪಾರ, ಆರ್ಥಿಕ, ಧಾರ್ಮಿಕ, ರಾಜಕೀಯ ಕೇಂದ್ರಗಳಾದವು. ಕ್ರಮೇಣ ಅವುಗಳು ಪಟ್ಟಣಗಳಾಗಿ ಬೆಳೆದು ಗ್ರಾಮ ಜೀವನಕ್ಕಿಂತ ಭಿನ್ನವಾದ ಬಹು ಚಟುವಟಿಕೆಯ ಕೇಂದ್ರಗಳಾದವು. ಆರ್ಥಿಕ ಚಟುವಟಿಕೆಗಳಿಂದ ಕೂಡಿದ ಕೆಲವು ಪೇಟೆ-ಪಟ್ಟಣಗಳಲ್ಲಿ ಪಟ್ಟಣಸ್ವಾಮಿ, ಸೆಟ್ಟಿ ಎಂಬ ಉಲ್ಲೇಖಗಳು ಶಾಸನಗಳಲ್ಲಿವೆ. ನಗರ ಮತ್ತು ಪಟ್ಟಣಗಳ ಆಡಳಿತ ಸೆಟ್ಟಿ, ಪಟ್ಟಣಸ್ವಾಮಿಗಳೆಂಬ ನಗರಾಧ್ಯಕ್ಷರುಗಳ ಅಧೀನದಲ್ಲಿದ್ದವು[೩೧೬]. ಬಾಗಳಿಯಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಲಕ್ಕಿಸೆಟ್ಟಿ[೩೧೭] ಎಂಬ ಪಟ್ಟಣಸ್ವಾಮಿಯಿದ್ದನು.

ವ್ಯಾಪಾರದ ಪ್ರಕ್ರಿಯೆಯಲ್ಲಿ ಕೋಟೆಗಳ ಪಾತ್ರ ಮಹತ್ವದ್ದಾಗಿತ್ತು. ರಾಜಕೀಯ ಹಾಗೂ ಆರ್ಥಿಕ ಚಟುವಟಿಕೆಗಳನ್ನು ಗಮನಿಸಿದರೆ ಆರ್ಥಿಕ ಪ್ರಕ್ರಿಯೆಯಲ್ಲಿ ಕೋಟೆಗಳ ಪಾತ್ರ ಬಹು ಮುಖ್ಯವಾದುದೆಂದು ತಿಳಿಯಬಹುದಾಗಿದೆ. ಪ್ರಮುಖವಾಗಿ ಪೇಟೆ-ಪಟ್ಟಣ ಹಾಗೂ ವ್ಯಾಪಾರ ಕೇಂದ್ರಗಳನ್ನು ರಕ್ಷಿಸುವುದು ಮತ್ತು ಸಂತೆ ಅಥವಾ ಮಾರುಕಟ್ಟೆಗಳಿಗೆ ಧಾನ್ಯಗಳನ್ನು ಸಾಗಿಸುವುದು ಕೋಟೆಗಳ ಕಾರ್ಯಗಳಾಗಿದ್ದವು. ಕೋಟೆಯ ಒಳಗೆ ಅರಮನೆಗಳು ಆಡಳಿತ ಕಛೇರಿಗಳು ವಸತಿಗಳಿದ್ದರೆ ಕೋಟೆಯ ಸುತ್ತಮುತ್ತ ಪೇಟೆಗಳು ಸ್ಥಾಪಿಸಲ್ಪಟ್ಟಿದ್ದರಿಂದ ಅಂತಹ ಅನೇಕ ಪ್ರದೇಶಗಳು ಪಟ್ಟಣದ ಹಂತಕ್ಕೆ ತಲುಪಿದವು. ಕೋಟೆ ಮತ್ತು ಮಾರುಕಟ್ಟೆಗಳ ನಡುವೆ ನೇರ ಸಂಪರ್ಕವನ್ನು ಕಲ್ಪಿಸಲಾಗಿತ್ತು. ಕೋಟೆಗಳಲ್ಲಿ ದಾಸ್ತಾನು ಮಾಡಿದ ದವಸ ಧಾನ್ಯಗಳನ್ನು ಅವಶ್ಯಕತೆಯಿದ್ದಾಗ ಪಟ್ಟಣಗಳಿಗೆ ರವಾನಿಸಲಾಗುತ್ತಿತ್ತು. ಇದರಿಂದ ಅಭಾವದ ಪರಿಸ್ಥಿತಿಯಲ್ಲಿ ಬೆಲೆ ನಿಯಂತ್ರಣ ಸಾಧ್ಯವಾಗುತ್ತಿತ್ತು. ಹೆದ್ದಾರಿಯ ಮೇಲೆ ಇರುವ ಕೋಟೆಗಳು ನಗರ ಮತ್ತು ಪೇಟೆಗಳಿಗೆ ಹತ್ತಿರವಿದ್ದುದರಿಂದ ಅವುಗಳ ರಕ್ಷಣೆ ಸಾಧ್ಯವಾಯಿತು. ಅಲ್ಲದೆ ವೈರಿಗಳು ಮತ್ತು ದರೋಡೆಕೋರರಿಂದಲೂ ಕೋಟೆಗಳನ್ನು ರಕ್ಷಿಸಲು ಸಾಧ್ಯವಾಯಿತು. ಪ್ರಮುಖವಾಗಿ ಉಚ್ಚಂಗಿದುರ್ಗ ಮತ್ತು ಹರಪನಹಳ್ಳಿಗಳಲ್ಲಿ ಹರಪನಹಳ್ಳಿ ಪಾಳೆಯಗಾರರ ಅವಧಿಯಲ್ಲಿ ಕೋಟೆಗಳು ನಿರ್ಮಾಣವಾದವು. ಇವುಗಳು ಸಾಮಂತರ ವಾಸಸ್ಥಾನಗಳಾಗಿದ್ದು ಸ್ವಯಂ ಆಡಳಿತ ಕೇಂದ್ರಗಳಾಗಿದ್ದವು. ಅಲ್ಲದೆ ಇವುಗಳಿಗೂ ಮಾರುಕಟ್ಟೆಗೂ ನೇರ ಸಂಪರ್ಕವಿದ್ದು ಕೋಟೆಗಳಲ್ಲಿ ವ್ಯಾಪಾರಿಗಳು ದವಸ ಧಾನ್ಯಗಳನ್ನು ಸಂಗ್ರಹಿಸುತ್ತಿದ್ದರು. ದಾದೇನಾಯಕನ ಸಹೋದರ ಬಾಗಳಿ ಕೋಟೆಯಲ್ಲಿ ರಾಮಯ್ಯನಾಯಕನು ವೀರನದುರ್ಗದಲ್ಲಿ ಭರಮಗೌಡನು ಕುರದಗಡ್ಡೆಯಲ್ಲಿ ಬಸವನಾಯಕನು ಹೊಳಲುಕೋಟೆಯಲ್ಲಿ ನೆಲೆಸಿದ್ದನು[೨೧೮]. ಉಚ್ಚಂಗಿದುರ್ಗವು ವಿಜಯನಗರ ಪೂರ್ವದಲ್ಲಿಯೇ ರಾಜಕೀಯ ಮತ್ತು ಧಾರ್ಮಿಕ ಕೇಂದ್ರವಾಗಿತ್ತು. ಹಾಗೆಯೇ ವಿಜಯನಗರ ಕಾಲದಲ್ಲೂ ಅವರ ಆಡಳಿತದ ವೇಂತೆ ವಿಭಾಗವಾಗಿತ್ತು[೨೧೯]. ಹಾಗಾಗಿ ಹರಪನಹಳ್ಳಿಯ ಪಾಳೆಯಗರರ ಮೊದಲ ನಾಯಕ ಅರಸ ದಾದೇನಾಯಕ ಉಚ್ಚಂಗಿಯನ್ನೇ ತನ್ನ ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡನು. ಹಾಗೆಯೇ ಹರಪನಹಳ್ಳಿಯು ಪ್ರಮುಖ ರಾಜಕೀಯ ಕೇಂದ್ರವಾಗಿದ್ದು ಎರಡು ಸುತ್ತಿನ ಕೋಟೆಯನ್ನು ಕಟ್ಟಿದನು[೨೨೦].

ಪಟ್ಟಣಗಳ ಬೆಳವಣಿಗೆಯಲ್ಲಿ ವೀರಶೈವ ಮಠಗಳು ಆಧ್ಯಾತ್ಮಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದವು. ಮಠಗಳಲ್ಲಿ ಗುರುಮಠ ಮತ್ತು ವಿರಕ್ತಮಠಗಳೆಂಬ ಎರಡು ವಿಧಗಳಿದ್ದು ಗುರುಮಠಗಳು ಕೇವಲ ಧಾರ್ಮಿಕ ಮತ್ತು ಶೈಕ್ಷಣಿಕವಾಗಿ ಕಾರ್ಯ ನಿರ್ವಹಿಸಿದರೆ ವಿರಕ್ತಮಠಗಳು ಆರ್ಥಿಕವಾಗಿಯೂ ಪ್ರಮುಖ ಪಾತ್ರವಹಿಸಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪಟ್ಟಣಗಳ ಬೆಳವಣಿಗೆಗೆ ಅತ್ಯುತ್ತಮ

ಕೊಡುಗೆಗಳನ್ನು ನೀಡಿವೆ. ವೀರಶೈವ ಸಮಾಜದ ಬಣಜಿಗರು, ಸೆಟ್ಟರು ಇತ್ಯಾದಿ ವರ್ಗದವರು ವ್ಯಾಪಾರಕ್ಕೆಂದು ಪಟ್ಟಣಗಳಿಗೆ ಬಂದಾಗ ಅಥವಾ ಬೇರೆ ಸಂತೆಗಳಿಗೆ ಹೋದಾಗ ಅನಿವಾರ್ಯವಾಗಿ ಅವರು ಮಠಗಳಲ್ಲಿ ತಂಗುತ್ತಿದ್ದರು. ತಮ್ಮ ಚಕ್ಕಡಿ, ಕುದುರೆ ಹಾಗೂ ಕತ್ತೆಗಳನ್ನು ಮಠದ ಆವರಣದಲ್ಲಿ ಕಟ್ಟಿ ಹಾಕಿ ತಮ್ಮ ಸರಕುಗಳನ್ನು ರಕ್ಷಿಸಿಕೊಳ್ಳುತ್ತಿದ್ದರು. ಅವರೂ ವೀರಶೈವ ಧರ್ಮಾನುಯಾಯಿಗಳಾಗಿದ್ದರಿಂದ ಸ್ನಾನ, ಪೂಜಾದಿಗಳನ್ನು ಮುಗಿಸಿಕೊಂಡು ಗುರುಗಳ ಆಶೀರ್ವಾದ ಪ್ರಸಾದ ಸ್ವೀಕರಿಸಿ ವಾಪಸ್ಸು ಹೋಗುವಾಗ ಮಠಕ್ಕೆ ಕಾಣಿಕೆಗಳನ್ನು ನೀಡುತ್ತಿದ್ದರು. ಹರಪನಹಳ್ಳಿ ಪಾಳೆಯಗಾರರೂ ಸಹ ಮಠಗಳನ್ನು ನಿರ್ಮಾಣ ಮಾಡಿದ್ದರ ಜೊತೆಗೆ ಕೆಲವು ಮಠಗಳಿಗೆ ದಾನವನ್ನು ನೀಡಿದ್ದಾರೆ. ಪ್ರಮುಖವಾಗಿ ಕೂಲಹಳ್ಳಿಯ ಗೋಣಿಬಸವೇಶ್ವರ, ಮುದ್ದಾನೇಶ್ವರ ಮಠಗಳು[೩೧], ಅರಸಿನಮಠ ಮೊದಲ ಬಸವಂತನಾಯಕನು ಶಿವಸಂಗಪ್ಪಯ್ಯಸ್ವಾಮಿಗೆ ಕಟ್ಟಿಸಿಕೊಟ್ಟ ಉಜ್ಜಯನಿಯ ಹಂಚಿನಮಠ[೩೨] ಮುಂತಾದವುಗಳು ಪ್ರಮುಖ ಪಾತ್ರವನ್ನು ವಹಿಸಿವೆ. ಇವುಗಳ ಜೊತೆಗೆ ಹರಪನಹಳ್ಳಿ ಪಟ್ಟಣದ ಚನ್ನಮ್ಮನ ಪೇಟೆಯಲ್ಲಿ ಸುಬೇದಾರ ರಂಗಪ್ಪ ಮಠವನ್ನು ಕಟ್ಟಿಸಿದನು[೩೩].

ನಗರಗಳ ಹುಟ್ಟು ಮತ್ತು ಬೆಳವಣಿಗೆಯಂತೆಯೇ ಅವುಗಳ ಅವನತಿಯೂ ಉಂಟಾಯಿತು. ಆದರೆ ಅವನತಿ ಎನ್ನುವುದು ಎಲ್ಲಾ ನಗರ ಕೇಂದ್ರಗಳಿಗೂ ಒಂದೇ ರೀತಿಯಾಗಿ ಅನ್ವಯಿಸುವುದಿಲ್ಲ. ಹೆಚ್ಚಾಗಿ ರಾಜಧಾನಿ ಪಟ್ಟಣಗಳು ಮತ್ತು ಆಡಳಿತ ಕೇಂದ್ರಗಳು ವಿವಿಧ ಕಾರಣಗಳಿಗಾಗಿ ಅವನತಿಯನ್ನು ಹೊಂದಿರುವುದು ತಿಳಿದು ಬರುತ್ತದೆ. ಪ್ರಮುಖವಾಗಿ ಅರಸು ಮನೆತನಗಳ ನಡುವಿನ ಆಂತರಿಕ ಕಲಹಗಳು ಹೊರ ರಾಜ್ಯಗಳ ಆಕ್ರಮಣಗಳು ವಿವಿಧ ಧರ್ಮಗಳ ನಡುವಿನ ವೈರುಧ್ಯಗಳು ಮುಂತಾದವುಗಳು ನಗರಗಳ ಅವನತಿಗೆ ಕಾರಣವಾಗಿರುವುದು ತಿಳಿದು ಬಂದಿದೆ. ಒಟ್ಟಾರೆ ನಗರಗಳ ಅವನತಿಯೂ ಎಲ್ಲಾ ಹಂತಗಳಲ್ಲಿಯೂ ಸಮಾಜದ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರಿವೆ.

**ತೂಕ ಮತ್ತು ಅಳತೆ**

ವ್ಯಾಪಾರದಲ್ಲಿ ಪದಾರ್ಥಗಳನ್ನು ಅಳೆದು-ತೂಗಿ ಕೊಡುವ ಪದ್ಧತಿ ಜಾರಿಯಲ್ಲಿದ್ದು ಅದರ ಸಾಧನ ಸಲಕರಣೆಗಳಾದ ತೂಕ ಮತ್ತು ಅಳತೆ ಮಾನಗಳ ವಿವೇಚನೆ ತುಂಬಾ ಅಗತ್ಯ. ಪ್ರಾಚೀನ ಕಾಲದಿಂದಲೂ ತೂಕ ಮತ್ತು ಅಳತೆಯ ಸಾಧನಗಳು ಬಳಕೆಯಲ್ಲಿದ್ದು ಕಾಲಕಾಲಕ್ಕೂ ಮುಂದುವರೆದಿವೆ. ಪ್ರಾಚೀನ ಹರಪ್ಪ ಸಂಸ್ಕೃತಿಯಲ್ಲಿ ಅತಿ ಸೂಕ್ಷ್ಮ ಪ್ರಮಾಣದ ತೂಕದ ಮಾನಗಳಿದ್ದುದು ಕಂಡು ಬಂದಿದೆ. ಅಲ್ಲದೆ ಪ್ರಾಚೀನ ಕಾಲದಲ್ಲಿ ತೂಕ ಮತ್ತು ಅಳತೆಗಳನ್ನು ಒಂದೇ ರೀತಿಯಾದವುಗಳೆಂದು ಪರಿಗಣಿಸಲಾಗಿತ್ತು. ಪ್ರಮುಖವಾಗಿ ಧಾನ್ಯಗಳನ್ನು ಇಳುವರಿಯ ಫಲವತ್ತತೆಯ ಭೂಮಿಯನ್ನು ಕೃಷಿ ಸಾಗುವಳಿ ಭೂಮಿಗಳಾದ ಗದ್ದೆ ಮತ್ತು ಹೊಲಗಳ ವಿಸ್ತಾರವನ್ನು ಸೂಚಿಸಲು ಅಳತೆಯ ಸಾಧನಗಳನ್ನು ಬಳಸಲಾಗುತ್ತಿತ್ತು.

ವಚನಗಳಲ್ಲಿ ತೂಗುವ ತಕ್ಕಡಿಗಳನ್ನು 'ತ್ರಾಸ' ಎಂದು ಕರೆಯಲಾಗಿದೆ[೩೨೪]. ಬಣಜಿಗರು ತೂಗಲು ಬೆಣಕವನ್ನು ಬಳಸುತ್ತಿದ್ದರು. ವ್ಯವಹಾರ ಗಣಿತದಲ್ಲಿ ತೂಕವನ್ನು ಭಾರ, ಮಳವೆ, ಪಲ, ಬಿಸಿಗೆ, ಕೂಡಿಗೆ, ಬೆಲ್ಲಿಳಿಗೆಗಳನ್ನು ಉಲ್ಲೇಖಿಸಿದೆ[೩೨೫]. ಜಿ.ಆರ್.ಕುಪ್ಪಸ್ವಾಮಿಯವರು ತಮ್ಮ ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯಲ್ಲಿ ಭೂಮಿಯನ್ನು ಅಳೆಯಲು ಕಮ್ಮ ಅಥವಾ ಕಂಬ, ಮತ್ತರ್, ಕುಳ; ಅಕ್ಕಡಿ, ಮಾರುಗಳನ್ನು ಬಳಸಲಾಗುತ್ತಿತ್ತೆಂದು ತಿಳಿಸಿದ್ದಾರೆ[೩೨೬]. ಧಾನ್ಯಗಳ ತೂಕ ಮತ್ತು ಅಳತೆ ಮಾಡಲು ಖಂಡುಗ, ಕೊಳಗ, ಬಳ್ಳ, ಸೇರುಗಳಿದ್ದವು. ಬಸವಣ್ಣನವರ ವಚನದಲ್ಲಿ ಉಲ್ಲೇಖವಾದ ಉದ್ದಳತೆ ಹೀಗಿದೆ[೩೨೭]. ೧೨ ಅಂಗುಲ–೧ ಗೇಣು, ೨ ಏಣು–೧ ಮೊಳ, ೨ ಮೊಳ – ೧ ಹಸ್ತ, ೨ ಹಸತ–೧ ಮಾರು, ೨ ಮಾರು–೧ ಜಂಪೆ, ೭೭೦ ಜಂಪೆ–೧ ಪದದಾಯಿ ಇತ್ಯಾದಿ.

ಈ ಕಾಲದಲ್ಲಿ ದಾನ ನೀಡಿದ ಭೂಮಿಯ ಪ್ರಮಾಣವನ್ನು ಸೂಚಿಸಲು ನಿವರ್ತನ[೩೨೮], ಮತ್ತರು[೩೨೯], ಕಂಬ[೩೩೦], ಖಂಡುಗ[೩೩೧], ಕೊಳಗ[೩೩೨], ಗಳ[೩೩೩], ಕುಳ[೩೩೪] ಮುಂತಾದ ಪದಗಳು ವಿಸ್ತೃತವಾಗಿ ಬಳಕೆಯಾಗಿವೆ. ನಿವರ್ತನ ಎಂಬುದು ವಿಶೇಷವಾಗಿ ಸಂಸ್ಕೃತ ಶಾಸನಗಳಲ್ಲಿ ಬಳಸಲ್ಪಟ್ಟಿದ್ದು ಕನ್ನಡ ಶಾಸನಗಳಲ್ಲಿ ಇದನ್ನು ಮತ್ತರ್ ಎಂದು ಬಳಸಲಾಗಿದೆ ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ನಿವರ್ತನ, ಕಂಬ, ಮತ್ತರು, ನೀಳಗಳು ಅಳತೆಗಳಾಗಿದ್ದು ಕೋಲುಗಳನ್ನು ಅಳತೆ ಮಾನವಾಗಿ ಬಳಸುತ್ತಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಖಂಡುಗ, ಮಣಕೊಳಗ, ಕುಳಗಳು, ಬೀಜುವರಿ ಆಧಾರಿತ ಮಾಪನ ಘಟಕಗಳಾಗಿವೆ. ಉಳುವ ಭೂಮಿಯನ್ನು ಕಮ್ಮ ಅಥವಾ ಮತ್ತರ್ ಎಂಬ ಭೂಮಾಪನ ಅಳತೆಯ ಮಾಪನದಿಂದ ನಿರ್ಧರಿಸಲಾಗುತ್ತದೆ. ಕಮ್ಮ ಮತ್ತರ್‌ನ ಉಪ ವಿಭಾಗವಾಗಿದ್ದು[೩೩೫] ಕೃಷಿ ಭೂಮಿಯ ಅಳತೆಗಳಲ್ಲಿ ಹೆಚ್ಚು ಬಳಕೆಯಾಗಿರುವ ಭೂಮಾಪನವಾಗಿದೆ. ಕಮ್ಮ ಮತ್ತು ಮತ್ತರು ಒಣ ಮತ್ತು ನೀರಾವರಿ ಭೂಮಿಗಳೆರಡನ್ನು ಅಳೆಯಲು ಬಳಸಲಾಗಿದೆ[೩೩೬]. ಶಿ.ರಾಜೇಂದ್ರಪ್ಪನವರು ಲಕ್ಷ್ಮೇಶ್ವರ ಶಾಸನವನ್ನು ಆಧರಿಸಿ ಲೆಕ್ಕ ಮಾಡಿ ಒಂದು ಮತ್ತರು ಇಂದಿನ ಮೂರು ಮುಕ್ಕಾಲು ಎಕರೆಗೆ = ಮೂರ ಐವತ್ತು ಕುಂಟೆಗೆ=ಒಂಭೈನೂರು ಕಮ್ಮಗಳಿಗೆ ಸಮವೆಂದು ತಿಳಿಸುತ್ತಾರೆ[೩೩೭].

ಸಾಗುವಳಿ ಭೂಮಿಯನ್ನು ಬೀಜುವರಿ ಪದ್ಧತಿಯಲ್ಲಿ ಅಳತೆ ಮಾಡಲಾಗುತ್ತಿತ್ತು. ಒಂದು ಖಂಡುಗ ಇಪ್ಪತ್ತು ಕೊಳಗಳಿಗೆ ಸಮನಾದರೆ[೩೩೮], ಒಂದು ಕೊಳಗ ಎಂಟು ಸೇರಿಗೆ ಸಮ[೩೩೯]. ಅಂದರೆ ಬೀಜುವರಿ ಎಂದರೆ ಇಷ್ಟು ಪ್ರಮಾಣದ ಬೀಜವನ್ನು ಬಿತ್ತುವಂತಹ ಭೂಮಿಯೆಂದು ತಿಳಿಯಲಾಗಿದೆ. ಒಕ್ಕಳ[೩೪೦], ವಕ್ಕುಳ[೩೪೧], ಇಕ್ಕುಳ[೩೪೨], ಕುಳ,[೩೪೩] ಗಳ[೩೪೪], ಮುಂತಾದ ಅಳತೆಗಳಲ್ಲಿಯೂ ಭೂಮಿಯನ್ನು ದಾನ ನೀಡಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಕುಳ ಎಂಬುದು ನೇಗಿಲು ಎಂದಾದರೆ ಒಂದು ದಿನ ನೇಗಿಲಿನಲ್ಲಿ ಬಿತ್ತುವ ಬೀಜದ ಪ್ರಮಾಣವನ್ನು ಸೂಚಿಸಲು ಒಕ್ಕಳ, ನಾಗುಳ ಮುಂತಾದ ಶಬ್ದಗಳನ್ನು ಬಳಸಿರಬಹುದೆಂದು ತಿಳಿಯಲಾಗಿದೆ. ಇಂತಹ ಭೂಅಳತೆಯ ಮಾಪನಗಳು

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಕಾಣಬಹುದಾಗಿದೆ. ಬಾಗಳಿ ಹರಿಯಾಮ್ಮಾಜಿ ಚಂದ್ರಗಿರಿದುರ್ಗದಲ್ಲಿ ಕ್ರಿ.ಶ.೧೭೧೧ರಲ್ಲಿ ಶ್ರೀರಂಗರಾಯದೇವ ಮಹಾರಾಯರು ಆಳ್ವಿಕೆ ನಡೆಸುತ್ತಿದ್ದಾಗ ಅರಮನೆ ಪುರೋಹಿತರಾದ ಶ್ರೀ ನಾಗದೇವಭಟ್ಟರಿಗೆ ಅಲಗಿಲವಾಡದಲ್ಲಿ ವಕ್ಕುಳ ಗದ್ದೆಯನ್ನು ದಾನ ನೀಡಿ ಶಾಸನ ಹಾಕಿಸಿದ್ದಾಳೆ[೩೪೫]. ಹಾಗೆಯೇ ದೇವಣಭಟ್ಟರು, ಹನುಮಂತಭಟ್ಟರು, ಪದ್ಮನಾಭಭಟ್ಟರು ಹಾಗೂ ನರಸಿಂಹಭಟ್ಟರಿಗೆ ತಾವು ಕೊರೆಗಲ್ಲು ಕಾಲ್ವೆಯ ಕಟ್ಟಿಸಿದ ನಿಮಿತ್ತ ಕೋಗಳಿ ಪೆಂಟಕೆ ಸಲ್ಲುವ ನಾರಾಯಣದೇವರಕೆರೆ ಪಟ್ಟಡಿಯೊಳು ಆಸ್ವೇರಿಯಲ್ಲಿ ಗದ್ದೆ ಬೀಜುವರಿ ಎರಡು ವಕ್ಕುಳ, ನಾಗಣ್ಣಭಟ್ಟರಿಗೆ ಇಕ್ಕುಳ ಭೂಮಿಯನ್ನು ದಾನ ನೀಡಿ ಶಾಸನ ಹಾಕಿಸಿದ್ದಾಳೆ[೩೪೬]. ಉಳಿದಂತಹವುಗಳನ್ನು ಶಾಸನಗಳು ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

ಭೂಮಿಯಂತೆ ದವಸ ಧಾನ್ಯಗಳನ್ನು ಅಳೆಯುವ ಪದ್ಧತಿ ಪ್ರಾಚೀನ ಕಾಲದಿಂದ ಮೆಟ್ರಿಕ್ ಪದ್ಧತಿ ಬಳಕೆಗೆ ಬರುವವರೆಗೆ ರೂಢಿಯಲ್ಲಿತ್ತು. ಹಿಂದಿನ ಕಾಲದಲ್ಲೂ ಧಾನ್ಯಗಳನ್ನು ಅಳೆಯಲು ಬಳ್ಳ, ಕೊಳಗಗಳನ್ನು ಉಪಯೋಗಿಸುತ್ತಿದ್ದರು. ಬಾಗಳಿಯ ಮುಮ್ಮಡಿ ಬಸಪ್ಪನಾಯಕ ೪೧ ಸೇರು ಎಂದಿದೆ[೩೪೭]. ಹಾಗೆಯೇ ಇವರ ಕಾಲದಲ್ಲಿ ಮಣ, ಸೇರು[೩೪೮], ಗಿದ್ದನ ಪಡಿ[೩೪೯], ಕೊಳಗ, ಬೀಜವರಿ[೩೫೦], ಇಕ್ಕುಳ ಅಥವಾ ವಕ್ಕುಳ[೩೫೧] ಎಂಬ ಅಳತೆಯ ಮಾಪನವನ್ನು ಬಳಸುತ್ತಿದ್ದುದು ತಿಳಿದು ಬಂದಿದೆ.

**ಸಾರಿಗೆ ಸಂಪರ್ಕ**

ವ್ಯಾಪಾರ-ವಾಣಿಜ್ಯ ಅಭಿವೃದ್ಧಿಗೆ ಸಾರಿಗೆ ವ್ಯವಸ್ಥೆ ಬಹುಮುಖ್ಯವಾದುದು. ಈ ಕಾಲದಲ್ಲೂ ವ್ಯಾಪಾರ-ವಾಣಿಜ್ಯಕ್ಕೆ ಉತ್ತಮ ಸಾರಿಗೆ ವ್ಯವಸ್ಥೆಯಿತ್ತೆಂದು ತಿಳಿಯಬಹುದಾಗಿದೆ. ಹರಪನಹಳ್ಳಿ, ಬಾಗಳಿ, ಉಚ್ಚಂಗಿದುರ್ಗ ನಾರಾಯಣದೇವರಕೆರೆ, ಹಂಪಾಪಟ್ಟಣ ತಂಬ್ರಹಳ್ಳಿ, ಮುಖ್ಯ ಪಟ್ಟಣಗಳು ಹಾಗೂ ರಾಜಕೀಯ ಕೇಂದ್ರಗಳಾಗಿದ್ದರಿಂದ ಉತ್ತಮ ಸಾರಿಗೆ ವ್ಯವಸ್ಥೆಯನ್ನು ಹೊಂದಿದ್ದವು. ಕೆಲವು ದಾಖಲೆಗಳ ಪ್ರಕಾರ ಹರಪನಹಳ್ಳಿಯೊಂದಿಗೆ ಮುಖ್ಯ ಪಟ್ಟಣಗಳು ಉತ್ತಮ ರಸ್ತೆ ಸಂಪರ್ಕವನ್ನು ಹೊಂದಿದ್ದವು[೩೫೨]. ಈ ಒಳನಾಡಿನ ರಸ್ತೆಗಳು ಅಷ್ಟೊಂದು ಉತ್ತಮ ಸ್ಥಿತಿಯಲ್ಲಿರಲಿಲ್ಲ[೩೫೩]. ಒಳನಾಡಿನ ವ್ಯಾಪಾರವು ಅಗ್ಗವಾಗಿದ್ದು ಕಾವಡಿ, ತಲೆಹೊರೆ, ಕುದುರೆ, ಎತ್ತು ಮತ್ತು ಕತ್ತೆಗಳ[೩೫೪] ಮೇಲೆ ಸಾಮಾನುಗಳ ಸಾಗಣಿಕೆ ನಡೆಯುತ್ತಿತ್ತು[೩೫೫]. ವಿದೇಶಿ ಪ್ರವಾಸಿಗಳಾದ ಬಾರ್ಬೋಸ್[೩೫೬] ಫಯಾಸ್[೩೫೭] ನ್ಯೂನಿಜ್‌ರು[೩೫೮] ಹೇರು ಹೊರುವ ಪ್ರಾಣಿಗಳನ್ನು ಹೆಸರಿಸಿದ್ದಾರೆ.

ಬಂಡಿ ಒಂದು ಉತ್ತಮ ಸಂಚಾರಿ ವಾಹನ ಹಾಗೂ ಹೇರು ಹೊರುವ ಸಾಧನವಾಗಿತ್ತು[೩೫೯]. ಚಕ್ಕಡಿ ಅಥವಾ ಬಂಡಿ ಬಹು ಪ್ರಾಚೀನ ಕಾಲದಿಂದಲೂ ಜನಸಾಮಾನ್ಯರ ಪ್ರಯಾಣದ ಮತ್ತು ಸರಕು ಸಾಗಾಣಿಕೆಯ ಸಾಧನವಾಗಿತ್ತು[೩೬೦]. ಬಾರ್ಬೋಸ್, ನ್ಯೂನಿಜ್, ಫಯಾಸ್, ನಿಕಾಲೋಕಾಂಟಿಯವರು

ತಮ್ಮ ಬರವಣಿಗೆಗಳಲ್ಲಿ ಅಂದಿನ ಸಾಗಾಣಿಕೆಯ ಪ್ರಮುಖ ಸಂಚಾರಿ ವಾಹನ ಎತ್ತಿನ ಗಾಡಿಯಾಗಿತ್ತೆಂದು ತಿಳಿಸಿದ್ದರೆ[೩೬೧]. ಬಾರ್ಬೋಸ್ ವ್ಯಾಪಾರಿಗಳು ಮತ್ತು ಮಲಬಾರಿಗಳು ಎತ್ತು ಕತ್ತೆಗಳ ಮೇಲೆ ಸಾಮಾನುಗಳನ್ನು ಸಾಗಿಸುತ್ತಿದ್ದರೆಂದು ತಿಳಿಸಿದ್ದಾನೆ. ಹಾಗೆಯೆ ಫಯಾಸ್ ಅರಮನೆಯ ಮುಂದಿನ ಮೈದಾನದಲ್ಲಿ ದವಸ ಧಾನ್ಯಗಳನ್ನು ತುಂಬಿದ್ದ ಬಂಡಿಗಳು ಚಲಿಸುತ್ತಿದ್ದುದನ್ನು ಕಂಡಿದ್ದಾಗಿ ಹೇಳಿದ್ದಾನೆ[೩೬೨]. ಎತ್ತಿನಗಾಡಿ, ಎಮ್ಮೆಗಾಡಿ, ಕುದುರೆಗಾಡಿ, ಕತ್ತೆ ಮುಂತಾದವುಗಳು ಜನ ಸಾಮಾನ್ಯರ ಪ್ರಯಾಣದ ಮತ್ತು ಸರಕು ಸಾಗಾಣಿಕೆಯ ಸಾಧನಗಳಾಗಿದ್ದವು[೩೬೩] ಎಂದು ತಿಳಿಯಬಹುದಾಗಿದೆ. ಹರಪನಹಳ್ಳಿ ಪಾಳೆಯಗಾರ ಮೊದಲ ಅರಸ ದಾದೇನಾಯಕನ ಕಾಲದಲ್ಲಿ ಹರಪನಹಳ್ಳಿ ಪಟ್ಟಣದ ಸಂತೆಯಲ್ಲಿನ ಕುರುಸಾನಿ ಕಲ್ಲುಗಳನ್ನು ಹರಪನಹಳ್ಳಿಯಿಂದ ಹರಿಹರಕ್ಕೆ ವ್ಯಾಪಾರಿಗಳು ಕತ್ತೆಗಳ ಮೇಲೆ ಸಬರ ಹಾಕಿ ಸಾಗಿಸುತ್ತಿದ್ದರೆಂದು[೩೬೪] ತಿಳಿದು ಬಂದಿದೆ. ಒಟ್ಟಿನಲ್ಲಿ ಸಾರಿಗೆ ವ್ಯವಸ್ಥೆಯ ಸಮರ್ಪಕ ನಿರ್ವಹಣೆ ರಾಜ್ಯದ ಅಭಿವೃದ್ಧಿಗೆ ಸಹಕಾರಿಯಾಗಿತ್ತೆಂದು ಸ್ಪಷ್ಟವಾಗುತ್ತದೆ.

**ಕೈಗಾರಿಕೆಗಳು**

ವ್ಯವಸಾಯದಷ್ಟೇ ಪ್ರಾಮುಖ್ಯತೆಯನ್ನು ಇತರ ಉತ್ಪಾದನಾ ವೃತ್ತಿಗಳು ಪಡೆದುಕೊಂಡಿದ್ದವು. ಭೂಮೂಲದ ಕಚ್ಚಾ ಪದಾರ್ಥಗಳನ್ನು ಅವರು ಬಳಸಿಕೊಳ್ಳುತ್ತಿದ್ದುದರಿಂದ ಅವು ಒಂದನ್ನೊಂದು ಅವಲಂಬಿಸಿದ್ದವು. ಪ್ರಾಚೀನ ಕರ್ನಾಟಕದಲ್ಲಿ ಅನೇಕ ಕೈಗಾರಿಕೆಗಳಿಗೆ ಅವಕಾಶ ಮತ್ತು ಪ್ರಾಮುಖ್ಯತೆಯನ್ನು ನೀಡಲಾಗಿತ್ತು. ಕೈಗಾರಿಕೆಗಳು ಬೆಳವಣಿಗೆಯಾಗಬೇಕಾದರೆ ಪ್ರಮುಖವಾಗಿ ಕಚ್ಚಾ ವಸ್ತುಗಳು ಬೇಕಾಗುತ್ತದೆ. ಅವುಗಳಲ್ಲಿ ಕೃಷಿ ಮೂಲಕ ಸಾಕಷ್ಟು ಕಚ್ಚಾ ವಸ್ತುಗಳು ಉತ್ಪನ್ನವಾಗುತ್ತಿದ್ದವು. ಅವುಗಳಲ್ಲಿ ಹತ್ತಿ, ಕನ್ನು, ಎಣ್ಣೆ ಬೀಜಗಳು ಹಾಗೂ ರೇಷ್ಮೆಗಳು ಪ್ರಮುಖವಾಗಿದ್ದವು. ಇಲ್ಲವೆ ಪ್ರಕೃತಿದತ್ತವಾದ ಮರಗಳು ಅರಣ್ಯ ವಸ್ತುಗಳು ಮತ್ತು ಖನಿಜಗಳನ್ನು ಬಳಸಿಕೊಂಡು ಕೈಗಾರಿಕೆಗಳನ್ನು ನಡೆಸುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರ ಕಾಲದ ಹೆಚ್ಚಿನ ಉದ್ದಿಮೆಗಳು ಕೃಷಿ ಆಧಾರಿತವಾಗಿದ್ದವೆಂದು ತಿಳಿದು ಬರುತ್ತದೆ. ಎಣ್ಣೆ, ಬೆಲ್ಲ, ಸಕ್ಕರೆ, ಬಟ್ಟೆ ಕೈಗಾರಿಕೆಗಳು ಕೃಷಿ ಆಧಾರಿತ ಉದ್ದಿಮೆಗಳಾಗಿದ್ದವು. ಇವುಗಳಲ್ಲದೆ ಮರದ ಕೆಲಸ, ಮಡಿಕೆ ತಯಾರಿಕೆ, ಆಭರಣಗಳು, ಯುದ್ಧೋಪಕರಣಗಳು ಹಾಗೂ ಕೃಷಿ ಉಪಕರಣಗಳ ತಯಾರಿಕೆ ಮುಂತಾದ ಕೈಗಾರಿಕೆಗಳು ಉತ್ಪಾದನೆಯಲ್ಲಿ ತೊಡಗಿದ್ದವು. ಕೃಷಿಯನ್ನು ಬಿಟ್ಟರೆ ಕೈಮಗ್ಗದಿಂದ ಬಟ್ಟೆಯನ್ನು ತಯಾರಿಸುವುದು ಪ್ರಮುಖ ಕೈಗಾರಿಕೆಯಾಗಿದ್ದು ಸಾಮ್ರಾಜ್ಯದ ಎಲ್ಲಾ ಕೇಂದ್ರಗಳಲ್ಲಿಯೂ ಈ ಉದ್ದಿಮೆಗಳಿದ್ದವೆಂದು[೩೬೫], ಕೈಮಗ್ಗಗಳಿಂದ ದಾರ, ಹತ್ತಿಬಟ್ಟೆ ಹಾಗೂ ರೇಷ್ಮೆ ಬಟ್ಟೆಗಳನ್ನು ತಯಾರಿಸುತ್ತಿದ್ದರೆಂದು[೩೬೬] ಪ್ರವಾಸಿಗ ಫ್ರಾನ್ಸಿಸ್ ಬುಕನಾನ್ ದಾವಣಗೆರೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಹತ್ತಿಬಟ್ಟೆ ಮತ್ತು ಕಂಬಳಿಯನ್ನು ತಯಾರಿಸಲಾಗುತ್ತಿತ್ತೆಂದು ಮಾಹಿತಿ ನೀಡಿದ್ದಾನೆ[೩೬೭]. ಹರಪನಹಳ್ಳಿಯಲ್ಲಿ ಕುರುಬರು ಉತ್ತಮವಾದ

ನಯವಾದ ಕಂಬಳಿ[೩೬೮], ಕರಿಯ ಕಂಬಳಿ[೩೬೯] ಮತ್ತು ನಾಡಕಂಬಳಿ[೩೭೦]ಯನ್ನು ತಯಾರಿಸಿ ೪೦-೫೦ ರೂಪಾಯಿಗೊಂದರಂತೆ ಮಾರುತ್ತಿದ್ದರೆಂದು ವರದಿಯಲ್ಲಿದೆ. ಈ ಕಂಬಳಿಗಳಿಗೆ ದೇಶದ ಎಲ್ಲಾ ಭಾಗಗಳಲ್ಲಿ ಬೇಡಿಕೆಯಿತ್ತು[೩೭೧].

ಎಳ್ಳು, ಶೇಂಗಾ, ಔಡಲ, ಕುಸುಮೆ ಮುಂತಾದ ಎಣ್ಣೆ ಉತ್ಪಾದನಾ ಬೆಳೆಗಳನ್ನು ಅಂದಿನ ರೈತರು ಬೆಳೆಯುತ್ತಿದ್ದರು. ಇದಕ್ಕೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಬಹುತೇಕ ಕೆರೆಗಳು ತುಂಬಿ ಹರಿಯುತ್ತಿದ್ದುದೇ ಕಾರಣ. ರೈತರು ತಾವು ಬೆಳೆದ ಔಡಲ, ಕುಸುಬಿ, ಶೇಂಗಾಗಳನ್ನು ಎಣ್ಣೆ ಗಾಣಕ್ಕೆ ಒಯ್ದು ತಮಗೆ ಬೇಕಾಗುವಷ್ಟು ಎಣ್ಣೆಯನ್ನು ಪಡೆಯುತ್ತಿದ್ದರು[೩೭೨]. ಹಾಗಾಗಿ ಎಣ್ಣೆ ಉತ್ಪಾದನೆ ಅಂದಿನ ಮತ್ತೊಂದು ಉದ್ದಿಮೆಯಾಗಿತ್ತು. ಈ ವೃತ್ತಿಗಳಲ್ಲಿ ತೊಡಗಿರುವವರನ್ನು ತೆಲ್ಲಿಗ, ಗಾಣಿಗ, ತೆಲ್ಲಿಗಾರ ಎಂದು ಕರೆಯಲಾಗುತ್ತಿತ್ತು[೩೭೩]. ಹರಪನಹಳ್ಳಿ ತಾಲ್ಲೂಕಿನ ಒಂದು ಗ್ರಾಮವನ್ನು ತೆಲಗಿ ಎಂದು ಕರೆಯಲಾಗಿದ್ದು 'ತೆಲ್ಲಿಗೇರಿ' ಎಂಬುದು ತೆಲ್ಲಿಗರು ಗ್ರಾಮದ ಒಂದು ಭಾಗದಲ್ಲಿ ವಾಸಿಸುತ್ತಿದ್ದುದನ್ನು ಸೂಚಿಸುತ್ತದೆ[೩೭೪]. ಎಣ್ಣೆ ಪದಾರ್ಥಗಳನ್ನು ಗಾಣ[೩೭೫], ಕೈಗಾಣ[೩೭೬], ಎತ್ತುಗಾಣ[೩೭೭], ಮರದ ಹೇರುಗಾಣ[೩೭೮], ಕಲ್ಲುಗಾಣ[೩೭೯]ಗಳಲ್ಲಿ ಹರಳು(ಔಡಲ)[೩೮೦] ಹೊಂಗೆ[೩೮೧], ಕೊಬ್ಬರಿ[೩೮೨], ಎಳ್ಳು[೩೮೩], ಕುಸುಬೆ, ಕವುಂಗು, ಬೇವು, ಹೊಂಗೆ, ತೆಂಗು, ಸಾಸಿವೆ, ಹಿಪ್ಪೆ, ಗೇರು, ವಿಳಂಗ, ವಂಕಲೆ[೩೮೪] ಬೀಜಗಳಿಂದ ಎಣ್ಣೆ ಪಡೆಯುತ್ತಿದ್ದರೆಂದು ರಾಬರ್ಟ್ ಸಿವೆಲ್ ತಿಳಿಸುತ್ತಾನೆ[೩೮೫]. ಹಗರಿಬೊಮ್ಮನಹಳ್ಳಿ ನಾರಾಯಣದೇವರಕೆರೆ ಎಣ್ಣೆ ತಯಾರಿಕಾ ಕೇಂದ್ರಗಳಾಗಿದ್ದವು.

ಈ ಕಾಲದಲ್ಲಿ ರೈತರು ತಮ್ಮ ಗದ್ದೆಗಳಲ್ಲಿ ರಸ್ತಾಳೆ, ಬ್ಯಾಟರಿ, ಕಬ್ಬುಗಳನ್ನು ಸಾಕಷ್ಟು ಬೆಳೆಯುತ್ತಿದ್ದರು. ಸಾಮೂಹಿಕವಾಗಿ ರೈತರು ತಮ್ಮ ತಮ್ಮ ಗ್ರಾಮಗಳಲ್ಲಿ ಬೇಸಿಗೆ ಕಾಲದಲ್ಲಿ ಎತ್ತಿನ ಗಾಣಗಳಿಂದ ಆಲೆಮನೆ ಸ್ಥಾಪಿಸುತ್ತಿದ್ದರು. ತಮ್ಮ ಕುಟುಂಬಕ್ಕೆ ಒಂದು ವರ್ಷಕ್ಕೆ ಬೇಕಾಗುವಷ್ಟು ಬೆಲ್ಲವನ್ನು ಇಟ್ಟುಕೊಂಡು ಉಳಿದುದನ್ನು ಸಂತೆಯಲ್ಲಿ ಮಾರುತ್ತಿದ್ದರು. ಶಾಸನಗಳಲ್ಲಿ ಕಬ್ಬನ್ನು[೩೮೬] ಗಾಣವನ್ನು[೩೮೭] ಉಲ್ಲೇಖಿಸಿರುವುದರಿಂದ ಅಲ್ಲಿ ಹೇರಳವಾಗಿ ಬೆಳೆಯುತ್ತಿದ್ದರೆಂದು ತಿಳಿಯಲಾಗಿದೆ. ಈ ಕಾಲದ ರೈತರು ತಾವು ಬೆಳೆದ ಕಬ್ಬನ್ನು ಗ್ರಾಮಗಳ ಪಕ್ಕದಲ್ಲಿ ಬಯಲು ಪ್ರದೇಶಗಳಲ್ಲಿ ಆಲೆಮನೆಗಳನ್ನು ಸ್ಥಾಪಿಸಿ ಗಾಣದಲ್ಲಿ ಹಾಕಿ ಬೆಲ್ಲವನ್ನು ತಯಾರಿಸುತ್ತಿದ್ದರು.

ಕಮ್ಮಾರ, ಬಡಗಿ, ಅಕ್ಕಸಾಲಿಗ ಮುಂತಾದ ಕುಶಲಕರ್ಮಿ ವರ್ಗಗಳೂ ಇದ್ದವು. ಕಮ್ಮಾರರು ಲೋಹದ ಉಪಕರಣಗಳನ್ನು ತಯಾರಿಸುತ್ತಿದ್ದರು. ಪ್ರಮುಖವಾಗಿ ಹಾರೆ, ಗುದ್ದಲಿ, ಕುಡುಗೋಲು ಮೊದಲಾದ ಕೃಷಿ ಉಪಕರಣಗಳನ್ನು ಖಡ್ಗ, ಈಟಿ, ಕವಚ, ಶೂಲ, ಬಾಣ, ಶಿರಸ್ತ್ರಾಣ, ಗಂಡುಕೊಡಲಿ, ಸುತ್ತಿಗೆ ಮೊದಲಾದ ಯುದ್ಧಾಯುಧಗಳನ್ನು ಕುಲುಮೆಗಳಲ್ಲಿ ತಯಾರಿಸುತ್ತಿದ್ದರು. ಐತಿಹಾಸಿಕ ಹಾಗೂ ಸಾಂಸ್ಕೃತಿಕ ವೈಭವದ ಸಿರಿವಂತಿಕೆಯ ಹರಪನಹಳ್ಳಿ ತಾಲ್ಲೂಕಿನ ಮಾಡಲಗೇರಿ

ಹರಪನಹಳ್ಳಿ ಪಾಳೆಯಗಾರರಿಗೆ ಎರಡೂವರೆ ಶತಮಾನಗಳ ಕಾಲ ಶಸ್ತ್ರಾಸ್ತ್ರಗಳನ್ನು ತಯಾರಿಸಿ ಕೊಟ್ಟ ಕೀರ್ತಿಗೆ ಪಾತ್ರವಾಗಿದೆ. ಗ್ರಾಮದಲ್ಲಿ ತಯಾರಿಸುತ್ತಿದ್ದ ಉತ್ತಮ ಗುಣಮಟ್ಟದ ಖಡ್ಗ, ಕತ್ತಿ, ಕವಚ, ಶಿರಸ್ತ್ರಾಣ ಮತ್ತಿತರ ಆಯುಧಗಳಿಗೆ ದಕ್ಷಿಣಭಾರತದಲ್ಲಿ ಹೆಚ್ಚಿನ ಬೇಡಿಕೆಯಿದ್ದು ಅನೇಕ ರಾಜಮನೆತನಗಳು ಬೇಡಿಕೆ ಸಲ್ಲಿಸಿ ಇಲ್ಲಿಂದ ಆಯುಧಗಳನ್ನು ತರಿಸಿಕೊಳ್ಳುತ್ತಿದ್ದ ಬಗ್ಗೆ ಇತಿಹಾಸದ ದಾಖಲೆಗಳು ತಿಳಿಸುತ್ತವೆ[೩೮೮]. ಹರಪನಹಳ್ಳಿ ಪಾಳೆಯಗಾರರ ದೊರೆ ರಾಜಸೋಮಶೇಖರನಾಯಕನ ಸೈನ್ಯ ರಣರಂಗದಲ್ಲಿ ಎದುರಾಳಿ ಸೈನ್ಯದೊಂದಿಗೆ ಸೆಣಸಿ ಗೆಲುವು ಪಡೆಯುವಲ್ಲಿ ಇಲ್ಲಿನ ಖಡ್ಗಗಳು ಪ್ರಮುಖ ಪಾತ್ರವಹಿಸಿದ್ದವು[೩೮೯]. ಈ ಪ್ರದೇಶ ಕ್ರಿ.ಶ.೧೫೬೭ರಿಂದ ೧೮೦೦ರವರೆಗೆ ಹರಪನಹಳ್ಳಿ ಪಾಳೆಯಗಾರರಿಗೆ ಸೇರಿತ್ತು[೩೯೦]. ಈಗಲೂ ಪಕ್ಕದ ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಸೇರಿದಂತೆ ನೆರೆಯ ಗದಗ ಜಿಲ್ಲೆಯ ಕೆಲಭಾಗಗಳಲ್ಲಿ ಇಲ್ಲಿ ತಯಾರಾದ 'ಅರ'ದ ಕುಡುಗೋಲುಗಳಿಗೆ ಬಾರೀ ಬೇಡಿಕೆಯಿದೆ ಪ್ರಸಿದ್ಧಿಯಾಗಿವೆ. ಕೆ. ಕಲ್ಲಹಳ್ಳಿ ಕುಲುಮರ ಹಳ್ಳಿ ಎಂದೇ ಪ್ರಸಿದ್ಧಿಯಾಗಿತ್ತು.

ಹರಪನಹಳ್ಳಿ ಪಾಳೆಯಗಾರ ದೊರೆಗಳು ರಾಜ್ಯಭಾರ ನಡೆಸಿದ ಮತ್ತೊಂದು ವೀರ ಪರಂಪರೆ ಮತ್ತು ಸಾಂಸ್ಕೃತಿಕ ಸಿರಿವಂತಿಕೆಯ ಸೊಬಗಿನ ಸೀಮೆ ಅಲಗಿಲವಾಡ. ಇದಕ್ಕೆ ಮೊದಲು 'ಅರಗಿನವಾಡಿ' [ಅರಗು ತಯಾರಿಸುವ ಹಳ್ಳಿ] ಎಂದು ಕ್ರಮೇಣ ಅರಗಿನವಾಡ, ನಂತರ ಈಗ ಅಲಗಿಲವಾಡ ಎಂದು ಕರೆಯಲ್ಪಟ್ಟಿದೆ. ಹರಪನಹಳ್ಳಿ ಪಾಳೆಯಗಾರರಿಗೆ ಅರಗಿನ ಆಯುಧಗಳನ್ನು ತಯಾರಿಸಿ ಕೊಡುತ್ತಿದ್ದ ಪ್ರಮುಖ ಗ್ರಾಮ ಎಂಬುದು ಸ್ಥಳೀಯರಾದ ಚಂದ್ರಶೇಖರಪಾಟೀಲ್‌ರ ಹೇಳಿಕೆ ಈಗಲೂ ಈ ಎರಡೂ ಸ್ಥಳಗಳಲ್ಲಿ ಕುಲುಮೆಗಳಿರುವುದು ಕಂಡು ಬಂದಿವೆ. ಕೆಲವರ ಮನೆಯಲ್ಲಿ ಕತ್ತಿ, ಖಡ್ಗಗಳು ಸಂಗ್ರಹಿಸಲ್ಪಟ್ಟಿವೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅವುಗಳನ್ನು ಛಾಯಾಚಿತ್ರ ಮಾಡಿಕೊಂಡಿದ್ದೇನೆ. ಖಡ್ಗಗಳಲ್ಲಿ ಬೇರೆ ಬೇರೆ ರೀತಿಯ ಕೈಹಿಡಿಗಳನ್ನು ಕಾಣಬಹುದು. ಕೆ. ಕಲ್ಲಹಳ್ಳಿ, ಗುಂಡುಗತ್ತಿ ಕೈಗಾರಿಕಾ ಕೇಂದ್ರಗಳಾಗಿದ್ದವು.

ಕಂಚುಗಾರರು ದಿನನಿತ್ಯದ ಪಾತ್ರೆಗಳು, ಲೋಹದ ಮೂರ್ತಿಗಳು ಹಾಗೂ ಸಣ್ಣ ಯಂತ್ರಗಳನ್ನು ತಯಾರಿಸುತ್ತಿದ್ದರು[೩೯೨]. ಮುಮ್ಮಡಿ ಬಸಪ್ಪನಾಯಕನು ಉಚ್ಚಂಗಿದುರ್ಗದ ದೇವಾಲಯಕ್ಕೆ ಕಂಚುಗಾರ ದುಂಡಪ್ಪನ ಮಗ ನಾಗಪ್ಪನಿಂದ ಗಂಟೆ ಮಾಡಿಸಿ ದಾನ ನೀಡಿದನು[೩೯೩]. ಅಕ್ಕಸಾಲಿಗರು ಆಭರಣಗಳನ್ನು ತಯಾರಿಸುವ ಕುಶಲಕರ್ಮಿಗಳಾಗಿದ್ದರು. ಇವರನ್ನು ಪಾಂಚಾಳರು[೩೯೪] ಎಂದು ಕರೆಯಲಾಗುತ್ತಿತ್ತು. ಶಾಸನಗಳಲ್ಲಿ ಇವರ ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಅವರುಗಳಲ್ಲಿ ಶ್ರೀಹರಿಹರದೇವರ ಮನೆಯ ಅಕ್ಕಸಾಲೆ ನೀರ ವಿರೋಜನ ಮಗ ಕರಿಯತಿಪ್ಪೋಜ[೩೯೫] ಅಕ್ಕಸಾಲಿಕರಿಯಪ್ಪ[೩೯೬] ಇತ್ಯಾದಿ ಬಡಗಿ[೩೯೭]ಗಳು ಮರದಿಂದ ವಿವಿಧ ರೀತಿಯ ಉಪಕರಣಗಳಾದ ಮನೆಯ ಪೀಠೋಪಕರಣಗಳು, ರಥ, ಕೃಷಿ ಉಪಕರಣಗಳಾದ ನೇಗಿಲು, ನೊಗ, ಕುಂಟೆ, ಕೂರಿಗೆ, ಎತ್ತಿನಬಂಡಿ, ಬೆಲೆ ಬಾಳುವ ಶ್ರೀಗಂಧ, ತೇಗ, ಹೊನ್ನೆ, ಬೀಟೆ, ಮರಗಳಿಂದ ದೇವಾನುದೇವತೆಯರ

ಮೂರ್ತಿಗಳು, ಗೊಂಬೆಗಳು, ಪ್ರಾಣಿಪಕ್ಷಿಗಳ ಚಿತ್ರಗಳು ಮುಂತಾದವುಗಳನ್ನು ತಯಾರಿಸುತ್ತಿದ್ದರು. ಶಾಸನಗಳಲ್ಲಿ ಕುರುಡಿಯ ಬಡಗಿ ಮಲ್ಲೋಜ[೩೯೮] ಮುತ್ತಿಗೆಯ ಬಡಗಿ ದೇವೋಜ[೩೯೯] ಎಂಬ ಹೆಸರುಗಳ ಉಲ್ಲೇಖವಿದೆ.

ಹೀಗೆ ಉತ್ಪಾದನೆ ಮಾತ್ರವಲ್ಲದೆ ಅವುಗಳ ವ್ಯಾಪಾರವನ್ನು ನಡೆಸುತ್ತಿದ್ದರು. ತಮ್ಮ ಸುತ್ತಮುತ್ತಲೂ ಸಿಗುವ ಪ್ರಾಕೃತಿಕ ಕಚ್ಚಾವಸ್ತುಗಳನ್ನೇ ಬಳಸಿಕೊಂಡು ಕೈಗಾರಿಕೆಗಳನ್ನು ನಡೆಸುತ್ತಿದ್ದರು. ತಾವೇ ಸ್ವಂತವಾಗಿ ಮಾರುಕಟ್ಟೆಗಳನ್ನು ಏರ್ಪಡಿಸಿಕೊಂಡು ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ಹೊಂದಿ ಗುಣಮಟ್ಟದ ಜೀವನವನ್ನು ನಡೆಸುತ್ತಿದ್ದರು. ಪೇಟೆ-ಪಟ್ಟಣಗಳು ವಿಸ್ತರಣೆಯಾದಂತೆ ಕೃಷಿ ಆಧಾರಿತ ಕೈಗಾರಿಕೆಗಳು ಸ್ಥಾಪನೆಯಾದವು. ಕೈಗಾರಿಕೆಗಳ ವಿಸ್ತರಣೆಯೂ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತಂದು ಕೊಡುತ್ತಿದ್ದವು ಎಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಈ ವೃತ್ತಿಗಳನ್ನು ನಿರ್ವಹಿಸುವ ವ್ಯಕ್ತಿಗಳು ಜಾತಿ ಆಧಾರಿತವಾಗಿ ಸಮಾಜದ ಕೆಳಸ್ತರದಲ್ಲಿ ಗುರುತಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

**ತೆರಿಗೆ ಪದ್ಧತಿ**

ಒಂದು ರಾಜ್ಯದ ಅಭಿವೃದ್ಧಿಯ ಮಾನದಂಡವನ್ನು ಸಾಮಾನ್ಯವಾಗಿ ಅಲ್ಲಿನ ಅರ್ಥವ್ಯವಸ್ಥೆಯ ಆಧಾರದ ಮೇಲೆ ಪರಿಗಣಿಸಲಾಗುತ್ತದೆ. ಈ ಮಾನದಂಡ ಪ್ರಾಚೀನ ಕಾಲದಿಂದ ಪ್ರಸ್ತುತ ದಿನಗಳವರೆಗೂ ರೂಢಿಯಲ್ಲಿದ್ದು ಸಮಾಜದ ಮೇಲೆ ಮಹತ್ವದ ಪರಿಣಾಮ ಬೀರಿರುವುದನ್ನು ಚರಿತ್ರೆಯುದ್ದಕ್ಕೂ ಕಂಡು ಬರುತ್ತದೆ. ಆದರೆ ಅದು ಕಾಲದಿಂದ ಕಾಲಕ್ಕೆ ಅಥವಾ ರಾಜಮನೆತನದಿಂದ ರಾಜಮನೆತನಕ್ಕೆ ಭಿನ್ನವಾಗಿರಬಹುದು. ಸ್ಥಳೀಯ ರಾಜರು ತಮ್ಮ ಆಡಳಿತದ ಸುಗಮಕ್ಕಾಗಿ ವಿಕೇಂದ್ರೀಕರಣ ನೀತಿಯನ್ನು ಅನುಸರಿಸಿ ಅನೇಕ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಈ ಅಧಿಕಾರಿಗಳು ತಮಗೆ ವಹಿಸಿದ್ದ ನಿರ್ದಿಷ್ಟ ಕಾರ್ಯವನ್ನು ನಿರ್ವಹಿಸಬೇಕಾಗಿತ್ತು. ಅದರಲ್ಲಿ ತೆರಿಗೆ ಅಥವಾ ಸುಂಕ ಪದ್ಧತಿಯೂ ಒಂದು.

ನಮ್ಮ ದೇಶದಲ್ಲಿ 'ತೆರಿಗೆ ವ್ಯವಸ್ಥೆ' ಎಂಬುದು ವೇದಗಳ ಕಾಲದಿಂದಲೂ ಜಾರಿಯಲ್ಲಿದ್ದುದ್ದು ಕಂಡು ಬಂದಿದೆ. ಆದರೆ ಆ ಕಾಲದಲ್ಲಿ ಶುಲ್ಕ, ಬಲಿ ಮುಂತಾದ ತೆರಿಗೆಗೆ ಸಂಬಂಧಿಸಿದ ಪದಗಳ ಬಳಕೆ ಕಂಡ ಬಂದರೂ ತೆರಿಗೆಯ ವೈವಿಧ್ಯತೆ ಇದ್ದ ಬಗ್ಗೆ ಯಾವ ಉಲ್ಲೇಖಗಳು ದೊರೆಯುವುದಿಲ್ಲ. ಈ ಅರ್ಥ ವ್ಯವಸ್ಥೆ ರಾಜ್ಯದ ಅರ್ಥ ವ್ಯವಸ್ಥೆಗೆ ಒಂದು ನಿರ್ದಿಷ್ಟವಾದ ರೂಪ ದೊರೆತಿದ್ದು ಮೌರ್ಯರ ಕಾಲದಲ್ಲಿ. ಕೌಟಿಲ್ಯನ ಅರ್ಥಶಾಸ್ತ್ರ ಗ್ರಂಥ ಅರ್ಥ ವ್ಯವಸ್ಥೆಯ ಸ್ವರೂಪ ಮತ್ತು ಅವರ ಎರಡು ಅಂಗಗಳಾದ ತೆರಿಗೆಯ ಸಂಗ್ರಹಣೆ ಮತ್ತು ಸಾರ್ವಜನಿಕ ವೆಚ್ಚದ ಬಗ್ಗೆ ವಿವರವಾದ ವಿವರಣೆ ನೀಡುತ್ತದೆ. ಹೀಗಾಗಿ ಮೌರ್ಯರ ಅರ್ಥ ವ್ಯವಸ್ಥೆಯನ್ನು ಮುಂದೆ ಕರ್ನಾಟಕವನ್ನಾಳಿದ ಕದಂಬ,

ಗಂಗ, ಹೊಯ್ಸಳರಾದಿಯಾಗಿ ವಿಜಯನಗರ ಮತ್ತು ವಿಜಯನಗರೋತ್ತರ ನಾಯಕ ಅರಸರು ಸಹ ತಮ್ಮ ಅರ್ಥ ವ್ಯವಸ್ಥೆಯಲ್ಲಿ ಅಳವಡಿಸಿಕೊಂಡದ್ದನ್ನು ಶಾಸನಗಳು ಹಾಗೂ ಸಾಹಿತ್ಯಿಕ ಆಧಾರದಿಂದ ತಿಳಿಯಬಹುದಾಗಿದೆ. ತೆರಿಗೆಯನ್ನು ಸಾಮಾನ್ಯವಾಗಿ ಭೂಕಂದಾಯ, ಕೃಷಿ ಮೂಲದ ತೆರಿಗೆ, ಕೃಷಿಯೇತರ ತೆರಿಗೆಗಳ ಮೂಲಕ ಸಂಗ್ರಹಿಸಲಾಗುತ್ತಿತ್ತು.

**ಭೂಕಂದಾಯ**

ರಾಜ್ಯಾದಾಯದಲ್ಲಿ ಹೆಚ್ಚಿನ ತೆರಿಗೆ ಸಂಗ್ರಹವಾಗುತ್ತಿದ್ದು ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆಯಿಂದ. ಕೃಷಿ ಪ್ರಧಾನವಾದ ಭಾರತದಲ್ಲಿಯೂ ಇದು ಅನಿವಾರ್ಯವಾಗಿತ್ತು. ಇದು ಭೂಮಿಯ ಸಾಗುವಳಿ ಕಾಡಾರಂಬ [ಒಣಬೇಸಾಯ] ನೀರಾರಂಬ [ಗದ್ದೆಬೇಸಾಯ] ತೋಟರಂಬ [ಬಾಗಾಯ್ತು] ಮತ್ತು ಕಮರಿ ಸ್ಥಳ ವರ್ಗಾಯಿಸು ಬೇಸಾಯ] ಫಲವತ್ತತೆ [ಉತ್ತಮ ಮಧ್ಯಮ ಕನಿಷ್ಟ] ಮತ್ತು ಅಳತೆ [ರಾಯರೇಖೆ[೪೦೦] ಬೀಜವರಿ[೪೦೧] ಖಂಡುಗ, ಕೊಳಗ, ಸಲಗೆ, ಬಳ, ಮುಡಲ]ಯ ಪ್ರಮಾಣಕ್ಕುಗುಣವಾಗಿ ನಿರ್ಧಾರಿತವಾಗುತ್ತಿತ್ತು. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಹೊಲವನ್ನು ಅಳೆಯಲು ಅಳತೆ ಕೋಲನ್ನು ಬಳಸುತ್ತಿದ್ದರು. ಭೂ ಅಳತೆ ಮಾಡಲು ಶಾನುಭೋಗರೆಂಬ ಅಧಿಕಾರಿಗಳು ನೇಮಕರಾಗಿದ್ದು ಅವರಿಗೆ ಸುಬೇದಾರರೆಂಬ ಮೇಲಾಧಿಕಾರಿಗಳಿದ್ದರು. ಶಾಸನಗಳು ಉಲ್ಲೇಖಿಸುವ ಭೂಮಾಪನಗಳಿಂದಾಗಿ ಮೌಲ್ಯಮಾಪನ ಮಾಡಿದ ನಂತರವೇ ತೆರಿಗೆ ಪ್ರಮಾಣವನ್ನು ನಿರ್ಧರಿಸಲಾಗುತ್ತಿತ್ತು. ಇದನ್ನು ಸೂಕ್ತಿ 'ಸಿದ್ಧಾಯ'ವೆಂದು[೪೦೨] ಕರೆದಿದೆ. ಶಾಸನಗಳಲ್ಲಿ ಕಂಡು ಬರುವ ಕರಭೂಮಿ, ಹೊಲದೆರೆ ಅಥವಾ ಗೆಯ್ಯದೆರೆ, ಆರುವಣ, ದಶವಂದ, ಮೂರಲೊಂದು ಪಣ ಮುಂತಾದವು ಭೂಕಂದಾಯವನ್ನು ಸೂಚಿಸುವ ಪದಗಳಾಗಿವೆ[೪೦೩]. ಸಿದ್ಧಾಯವೆಂಬುದು ಫಲವತ್ತಾದ ಭೂಮಿಯ ಮೇಲೆ ವಿಧಿಸುತ್ತಿದ್ದ ವಾರ್ಷಿಕ ಕಂದಾಯವಾಗಿದ್ದು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರೆದಿದೆ. ಇದನ್ನು ಕೃಷಿಯ ಆದಾಯವೆನ್ನುತ್ತಾರೆ[೪೦೪].

ಕಂದಾಯವನ್ನು ವಿಧಿಸುವ ವಿಚಾರವನ್ನು ಕೆಲವು ದಾಖಲೆಗಳು ವಿವಿಧ ರೀತಿಯ ಅಭಿಪ್ರಾಯಗಳನ್ನು ದಾಖಲಿಸಿವೆ. ಮನುವಿನ ಹೇಳಿಕೆಯಂತೆ 'ರಾಜನು ಜಮೀನಿನ ಒಟ್ಟು ಉತ್ಪನ್ನದ ಒಂದು ಭಾಗಕ್ಕೆ ಅರ್ಥ ಸಾಮಾನ್ಯವಾಗಿ ಆರನೆಯ ಒಂದು ಭಾಗವೆಂದು ನಿಗದಿಪಡಿಸಿರುವ ರಾಜನ ಭಾಗ ಕೆಲವು ವೇಳೆ ೧೨ನೆಯ ಒಂದು ಕೂಡಾ ಆಗಬಹುದು. ಈ ಹೋಲಿಕೆಯನ್ನು ತಾತ್ವಿಕ ದೃಷ್ಟಿಯಲ್ಲಿ ಮಾತ್ರ ಪರಿಗಣಿಸಬಹುದು. ಪೋರ್ಚುಗಲ್ ಪ್ರವಾಸಿ ನ್ಯೂನಿಜ್ ರಾಜನಿಗೆ ಸೇರಿದ ಭೂಮಿಯನ್ನು ದಂಡನಾಯಕರು ಪಡೆದುಕೊಂಡು ಅವರು ಅದನ್ನು ರೈತರಿಗೆ ವಹಿಸಿಕೊಡುತ್ತಾರೆ. ಇದಕ್ಕೆ ಪ್ರತಿಯಾಗಿ ರೈತರು ದಂಡನಾಯಕರಿಗೆ ೧೦ನೆಯ ೯ ಭಾಗ ನೀಡುತ್ತಾರೆ. ದಂಡನಾಯಕರು ಇದರಲ್ಲಿ ಅರ್ಧಪಾಲನ್ನು ರಾಜನಿಗೆ ಸಲ್ಲಿಸುತ್ತಾರೆ ಎಂದು ತಿಳಿಸಿದ್ದಾನೆ[೪೦೫].

ಹರಪನಹಳ್ಳಿ ಪಾಳೆಯಗಾರರು ಆರಂಭದಲ್ಲಿ ವಿಜಯನಗರ ಅರಸರ ಸಾಮಂತರಾಗಿದ್ದರಿಂದ ಅವರ ತೆರಿಗೆ ಪದ್ಧತಿಯನ್ನೇ ಅನುಸರಿಸಿದರು. ಇವರ ಕಾಲದಲ್ಲೂ ಭೂಕಂದಾಯವೇ ರಾಜ್ಯಾದಾಯದ ಬಹುಮುಖ್ಯ ಮೂಲವಾಗಿದ್ದು ಇನ್ನಿತರ ತೆರಿಗೆಗಳನ್ನು ಸಹ ಪ್ರಜೆಗಳು ನೀಡುತ್ತಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಈ ನಾಯಕರು ಕೂಡ ಭೂಮಿಯ ಫಲವತ್ತತೆಯ ಅಧಾರದ ಮೇಲೆ ಕಂದಾಯವನ್ನು ವಿಧಿಸುತ್ತಿದ್ದರು. ಶಾಸನಗಳಲ್ಲಿ ಹೊಲ, ಎರೆಹೊಲ, ಬೀಜವರಿಗದ್ದೆ, ಇಕ್ಕಳಗದ್ದೆ, ವಕ್ಕಳಗದ್ದೆ, ತೋಡಗಳ ಉಲ್ಲೇಖಗಳಿರುವುದರಿಂದ ಭೂಮಿಯ ವಿವಿಧ ಗುಣ, ಫಲವತ್ತತೆ, ನೀರಾವರಿ ಅನುಕೂಲಕ್ಕೆ ಅನುಗುಣವಾಗಿ ತೆರಿಗೆ ವಿಧಿಸುತ್ತಿದ್ದರೆಂದು ತಿಳಿದು ಬರುತ್ತದೆ. ವಿಜಯನಗರ ಅರಸರಂತೆ ನಾಯಕ ಅರಸರೂ ಕೂಡಾ ತೆರಿಗೆ ವಸೂಲಿಗಾಗಿ ಅನೇಕ ಅಧಿಕಾರಿಗಳನ್ನು ನೇಮಿಸಿಕೊಂಡಿದ್ದರು. ಅವರುಗಳಲ್ಲಿ ರಾಜಮಾನ್ಯ ಸುಬೇದಾರ ರಂಗಪ್ಪ[೪೦೬], ರಾವುತ ಬಸವಯ್ಯ[೪೦೭], ಸುಂಕದ ಚನ್ನಬಸಪ್ಪ[೪೦೮] ಗೌಡ[೪೦೯], ಶಾನುಭೋಗ, ಪುರೋಹಿತರು[೪೧೦] ಪ್ರಮುಖರಾಗಿದ್ದಾರೆ. ಹರಪನಹಳ್ಳಿ ಪಾಳೆಯಗಾರರು ಅನೇಕ ಚಿಕ್ಕ ಗ್ರಾಮಗಳನ್ನು ಸೇರಿಸಿ ಒಂದೊಂದು ಕಂದಾಯ ಗ್ರಾಮವೆಂದು ಪರಿಗಣಿಸಿ ವರ್ಷದಲ್ಲಿ ಕೆಲ ತಿಂಗಳುಗಳನ್ನು ಕಂದಾಯದ ವಸೂಲಿಗಾಗಿ ಗೊತ್ತುಪಡಿಸುತ್ತಿದ್ದರು. ಗೌಡರು ಗ್ರಾಮದ ಚಾವಡಿಯಲ್ಲಿ ಬೆಳಗಿನಿಂದ ಸಂಜೆಯವರೆಗೆ ಕುಳಿತು ಕಂದಾಯ ವಸೂಲಿ ಮಾಡಿ ರಸೀದಿ ಕೊಡುತ್ತಿದ್ದರು. ಗೌಡರಿಗೆ ನೆರವಾಗಲು ತಳವಾರರು ಇರುತ್ತಿದ್ದರು. ಗೌಡರು ಸಂಗ್ರಹವಾದ ಹಣವನ್ನು ಬೊಕ್ಕಸದವರ ಬಳಿ ಜಮಾ ಮಾಡುತ್ತಿದ್ದರು. ಬೊಕ್ಕಸದವರು ವಸೂಲಿಯಾದ ಕಂದಾಯದ ಹಣವನ್ನು ಅರಸರ ಖಜಾನೆಗೆ ತುಂಬಿ ಲೆಕ್ಕ ಬರೆದಿಡುತ್ತಿದ್ದರು. ಉಚ್ಚಂಗಿದುರ್ಗದ ಘಂಟೆ ಶಾಸನದಲ್ಲಿ ಬೊಕ್ಕಸದ ಕೋನಯ್ಯನ ಹೆಸರು ಪ್ರಸ್ತಾಪಿಸಲ್ಪಟ್ಟಿದೆ. ಕೋನಯ್ಯನ ವಂಶದವರು ಹರಪನಹಳ್ಳಿಯಲ್ಲಿ ಈಗಲೂ ಇದ್ದಾರೆ.

ಭೂಕಂದಾಯದ ಪಾಲು ಮಹತ್ತರವಾಗಿದ್ದು ಅವುಗಳನ್ನು ಕರ, ದೆರೆ[೪೧೧], ತೆರೆ, ಸುಂಕ[೪೧೨], ಸಿದ್ಧಾಯ ಕಂದಾಯ[೪೧೩], ಸುವರ್ಣದಾಯ[೪೧೪], ಕುಳತೆರಿಗೆ[೪೧೫] ಎಂಬ ಅನೇಕ ಹೆಸರುಗಳಿಂದ ಕರೆಯುತ್ತಿದ್ದರು. ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಇದೇ ರೀತಿಯ ಹೆಸರುಗಳನ್ನು ಕಾಣಬಹುದು. ಗ್ರಾಮ ಅಥವಾ ಹಳ್ಳಿ ಭೂತೆರಿಗೆಯ ಆಡಳಿತ ನಿರ್ವಹಣೆಯ ಮೂಲ ಘಟಕವಾಗಿದ್ದು ಗ್ರಾಮದಿಂದ ಮೇಲ್ಪಟ್ಟು ಸ್ಥಳ[೪೧೬], ನಾಡು[೪೧೭], ಸೀಮೆ[೪೧೮], ವೆಂತೆ[೪೧೯], ಚಾವಡಿ[೪೨೦], ವಳಿತ[೪೨೧]ಗಳಿದ್ದವು. ಇದೇ ರೀತಿಯ ವಿಭಾಗಗಳನ್ನು ಹರಪನಹಳ್ಳಿ ನಾಯಕರ ಕಾಲದಲ್ಲೂ ಕಂಡು ಬಂದಿರುವುದು ಶಾಸನಗಳಿಂದ ತಿಳಿದು ಬರುತ್ತದೆ.

ಹರಪನಹಳ್ಳಿ ಪಾಳೆಯಗಾರರು ಧಾರ್ಮಿಕ ಕಾರ್ಯಗಳಿಗೆ ಅಥವಾ ಅಗ್ರಹಾರಕ್ಕೆ ಭೂಕಂದಾಯವನ್ನು ದಾನವಾಗಿ ನೀಡುತ್ತಿದ್ದ ವಿಚಾರ ತಿಳಿದು ಬಂದಿದೆ. ಬಾಗಳಿ ಸೋಮಶೇಖರನಾಯಕರ ಬಸಪ್ಪನಾಯಕರು ಕೃಷ್ಣಾಚಾರ್ಯರಿಗೆ ಕೋಗಳಿ ಪೆಂಟೆಗೆ ಸಲ್ಲುವ

ಕೊಟ್ಟೂರು ಸೀಮೆಯೊಳಗಣ ಮಾದಿಹಳ್ಳಿ ಪಟ್ಟಡಿ ಬೂದಿಹಾಳ್ ಗ್ರಾಮವನ್ನು ಅಗ್ರಹಾರ ಮಾಡಿರುವುದರಿಂದ ಕುಂಟೆ ಎರಡಕ್ಕೆ ಎಂಟು ಗೌಡ ಮಾನ್ಯ ಜೂಡಿಯಿಂದ ಹದಿಮೂರು ಕಾಶಾವರ್ಗದಲ್ಲಿ ಎರಡು ಅಂತು ೨೪ ವರಹ ಭೂಮಿಯನ್ನು ಇದಕ್ಕೆ ಸಲ್ಲುವ ಮನೆ, ವಕ್ಕಲು, ಕಣ, ಹಿತ್ತಲು, ಕೋಟೆ ಮುಂತಾದವುಗಳನ್ನು ಶಿವಾರ್ಪಿತವಾಗಿ ಕೊಟ್ಟಿದ್ದೇವೆ. ಮೇಲಾಗಿ ಸುಂಕ, ಕುರಿದೆರೆಗೆ, ಪೊಳೆಪೊಮ್ಮು, ಜೂಡಿ ಮನ್ಯಗಾಣಿಕೆಗೆ ಆ ಕಾಲಚಕ್ರದಲ್ಲಿ ಪಟ್ಟ, ಪಗಡಿ ಮುಂತಾದ ಸಕಲ ಬಾಬನ್ನು ಹಾಕಿ ಕೊಟ್ಟಿದ್ದೇವೆ. ಇವನ್ನು ನಿಮ್ಮ ಪುತ್ರ ಪವುತ್ರ ಪರಂಪರೆಯಲ್ಲಿ ಅನುಭವಿಸಿಕೊಂಡು ಬರುವುದು[೪೨೨] ಎಂದು ಭೂದಾನ ಪತ್ರದಲ್ಲಿ ತಿಳಿಸಿದ್ದಾನೆ.

ಕ್ರಿ.ಶ.೧೭೨೯ರ ನಿಚ್ಚವ್ವನಹಳ್ಳಿ ಶಾಸನವು ಬಾಗಳಿ ಬಸವಪ್ಪನಾಯಕನ ಸುಭೇದಾರ ರಂಗಪ್ಪನಿಗೆ ರಾಜ್ಯದ ಆದಾಯ ಬರುವ ಹಾಗೆ ಮಾಡಿದ್ದರಿಂದ ಇವನಿಗೆ ಗಡಿ ನಿಚ್ಚಾಪುರ ಗ್ರಾಮವನ್ನು ದಾನವಾಗಿ ಶಿವಾರ್ಪಿತವಾಗಿ ಕೊಟ್ಟಿದ್ದೇವೆ. ಈ ಗ್ರಾಮದಲ್ಲಿ ಉಂಟಾದ ನಿಧಿ ನಿಕ್ಷೇಪ ಜಲಪಾಷಣ ಆಗಾಮಿ ಸಿದ್ಧಿ ಸಾಧ್ಯಾರಿಗಗಳೆಂಬ ಅಷ್ಟಭೋಗ ತೇಜೋಪಾರ್ಜನೆಯನ್ನು ಆಗ ಮಾಡಿಕೊಂಡು ಆಚಂದ್ರಾರ್ಕ ಸ್ಥಾಯಿಗಳಾಗಿ ಸುಖದಲ್ಲಿ ಇರುವುದು. ಇದಲ್ಲದೆ ಈ ಗ್ರಾಮದ ಸ್ಥಾನಮಾನ್ಯ, ದೇಶಾಯಿಕೆ, ನಾಡತಳವಾರಿಕೆ, ಆಯಮಾನ್ಯ, ವರ್ತನೆ, ಅರೆರವಳಿ, ಮೊಗಲರಹಟ್ಟಿ, ಭಮಾದಳಿ, ಧರಣದಪಳಿ, ಬೆಟಕೆ, ದವಸ, ಕಣಜ ಮುಂತಾದ ಸಕಲ ಹೊನ್ನನ್ನು ಪಾಲಿಸಿ ಕೊಟ್ಟಿದ್ದೇವೆ[೪೨೩] ಎಂದು ಉಲ್ಲೇಖಿಸುತ್ತದೆ.

ಭೂ ಕಂದಾಯ ವಸೂಲಾತಿಯ ವೇಳೆ ಅರಸರು ಸ್ಥಳೀಯ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಹೋಗುತ್ತಿದ್ದರು. ಭೂಕಂದಾಯವನ್ನು ವಸ್ತುಗಳು ಹಾಗೂ ನಗದು ರೂಪದಲ್ಲಿ ಪಡೆಯುತ್ತಿದ್ದರು[೪೨೪]. ಕ್ರಮೇಣ ಭೂಕಂದಾಯವನ್ನು ಧಾನ್ಯ ಮತ್ತು ಹಣದ ರೂಪದಲ್ಲಿ ಪಡೆಯುವ ಪದ್ಧತಿ ಪ್ರಮುಖವಾಗಿ ಆಚರಣೆಗೆ ಬಂತು. ನಗದನ್ನು ಪಣ[೪೨೫], ಹೊನ್ನು[೪೨೬], ಗದ್ಯಾಣ[೪೨೭] ಮತ್ತು ವರಹ[೪೨೮] ಎಂಬ ನಾಣ್ಯಗಳ ರೂಪದಲ್ಲಿ ನೀಡುವ ಕಂದಾಯದಲ್ಲಿ ಅಕ್ಕಿ, ರಾಗಿ, ಜೋಳ, ಹಾಗೂ ಇನ್ನಿತರ ದ್ವಿದಳ ಧಾನ್ಯಗಳನ್ನು ಪಡೆಯುತ್ತಿದ್ದರು. ಭೂಕಂದಾಯ ನಿಗದಿ ಹಾಗೂ ವಸೂಲಿಯಲ್ಲಿ ರಾಜನು ಪ್ರಮುಖ ಪಾತ್ರ ನಿರ್ವಹಿಸುತ್ತಿದ್ದನು. ಆದರೆ ಈ ಕಾರ್ಯದ ನಿರ್ವಹಣೆಗಾಗಿ ಕಂದಾಯ ಮಂತ್ರಿಯ ಸಹಾಯವನ್ನು ಪಡೆದುಕೊಳ್ಳುತ್ತಿದ್ದನು. ಇವನ ಅಧೀನದಲ್ಲಿ ಇನ್ನು ಅನೇಕ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದರು. ಅವರುಗಳಲ್ಲಿ ಪಾರುಪತ್ಯಗಾರ, ಸುಬೇದಾರ, ಅಠವಣೆ, ಕರಣಿಕ, ಕುಲಕರ್ಣಿ, ಅವಸರದವ ಮುಂತಾದವರು ಪ್ರಮುಖರಾಗಿದ್ದು ವಿವಿಧ ತೆರಿಗೆಗಳ ವಿಭಾಗಗಳನ್ನು ನೋಡಿಕೊಳ್ಳುತ್ತಿದ್ದರು[೪೨೯].

**ಕೃಷಿ ಮೂಲದ ತೆರಿಗೆಗಳು**

ಈ ಕಾಲದಲ್ಲಿ ಕೃಷಿಯೇ ಪ್ರಧಾನವಾಗಿದ್ದು ಇದಕ್ಕೆ ಪೂರಕವಾದ ನೀರಾವರಿ ಬೇಸಾಯಕ್ಕೆ ಅಗತ್ಯವಾದ ಕೆರೆ, ಕಾಲುವೆ, ನಿರ್ಮಾಣಕ್ಕೆ ವಿಶೇಷ ಪ್ರಾಧಾನ್ಯತೆ ನೀಡಲಾಗಿತ್ತು. ಸಂತೆ, ಪೇಟೆಗಳಲ್ಲಿನ ವ್ಯಾಪಾರದಿಂದಾಗಿ ಕೃಷಿ ಉತ್ಪನ್ನಗಳಿಗೆ ಹೆಚ್ಚು ಬೇಡಿಕೆಯಿದ್ದು ಸರ್ಕಾರಕ್ಕೆ ಹೆಚ್ಚು ಆದಾಯ ತರುತ್ತಿತ್ತು. ಇವರ ಕಾಲದಲ್ಲಿ ಪ್ರಮುಖವಾಗಿ ಬಾಗಳಿ, ಹರಪನಹಳ್ಳಿ, ಉಚ್ಚಂಗಿದುರ್ಗ, ಹಗರಿಬೊಮ್ಮನಹಳ್ಳಿ ಕೊಟ್ಟೂರು, ನಾರಾಯಣದೇವರಕೆರೆ ಮುಂತಾದ ಸ್ಥಳಗಳಲ್ಲಿ ಸ್ಥಳೀಯ ಮಾರುಕಟ್ಟೆಗಳಿದ್ದು ಇಲ್ಲಿಗೆ ಬರುವ ವಸ್ತುಗಳ ಮೇಲೆ ಸುಂಕವನ್ನು ವಿಧಿಸಲಾಗುತ್ತಿತ್ತು. ಎಲ್ಲಾ ಕೃಷಿ ಉತ್ಪನ್ನಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು[೪೩೦]. ಸೆಟ್ಟಿಗಳು ವ್ಯಾಪಾರದಲ್ಲಿ ಬಹಳ ಪ್ರಮುಖರಾಗಿದ್ದು ಹರಪನಹಳ್ಳಿಯ ಒಂದು ಶಾಸನದಲ್ಲಿ ಲಕ್ಕಿಸೆಟ್ಟಿ ಎಂಬ ಹೆಸರು ಕಂಡು ಬರುತ್ತದೆ. ಈ ಪ್ರದೇಶದಲ್ಲಿ ಜೀವನಾವಶ್ಯಕ ಕೃಷಿ ಆಧಾರಿತ ಕೈಗಾರಿಕೆಗಳಿದ್ದವು. ನೇಕಾರರು 'ಮಗ್ಗದೆರೆ' ಗಾಣಿಗರು 'ಗಾನದೆರೆ' ಮುಂತಾದ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಬಾಗಳಿ ಬಸವಪ್ಪನಾಯಕ ಬೇರೆ ಅರಸರೊಂದಿಗೆ ಹತ್ತು ಸಾವಿರ ವರಹದ ವ್ಯವಹಾರವನ್ನು ಇಟ್ಟುಕೊಂಡಿದ್ದನೆಂದು ತಿಳಿಸುತ್ತದೆ[೪೩೧].

ಕೃಷಿ ಮೂಲದ ತೆರಿಗೆ ಅಧ್ಯಯನ ನಡೆಸುವಾಗ ಕೃಷಿಗೆ ನೇರವಾಗಿ ಸಂಬಂಧಿಸಿದ ತೆರಿಗೆಯನ್ನು ಕುರಿತು ತಿಳಿಸಲಾಗಿದೆ. ಇದು ಸಹ ರಾಜ್ಯಕ್ಕೆ ಪ್ರಮುಖ ಆದಾಯವನ್ನು ನೀಡುವುದರ ಜೊತೆಗೆ ಜನಜೀವನವನ್ನು ಸುಧಾರಿಸುವಲ್ಲಿ ಸಹಕಾರಿಯಾಗಿರುವುದು ತಿಳಿಯುತ್ತದೆ. ಜನರು ತಮ್ಮ ಜೀವನೋಪಯಕ್ಕಾಗಿ ಅನೇಕ ಪ್ರಾಣಿಗಳನ್ನು ಸಾಕುತ್ತಿದ್ದರು. ಹರಪನಹಳ್ಳಿ ನಾಯಕರ ಕಾಲದಲ್ಲೂ ಇಂತಹ ವ್ಯವಸ್ಥೆಯಿತ್ತೆಂಬುದು ಶಾಸನಗಳಿಂದ ತಿಳಿದು ಬರುತ್ತದೆ. ಹರಪನಹಳ್ಳಿಯ ಮೊದಲ ಪಾಳೆಯಗಾರ ದಾದೇನಾಯಕನು ಕೊಟ್ಟೂರು ಸೀಮೆಯ ಕುರುಬ ಕುಲದ ಸಿದ್ದಪ್ಪ ಒಡೆಯ ಮೊದಲಾದವರಿಗೆ ಕುರಿದೆರಿಗೆಯನ್ನು ಬಾಗಳಿ[೪೩೨]ಯ ಕಲ್ಲಿನಾಥದೇವರ ಸನ್ನಿಧಿಯಲ್ಲಿ ತೆಗೆದು ಹಾಕಿದನು. ಹಾಗೆಯೇ ಕ್ರಿ.ಶ.೧೫೫೬ರಲ್ಲಿ ಸದಾಶಿವರಾಯ ವಿದ್ಯಾನಗರಿಯಲ್ಲಿ ಆಳುತ್ತಿದ್ದಾಗ ಮಹಾನಾಯಕಾಚಾರ್ಯ ಕೃಷ್ಣಪ್ಪನಾಯಕರಿಗೆ ಕೊಟ್ಟೂರು ಸೀಮೆಗೆ ಸಲ್ಲುವ ಬಾಗಳಿಯ ಚಾಮಿನಾಯಕರ ಮಗ ಹಳವಿನಾಯಕರು ಬಾಗಳಿಯ ಕುಮಾರ ಬಸವಿಗೌಡ ಮುಂತಾದವರಿಗೆ ಕುರಿ ತೆರಿಗೆಯನ್ನು ಕೊಡಬೇಕೆಂದು ಮುತ್ತಿಗೆ ಶಾಸನ ತಿಳಿಸುತ್ತದೆ[೪೩೩]. ಹಾಗೆಯೇ ಸದಾಶಿವರಾಯರ ಕಾರ್ಯಕರ್ತ ಹಡಪದಕೃಷ್ಣಪ್ಪನಾಯಕ ಕೊಟ್ಟೂರು ಸೀಮೆಯ ಬಾಗಳಿ ಗ್ರಾಮ[೪೩೪], ಮತ್ತು ಬಿಳಿಚೋಡು ಸೀಮೆಯ ಕುರಿ ತೆರಿಗೆಯನ್ನು ರದ್ದು ಮಾಡಿದರು[೪೩೫]. ಹೀಗೆ ಎತ್ತು, ಎಮ್ಮೆ, ಆಕಳು, ಮೇಕೆಗಳಿಗೂ ತೆರಿಗೆ ಕೊಡಬೇಕಾಗಿತ್ತು.

ಹರಪನಹಳ್ಳಿ ನಾಯಕರ ಪ್ರದೇಶದಲ್ಲಿ ವಿವಿಧ ಜನರು ನೆಲೆಸಿದ್ದುದಾಗಿ ಶಾಸನಗಳಲ್ಲಿ ಉಲ್ಲೇಖವಿದೆ. ತಳವಾರ, ಅಗಸ, ನಾಯಿಂದ[೪೩೬], ಶಿಲ್ಪಿ[೪೩೭], ಬಡಗಿ[೪೩೮], ಕಂಚುಗಾರ[೪೩೯],

ಅಕ್ಕಸಾಲಿ[೪೪೦], ಮುಂತಾದವರು ನೆಲೆಸಿದ್ದರು. ಸದಶಿವರಾಯರು ವಿದ್ಯಾನಗರಿಯಲ್ಲಿ ಆಳುತ್ತಿದ್ದಾಗ ರಾಜನಿಯೋಗದ ನಾಯಿಂದರಿಗೆ ಮತ್ತು ಬಾಗಳಿಯ ನಾಯಿಂದರಿಗೆ ಕಾಣಿಕೆ, ಕಡಾಯ, ಬಿಟ್ಟಿ, ಬಿರಾಡ, ಲಿಂಗದೆರೆಗಳಿಂದ ವಿನಾಯಿತಿ ನೀಡಿದರು[೪೪೧]. ಇದರಿಂದ ಸಾಕು ಪ್ರಾಣಿಗಳು ಮತ್ತು ವಿವಿಧ ಜಾತಿ ವರ್ಗಗಳ ಮೇಲೂ ತೆರಿಗೆ ವಿಧಿಸಲಾಗುತ್ತಿತ್ತೆಂದು ತಿಳಿಯಲಾಗಿದೆ.

**ಕೃಷಿಯೇತರ ತೆರಿಗೆಗಳು**

ಕೃಷಿಯೇತರ ತೆರಿಗೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಬಹುಮುಖ್ಯವಾದ ಆದಾಯವಾಗಿತ್ತು. ವ್ಯಾಪಾರ-ವಾಣಿಜ್ಯ ಅಭಿವೃದ್ಧಿಗೊಂಡು ಹೊಸ ಹೊಸ ಮಾರುಕಟ್ಟೆಗಳು ಮತ್ತು ನಗರ ಪಟ್ಟಣಗಳು ಉದಯಿಸಿ ಅಭಿವೃದ್ಧಿ ಸಾಧಿಸಿ ಕೃಷಿಯೇತರ ಚಟುವಟಿಕೆಗಳು ಕೃಷಿ ಚಟುವಟಿಕೆಗಳಷ್ಟೇ ಮಹತ್ವ ಪಡೆಯಲು ಕಾರಣವಾಯಿತೆನ್ನಬಹುದು. ಈ ಕಾಲದ ಕೃಷಿಯೇತರ ತೆರಿಗೆಗಳ ವ್ಯವಹಾರಗಳಲ್ಲಿ ವರ್ತಕರ ಪಾತ್ರ ಪ್ರಧಾನವಾಗಿತ್ತು. ಸಾಮಾನ್ಯವಾಗಿ ಕೃಷಿಯೇತರ ತೆರಿಗೆಗಳನ್ನು ನಾಣ್ಯದ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ವಿಜಯನಗರ ಕಾಲದ ನಾಣ್ಯ ವ್ಯವಸ್ಥೆಯನ್ನೇ ಹರಪನಹಳ್ಳಿ ಪಾಳೆಯಗಾರರ ಅನುಸರಿಸಿದರು. ಈ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹಗಳಿಂದ ಮಾಡಲ್ಪಟ್ಟಿದ್ದವು. ಗದ್ಯಾಣ, ಹೊನ್ನು, ವರಹ, ಹಣ, ರೊಂಕ, ಪಣ ಎಂಬ ವಿವಿಧ ನಾಣ್ಯಗಳ ಉಲ್ಲೇಖಗಳು ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಲ್ಲಿ ಉಲ್ಲೇಖಿತವಾಗಿದೆ. ಎಲ್ಲಾ ಅರಸರ ಶಾಸನಗಳಲ್ಲಿ ವರಹ, ಗದ್ಯಾಣ, ಹೊನ್ನುಗಳ ಉಲ್ಲೇಖ ಸಾಮಾನ್ಯವಾಗಿ ಕಂಡು ಬರುವುದರಿಂದ ಇವುಗಳ ಬಳಕೆ ಹೆಚ್ಚಾಗಿತ್ತೆಂದು ತಿಳಿಯಬಹುದಾಗಿದೆ. ಕೆಲವೊಮ್ಮೆ ರಾಜರು ರೈತರಿಂದ ತೆರಿಗೆ ರೂಪದಲ್ಲಿ ಸೈನ್ಯದ ಖರ್ಚುಗಳನ್ನು ತುಂಬಿಕೊಳ್ಳುತ್ತಿದ್ದರು. ಇದನ್ನು ದಂಡಿನ ಬಿರಾಡ, ದುರ್ಗದ ಭತ್ತ ಮತ್ತು ಕೋಟೆ ಬಿರಾಡ ಎಂದು ಕರೆಯುತ್ತಿದ್ದರು. ದಂಡಿನ ಬಿರಾಡವೆಂದರೆ ಗ್ರಾಮದ ಬಳಿ ನಾಯಕರ ದಂಡು ಬೀಡು ಬಿಟ್ಟಾಗ ಅದರ ಖರ್ಚಿಗೆ ಸ್ಥಳೀಯರು ಹಣ ಕೊಡಬೇಕಾಗಿತ್ತು. ದುರ್ಗದ ಭತ್ತವೆಂದರೆ ಕೋಟೆಯ ಸುತ್ತಮುತ್ತಲಿನ ಗ್ರಾಮಸ್ಥರು ಕೋಟೆಯೊಳಗಿನ ಕಣಜಕ್ಕೆ ಧಾನ್ಯವನ್ನು ನೀಡಬೇಕಾಗಿತ್ತು[೪೪೨].

**ಬಿಟ್ಟಿಸೇವೆ**

ತೆರಿಗೆಯ ಬದಲಾಗಿ ಉಚಿತ ಸೇವೆಯನ್ನು ಸಲ್ಲಿಸುವ ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವುದನ್ನು ಗಮನಿಸಬಹುದಾಗಿದೆ. ಈ ಪದ್ಧತಿಯ ಅನುಸಾರ ತೆರಿಗೆ ನೀಡಲು ಸಾಧ್ಯವಾಗದವರು ಅಷ್ಟು ಮೊತ್ತಕ್ಕೆ ಸಮನಾದ ಸೇವೆಯನ್ನು ಸಲ್ಲಿಸುವುದೂ ಸಹ ಪ್ರಾಚೀನ ಕಾಲದ ತೆರಿಗೆ ಪದ್ಧತಿಯ ಒಂದು ಭಾಗವಾಗಿತ್ತು. ಪ್ರಾಚೀನ ಕಾಲದ ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಲ್ಲಿ ಇದನ್ನು 'ವಿಶ್ಟಿ' ಎಂದು ಉಲ್ಲೇಖಿಸಲ್ಪಟ್ಟಿವೆ. ಕೌಟಿಲ್ಯನ ಅರ್ಥಶಾಸ್ತ್ರ ಗ್ರಂಥಕ್ಕೆ ಟಿಪ್ಪಣಿಯನ್ನು ನೀಡಿದ ಮತ್ತೊಬ್ಬ ರಾಜ ನೀತಿಜ್ಞ ಭಟ್ಟಸ್ವಾಮಿ ತೆರಿಗೆ ಬದಲಾಗಿ ಗ್ರಾಮದ ಜನತೆಯಿಂದ ಒತ್ತಾಯ ಪೂರ್ವಕವಾಗಿ ಪಡೆದ ಉಚಿತ ಸೇವೆಯೇ ವಿಶ್ಟಿ ಎಂದು ವ್ಯಾಖ್ಯಾನಿಸಿದ್ದಾರೆ. ಕನ್ನಡ ಶಾಸನಗಳಲ್ಲಿ

ಸಂಸ್ಕೃತ ಪದವಾದ 'ವಿಷ್ಟಿ' ಪದಕ್ಕೆ ಬದಲಾಗಿ 'ಬಿಟ್ಟಿ' ಎಂಬ ಪದ ಪ್ರಯೋಗ ಮಾಡಲಾಗಿದೆ. ಹರಪನಹಳ್ಳಿಯ ಕ್ರಿ.ಶ.೧೫೫೭ರ ಶಾಸನದಲ್ಲಿ ಬಾಗಳಿಯ ನಾಯಿಂದರಿಗೆ ಕಾಣಿಕೆ, ಕಂದಾಯ, ಬಿಟ್ಟಿ, ಬಿರಾಡ, ಮುಂತಾದ ತೆರಿಗೆಗಳಿಂದ ವಿನಾಯಿತಿ ನೀಡಲಾಗಿದೆ ಎಂದು ಉಲ್ಲೇಖಿಸಲ್ಪಟ್ಟಿದೆ[೪೪೪]. ಆದರೆ ಬಿಟ್ಟಿಯ ಸ್ವರೂಪದ ಬಗ್ಗೆ ಸ್ಪಷ್ಟವಾಗಿಲ್ಲ. ಈ ಕಾಲದಲ್ಲಿ ಗ್ರಾಮದ ಆಡಳಿತದ ನಿರ್ವಹಣೆಗಾಗಿ 'ಬಾರಬಲೂತಿ' ವ್ಯವಸ್ಥೆಯಿತ್ತು. ಇವರು ಗ್ರಾಮದ ಅಭಿವೃದ್ಧಿಗಾಗಿ ಅಥವಾ ನಿರ್ದಿಷ್ಟವಾದ ದಿನದಂದು ಬಿಟ್ಟಿ ದುಡಿಯಬೇಕಾಗಿತ್ತು. ಉಳಿದ ದಿನ ಸಲ್ಲಿಸುವ ಸೇವೆಗೆ ರೈತರಿಂದ ಆಯ ಪಡೆಯುತ್ತಿದ್ದರು. ಇವರನ್ನು ೧೨ ಜನ ಕೈವಾಡದವರೆಂದು ಕರೆಯಲಾಗಿತ್ತು[೪೪೫].

ಹೀಗೆ ತೆರಿಗೆಯನ್ನು ಸಂಗ್ರಹಿಸುವಾಗ ಪೂರ್ವ ಮರ್ಯಾದೆಯನ್ನು ಅನುಸರಿಸಲಾಗುತ್ತಿತ್ತು. ವಿವಿಧ ಕುಶಲಕರ್ಮಿಗಳು ಕೆಲವೊಮ್ಮೆ ತೆರಿಗೆಯಿಂದ ರಿಯಾಯಿತಿ ಪಡೆದಿದ್ದರು. ತೆರಿಗೆ ಅಧಿಕವಾದಾಗ ಪ್ರಭುಗಳ ಪ್ರಭುತ್ವದ ವಿರುದ್ಧ ಮಧ್ಯಕಾಲೀನದಲ್ಲಿ ಪ್ರತಿಭಟನೆಗಳು ನಡೆದಿರುವ ಉದಾಹರಣೆಗಳು ಕಂಡು ಬರುತ್ತವೆ. ಹರಪನಹಳ್ಳಿ ಪಾಳೆಯಗಾರ ಆಳ್ವಿಕೆಯು ಇದರಿಂದ ಹೊರತಾಗಿರಲಿಲ್ಲ. ಅದೇ ರೀತಿಯಾಗಿ ಆಡಳಿತ ನಿರ್ವಹಣೆಯಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಕೆಲವು ಗ್ರಾಮಗಳನ್ನು ಸಂಬಳ ರೂಪದಲ್ಲಿ ಅಧಿಕಾರಿಗಳಿಗೂ ಬಿಟ್ಟುಕೊಂಡಿರುವ ಅಂಶಗಳನ್ನು ಸಹ ಗಮನಿಸಬಹುದು. ಹಾಗೆಯೇ ಆಡಳಿತಾಧಿಕಾರಿಗಳಿಗೆ ಗ್ರಾಮಗಳನ್ನು ದಾನವಾಗಿ ನೀಡುವ ಪರಿಪಾಠವೂ ಇತ್ತು. ಇದೇ ರೀತಿಯ ಅನೇಕ ಅಂಶಗಳನ್ನು ಹರಪನಹಳ್ಳಿ ನಾಯಕ ಅರಸರು ಮುಂದುವರೆಸಿಕೊಂಡು ಬಂದರು ಎಂದರೆ ತಪ್ಪಾಗಲಾರದು.

**ನಾಣ್ಯ ವ್ಯವಸ್ಥೆ**

ಮಾನವನ ಸಾಂಸ್ಕೃತಿಕ ಬೆಳವಣಿಗೆ ಮತ್ತು ಇತಿಹಾಸದಲ್ಲಿ ಕೊಡು-ತೆಗೆದುಕೊಳ್ಳುವ ವ್ಯವಸ್ಥೆ ಮಹತ್ವದ್ದು. ಇದರಿಂದ ತನಗೆ ಅವಶ್ಯಕವಾದ ವಸ್ತುಗಳನ್ನು ಪಡೆಯಲು ಅನುಕೂಲವಾಯಿತು. ಪ್ರಾರಂಭದಲ್ಲಿ ಈ ವ್ಯವಸ್ಥೆ ವಸ್ತು ವಿನಿಮಯ ಪದ್ಧತಿಯ ಮೂಲಕ ನಡೆಯುತ್ತಿತ್ತು. ಈ ಮೂಲಕ ತನಗೆ ಬೇಕಾದ ವಸ್ತುಗಳನ್ನು ಬೇರೆಯವರಿಂದ ಪಡೆದು ತನ್ನಲ್ಲಿರುವ ವಸ್ತುವನ್ನು ಇತರರಿಗೆ ನೀಡಲಾಗುತ್ತಿತ್ತು. ಅಲ್ಲದೆ ಒಂದು ವಸ್ತುವನ್ನು ಪಡೆದಾಗ ಅದಕ್ಕೆ ಪ್ರತಿರೂಪವಾಗಿ ಹಸುಗಳನ್ನು ವಿನಿಮಯ ಮಾಡಿಕೊಳ್ಳಲಾಗುತ್ತಿತ್ತು. ಆದರೆ ನಂತರದ ದಿನಗಳಲ್ಲಿ ಇದಕ್ಕೆ ತಕ್ಕುದಾದ ವ್ಯವಸ್ಥೆ ಸರಿದೂಗಲಿಲ್ಲ. ಬದಲಾಗಿ ಬಂಗಾರದ ಆಭರಣಗಳನ್ನು ವಿನಿಮಯದ ವಸ್ತುಗಾಗಿ ಬಳಸಲಾಯಿತು. ಕ್ರಮೇಣ ನಾಣ್ಯಗಳು ಅವಿಷ್ಕಾರಗೊಂಡು ಆರ್ಥಿಕಾಭಿವೃದ್ಧಿಯಲ್ಲಿ ಹೊಸ ಮನ್ವಂತರವೇ ಆರಂಭವಾಯಿತು. ನಾಣ್ಯಗಳನ್ನು ಟಂಕಿಸುವ ಸ್ಥಳಗಳನ್ನು ಕಮ್ಮಟಗಳೆಂದೂ ಅಚ್ಚಿನ ಟಂಕಸಾಲೆಗಳೆಂದೂ ಕರೆಯಲಾಗಿದೆ. ಪ್ರಮುಖವಾಗಿ ನಾಣ್ಯಗಳನ್ನು ರಾಜಧಾನಿ ಹಾಗೂ ಉಪರಾಜಧಾನಿಗಳಲ್ಲಿ ಅಚ್ಚು ಹಾಕುತ್ತಿದ್ದು ಅವು ಪಾಳೆಯಗಾರರ ಅಧೀನದಲ್ಲಿರುತ್ತಿದ್ದವು. ಕೆಲವೊಮ್ಮೆ

ದೇವಾಲಯಗಳಲ್ಲಿ ಇಲ್ಲವೇ ಇತರ ವ್ಯಕ್ತಿಗಳು ಸರ್ಕಾರದ ಅನುಮತಿ ಪಡೆದು ನಾಣ್ಯಗಳನ್ನು ಟಂಕಿಸುತ್ತಿದ್ದರು. ಅದಕ್ಕೆ ಬದಲಾಗಿ ತೆರಿಗೆ ಕೊಡಬೇಕಾಗಿತ್ತು. ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳನ್ನು ರಾಜಾದಿತ್ಯನು ತನ್ನ ವ್ಯವಹಾರ ಗಣಿತದಲ್ಲಿ ಉಲ್ಲೇಖಿಸಿದ್ದಾನೆ[೪೪೬]. ಅವನ ಪ್ರಕಾರ ಗದ್ಯಾಣ ಮತ್ತು ಉಳಿದ ನಾಣ್ಯಗಳಿಗೂ ಇರುವ ವ್ಯತ್ಯಾಸವನ್ನು ಗುರುತಿಸಬಹುದು. ನಾಲ್ಕಾಣೆ=ಒಂದು ವೀಸ, ಐದುವೀಸ=ಒಂದುಹಾಗ, ನಾಲ್ಕುಹಾಗ=ಒಂದು ಪಣ, ಹತ್ತುಪಣ=ಒಂದು ಗದ್ಯಾಣ. ಹಾಗೆಯೇ ತನ್ನ ಲೀಲಾವತಿ ಗಣಿತದಲ್ಲಿ ಉಲ್ಲೇಖಿಸಿರುವ ನಾಣ್ಯಗಳು ಇಂತಿವೆ[೪೪೭]. ಒಂದು ವರಹ=ಎರಡುಹೊನ್ನು, ಒಂದು ಹೊನ್ನು=ಐದುಹಣ, ಒಂದುಹಣ=ಎರಡುಅಡ್ಡ, ಒಂದು ಅಡ್ಡ=ಎರಡುಹಾಗ, ಒಂದು ಹಾಗ=ಎರಡುಬೇಳೆ, ಒಂದು ಬೇಳೆ=ಎರಡುವೀಸ, ಒಂದು ವೀಸ=ಎರಡುಅರೆವೀಸ, ಒಂದುಅರೆವೀಸ=ಎರಡುಕಾಣೆ, ಒಂದುಕಾಣೆ=ಗಿದ್ದಾಣಿ.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಕೆಲವು ನಾಣ್ಯಗಳು ಬಳಕೆಯಲ್ಲಿದ್ದು, ವಿಜಯನಗರ ಕಾಲದ ನಾಣ್ಯಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದು ಬಂದಿದೆ[೪೪೮]. ಇವರ ಕಾಲದಲ್ಲಿ ಹೆಚ್ಚು ಬಳಕೆಯಾಗುತ್ತಿದ್ದ ನಾಣ್ಯವೆಂದರೆ 'ಗದ್ಯಾಣ' ಅಥವಾ 'ಪೊನ್'/'ಪೊನ್ನ'. ಈ ನಾಣ್ಯದ ತೂಕ ೫೮ರಿಂದ ೬೦.೧ ಗ್ರೇನ್‌ಗಳೆಂದು ಕಾಂಗ್ರಿಂಗ್‌ಟನ್ ಹೇಳಿದರೆ, ೯೬ ಗ್ರೇನ್‌ಗಳೆಂದು ಡಾ.ಅಲ್ಟೇಕರ್ ತಿಳಿಸಿದ್ದಾರೆ[೪೫೦]. ಹಾಗೆಯೇ ಡಾ.ಅಪ್ಪಾದೊರೈಯವರು ೬೩ ಗ್ರೇನ್‌ಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಗದ್ಯಾಣ, ಪೊನ್ನ ನಾಣ್ಯಗಳು ಪ್ರಾದೇಶಿಕ ವ್ಯತ್ಯಾಸ ಪಡೆದಿರುವುದು ತಿಳಿದು ಬಂದಿದೆ. ಇವರ ಕಾಲದಲ್ಲಿ ಪ್ರಚಲಿತದಲ್ಲಿದ್ದ ನಾಣ್ಯಗಳೆಂದರೆ ಒಂದು ಗದ್ಯಾಣ–ಹತ್ತು ಪಣ ಒಂದುಪಣ–ಎರಡು ಆಡ, ಒಂದು ಪಣ–ನಾಲ್ಕುಹಾಗ, ಒಂದು ಪಣ–ಇಪ್ಪತ್ತುವೀಸ, ಒಂದು ಪಣ–ಎರಡುಬೇಲೆ, ಹಾಗೆಯೇ ಪೆಕ್ಸಾಸ್–ಪಗೋಡಗಳನ್ನು ಬಳಸಿರುವರು. ಬ್ರಿಟೀಷ್‌ರ ಗೆಸೆಟಿಯರ್‌ನಲ್ಲಿ ಮೊದಲ ಸೋಮಶೇಖರನಾಯಕನ ಕಾಲದಲ್ಲಿ ಹರಪನಹಳ್ಳಿ ನಾಣ್ಯಗಳನ್ನು ಉಪಯೋಗಿಸಿರುವುದು ತಿಳಿದು ಬರುತ್ತದೆ. ಈ ನಾಣ್ಯ ಹತ್ತೂವರೆ ಆಣೆ ತೂಕವನ್ನು ಹೊಂದಿತ್ತು. ಬ್ರಿಟೀಷರ ಕಾಲದಲ್ಲಿ ಈ ನಾಣ್ಯದ ವಿಚಾರ ಪ್ರಸ್ತಾಪಿಸಲ್ಪಟ್ಟಿದೆ. ನಾಣ್ಯದ ಒಂದು ಮುಖ ಮನೆದೇವತೆಯಾದ ಉಚ್ಚಂಗೆಮ್ಮ ಮತ್ತೊಂದು ಮುಖದಲ್ಲಿ ಗಂಡು ದೇವರು ಆಂಜನೇಯನ ಚಿತ್ರವಿದೆ.

ಹರಪನಹಳ್ಳಿ ಪಾಳೆಯಗಾರರ ಸಾಮಂತ ಅರಸ ಗಡ್ಡದ ದೇಸಾಯಿ ಭರಮನಗೌಡರು ಹರಪನಹಳ್ಳಿ ನಾಣ್ಯ ೧೫೦೦ನ್ನು ಬಳಸಿ ಕುರದಗಡ್ಡೆ ಕೋಟೆಯನ್ನು ನಿರ್ಮಿಸಿದುದ್ದಾಗಿ ತಿಳಿಸಿದ್ದಾನೆ. ಈ ನಾಣ್ಯಗಳನ್ನು ಹರಪನಹಳ್ಳಿ ಅಕ್ಕಸಾಲಿಗರು ತಯಾರಿಸುತ್ತಿದ್ದರಂತೆ. ಹರಪನಹಳ್ಳಿ ಸಮೀಪ ಅವರಿಗೆ ಒಂದು ಟಂಕಸಾಲೆ ಇದ್ದಿತೆಂದು ತಿಳಿಯಲಾಗಿದೆ. ಹಾಗೆಯೇ ಬಾಗಳಿ ಬಸವಪ್ಪನಾಯಕ ಬೇರೆ ಅರಸು ಮನೆತನದೊಂದಿದೆ ಹತ್ತು ಸಾವಿರ ವರಹ ವ್ಯವಹಾರ ನಡೆಸುತ್ತಿದ್ದನೆಂದು ಹರಪನಹಳ್ಳಿಯ ನಿಚ್ಚವನಹಳ್ಳಿ ಶಾಸನ ತಿಳಿಸುತ್ತದೆ[೪೫೧]. ರಾಮರಾಜಯ್ಯನು ಉಚ್ಚಂಗಮ್ಮನ ನಂದಾದೀಪಕ್ಕೆ

'ತಾಳವರಿರೊಂಕ'ವನ್ನು ನೀಡಿದ್ದನೆಂದು ಕ್ರಿ.ಶ.೧೫೩೦ರ ಉಚ್ಚಂಗಿದುರ್ಗ ಶಾಸನದಲ್ಲಿ ಉಲ್ಲೇಖಿಸಲಾಗಿದೆ[೪೫೩]. 'ರೊಂಕ' ಎನ್ನುವುದು ಬಹಶಃ ನಗದು ಹಣ ಎಂದು ತಿಳಿಯಬಹುದಾಗಿದೆ. ಸೋಮಶೇಖರನಾಯಕನು ಸ್ವಂತ ಟಂಕಸಾಲೆಯನ್ನು ಹೊಂದಿದ್ದನು[೪೫೪]. ಇವನ ಶಾಸನ ಮತ್ತು ನಿರೂಪಗಳಲ್ಲಿ ಹಣ, ಕಾಣಿ, ಪವನ್[೪೫೫], ಹೊನ್ನುವರಹ[೪೫೬], ಪಗೋಡ[೪೫೭],ಗಳನ್ನು ಬಳಸುತ್ತಿದ್ದರೆಂದು ಕಂಡು ಬಂದಿದೆ.

## ೩.೬ ನ್ಯಾಯಾಡಳಿತ ವ್ಯವಸ್ಥೆ

ಪ್ರಾಚೀನ ಭಾರತದ ಕಾನೂನು ಸಾಹಿತ್ಯ ಆಗಸದ ಮಿನುಗುತಾರೆ. ಕನ್ನಡನಾಡಿನ ಧ್ರುವತಾರೆ, ವಿಜ್ಞಾನೇಶ್ವರನ 'ಮಿತಾಕ್ಷರ ಸಂಹಿತೆ' ಟೀಕಾ ಗ್ರಂಥ ಬಂಗಾಳವನ್ನು ಹೊರತುಪಡಿಸಿ[೪೫೮] ಸಂಪೂರ್ಣ ಭಾರತದ ಮೇಲೆ ತುಂಬ ಮಹತ್ತರ ಪ್ರಭಾವ ಬೀರಿದೆ. ಈ ಗ್ರಂಥದ ಮತ್ತೊಂದು ವಿಶೇಷವೆಂದರೆ ೧೮ನೇಯ ಶತಮಾನದಿಂದೀಚಿಗೆ 'ಮಿತಾಕ್ಷರಾ' ಹೆಸರಿನಲ್ಲಿಯೇ ಕಾನೂನಿನ ಒಂದು ಪ್ರಮುಖ ಶಾಖೆಯೇ ಉದಯವಾಯಿತು. 'ಮಿತಾಕ್ಷರಾ'ದ ಮುಖ್ಯ ಶಾಖೆಯಲ್ಲಿ ೫ ಉಪಶಾಖೆಗಳು ಭಾರತದ ವಿವಿಧ ಪ್ರಾಂತ್ಯಗಳಲ್ಲಿ ಉಗಮವಾಗಿವೆ[೪೫೯].

ಈ ಮಿತಾಕ್ಷರಾ ಸಂಹಿತೆ ಗ್ರಂಥ ಪ್ರತಿಪಾದಿಸಿದ ವಿಚಾರಗಳನ್ನು ತಿಳಿಯುವ ಪ್ರಯತ್ನಕ್ಕಿಂತ ನಮ್ಮ ದೇಶದಲ್ಲಿ 'ಹಿಂದೂ ಕಾನೂನು' ಬೆಳೆದು ಬಂದ ರೀತಿಯನ್ನು ತಿಳಿಯುವುದು ಬಹುಮುಖ್ಯ ಇಲ್ಲಿ ಕಾನೂನು ಎಂಬ ಪದ ಆಂಗ್ಲಭಾಷೆಯ ನ್ಯಾಯಪ್ರಣಾಳಿಕೆಯಲ್ಲಿ ಬಳಕೆಯಲ್ಲಿರುವ 'ಲಾ' ಅಥವಾ 'ಪಾಸಿಟಿವ್ ಲಾ' ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಯಾವುದಾದರೂ ಸಮುದಾಯದ ಸದಸ್ಯರ ಲೌಕಿಕ ಜೀವನಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನಿಯಂತ್ರಿಸುವ ನಿಯಮಗಳ ಸಮೂಹವೇ ಕಾನೂನು ಅಥವಾ ಲಾ. ಆದರೆ ನ್ಯಾಯಶಾಸ್ತ್ರದಲ್ಲಿ ಖ್ಯಾತ ಲೇಖಕರುಗಳು ತಮ್ಮ ತಮ್ಮ ಅಭಿಪ್ರಾಯಕ್ಕೆ ತಕ್ಕಂತೆ ಕಾನೂನಿನ ಪರಿಭಾಷೆಯನ್ನು ಅರ್ಥೈಸಿದ್ದಾರೆ. ಕಾನೂನು ಶಬ್ದದಂತೆ 'ಹಿಂದೂ' ಶಬ್ದವೂ ತನ್ನದೇ ಆದ ಅರ್ಥ ಮತ್ತು ರೋಚಕ ಇತಿಹಾಸವನ್ನೇ ಹೊಂದಿದೆ. ಭಾರತದಲ್ಲಿ ಕಾನೂನು ಸಾಹಿತ್ಯ ಪ್ರಾಚೀನ ಕಾಲದಿಂದ ವಿಪುಲವಾಗಿ ಬೆಳೆದು ಬಂದಿದ್ದರೂ ಎಲ್ಲೂ ಹಿಂದೂ ಶಬ್ದದ ಪ್ರಯೋಗವಿಲ್ಲ. ಅನಾದಿ ಕಾಲದಿಂದಲೂ ಈ ಉಪಖಂಡದಲ್ಲಿ ವಾಸಿಸುತ್ತಾ ತಮ್ಮದೇ ಆದ ಒಂದು ಜೀವನ ಶೈಲಿಯನ್ನು ಅನುಸರಿಸುತ್ತಾ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಸಾಹಿತ್ಯ, ಆಚಾರ, ವಿಚಾರಗಳಿಗೆ ಜನ್ಮ ನೀಡಿದ ವಿಶಾಲ ಜನ ಸಮುದಾಯಕ್ಕೆ ಪರಕೀಯರು ನೀಡಿದ ನಾಮಧೇಯವೇ ಹಿಂದೂ ಶಬ್ದ. ಇದು ವಿಚಿತ್ರವೆನಿಸಿದರೂ ಐತಿಹಾಸಿಕ ಸತ್ಯ. ಈ ಸಂದರ್ಭದಲ್ಲಿ ನಾವು ಗಮನಿಸಬಹುದಾದ ಒಂದು ಬಹುಮುಖ್ಯ ವಿಚಾರವೆಂದರೆ ಈ ವಿಶಾಲ ಜನಸ್ತೋಮ ಅನಾದಿ ಕಾಲದಿಂದ ತನ್ನ ಸಾಹಿತ್ಯ, ಸಂಸ್ಕೃತಿ, ದರ್ಶನ, ವ್ಯವಹಾರ ಮುಂತಾದ ಕ್ಷೇತ್ರಗಳಲ್ಲಿ ವಿವಿಧ ಅರ್ಥದಲ್ಲಿ

ಪ್ರಯೋಗಿಸುವ ಶಬ್ದವೆಂದರೆ 'ಧರ್ಮ'. ಈ ಧರ್ಮ ಮಾನವನ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಎಡೆಬಿಡದೆ ಅವನ ಸಕಲ ವ್ಯವಹಾರಗಳನ್ನು ನಿಯಂತ್ರಿಸುತ್ತಾ ಬಂದಿದೆ.

'ಕಾನೂನು' ಶಬ್ದದಂತೆಯೇ 'ಧರ್ಮ' ಶಬ್ದವನ್ನು ಪರಿಭಾಷೆಯ ಚೌಕಟ್ಟಿನಲ್ಲಿ ಅಡಕ ಮಾಡುವುದು ಬಹಳ ಕ್ಲಿಷ್ಟವಾದ ಕೆಲಸ. ಅದು ಜೀವನದ ಪ್ರತಿಯೊಂದು ಕ್ರಿಯೆಯ ಮೌಲ್ಯಮಾಪನ ಮಾಡುವ ಮಾನದಂಡವಾಗಿದೆ. ಈ ಕಾರಣದಿಂದಲೇ ಪಾಶ್ಚಾತ್ಯರು 'ಧರ್ಮ' ಶಬ್ದದ ಪರಿಭಾಷೆ ನೀಡುವಾಗ ಎಡವಿರುವುದು, ಉದಾಹರಣೆಗೆ ಆಂಗ್ಲಭಾಷೆಯಲ್ಲಿ 'ಲಾ', 'ರಿಲಿಜನ್', 'ಮೊರಲಿಟಿ', 'ಎಥಿಕ್ಸ್' ಎಂದು ಕರೆಯುವ ಸನ್ನಿವೇಶದಲ್ಲಿ ನಾವು ಧರ್ಮ ಶಬ್ದವನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ ನಿಖರವಾದ ಅರ್ಥದಲ್ಲಿ ಉಪಯೋಗಿಸಬಹುದು. ೧೯ನೆಯ ಶತಮಾನದಲ್ಲಿ ಭಾರತೀಯ ಕಾನೂನಿನ ಬಗ್ಗೆ ವಿಶ್ಲೇಷಣೆ ಕೈಗೊಂಡ ಅನೇಕ ಪಾಶ್ಚಾತ್ಯ ಲೇಖಕರು ಧರ್ಮದ ವ್ಯಾಪಕ ಅರ್ಥವನ್ನು ಗ್ರಹಿಸಲಾರದೆ ಅದನ್ನು 'ಲಾ' ಆಥವಾ 'ಕಾನೂನು' ಎಂದು ನಿಖರವಾಗಿ ಗುರುತಿಸಲು ಪ್ರಯತ್ನಿಸಿರುವುದನ್ನು ಕಾಣುತ್ತೇವೆ. ಈ ಧರ್ಮ ಪ್ರತಿಪಾದನೆಯ ದಿಸೆಯಲ್ಲಿ ಈ ದೇಶದ ಜನ ಧರ್ಮಶಾಸ್ತ್ರ ಸಾಹಿತ್ಯವೆಂಬ ವಿಶಾಲ ಸಾಹಿತ್ಯವನ್ನು ಅಸ್ತಿತ್ವಕ್ಕೆ ತಂದರು. ವಿಶಾಲವಾದ ಈ ಧರ್ಮಶಾಸ್ತ್ರ ಸಾಹಿತ್ಯದಲ್ಲಿ ಕಾನೂನಿಗೆ ಸಂಬಂಧಿಸಿದ ನೀತಿ ನಿಯಮಗಳನ್ನು ಹೆಕ್ಕಿ ತೆಗೆದಾಗ ಅದು 'ಹಿಂದೂ ಕಾನೂನು' ಎನಿಸಿಕೊಳ್ಳುತ್ತದೆ. ಅಂದರೆ ಹಿಂದೂ ಕಾನೂನು ವಿಶಾಲ ಧರ್ಮಶಾಸ್ತ್ರ ಸಾಹಿತ್ಯದ ಒಂದು ಸಣ್ಣ ಭಾಗ ಎನ್ನಬಹುದು. ವಿಶ್ವ ಕಾನೂನು ಸಾಹಿತ್ಯದ ಪ್ರಕಾರ ಪ್ರಾಚೀನವಾದ ಎರಡು ಕಾನೂನು ಪ್ರಣಾಲಿಕೆಯೆಂದರೆ ಯಹೂದಿ ಕಾನೂನು ಮತ್ತು ಕೊನೆಯ ಪಕ್ಷ ಮೂರೂವರೆ ಸಾವಿರ ವರ್ಷಗಳಿಂದ ಗುರುತಿಸಬಹುದು. ಹೀಗೆ ರಾಜಪ್ರಭುತ್ವ, ಪ್ರಜಾಪ್ರಭುತ್ವ, ಜನಪದರುಗಳ ದೃಷ್ಟಿಕೋನದಲ್ಲಿ ನ್ಯಾಯ ಅಥವಾ ಕಾನೂನು ವ್ಯವಸ್ಥೆ ಬೇರೆ ಬೇರೆ ರೀತಿಯಾಗಿ ಬಳಸಲ್ಪಟ್ಟಿದೆ.

ಹರಪನಹಳ್ಳಿ ಪಾಳೆಯಗಾರರ ನ್ಯಾಯಾಡಳಿತ ವ್ಯವಸ್ಥೆಯನ್ನು ತಿಳಿಯುವ ಮುನ್ನ ಬೇಡರ ಕಟ್ಟೆ ಮನೆಗಳ ನ್ಯಾಯ ಪಂಚಾಯಿತಿ ವ್ಯವಸ್ಥೆಯ ಬಗ್ಗೆ ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ. ಪ್ರಾಚೀನ ಕಾಲದ ಅಥವಾ ಆದಿಮಾನವ ಬೇಟೆ, ಪಶುಪಾಲನೆ ಮತ್ತು ಕೃಷಿಯಿಂದ ಸ್ಥಿತ್ಯಂತರಗೊಂಡಾಗ ಮುಂದಿನ ಜೀವನದಲ್ಲಿ ಸಂಭವಿಸುವ ಘಟನೆಗಳಿಗೆ ನ್ಯಾಯ, ತೀರ್ಮಾನ, ಪಂಚಾಯಿತಿಗಳನ್ನು ತಾವೇ ರೂಪಿಸಿಕೊಂಡಿದ್ದು ಗಮನಾರ್ಹ. ಹೀಗೆ ಭೂಮಿಯ ಮೇಲೆ ವಾಸಿಸುವ ಪ್ರತಿಯೊಂದು ಬುಡಕಟ್ಟು ಸಮುದಾಯವು ತನ್ನದೇ ಆದ ನ್ಯಾಯ ತೀರ್ಮಾನದ ವ್ಯವಸ್ಥೆಯನ್ನು ಹೊಂದಿರುತ್ತದೆ. ಕರ್ನಾಟಕದಲ್ಲಿರುವ ೪೯ ಬುಡಕಟ್ಟುಗಳ ಪೈಕಿ ಬೇಡರ, ನಾಯಕ ಬುಡಕಟ್ಟು ಚರಿತ್ರೆ ಮತ್ತು ಸಂಸ್ಕೃತಿಯಿಂದ ಅತ್ಯಂತ ಮಹತ್ವ ಪಡೆದಿದೆ[೪೬೦]. ಬೇಡರು ಆದಿಯಿಂದಲೂ ಕರ್ನಾಟಕದ ಬೇರೆ ಬೇರೆ ಸಮುದಾಯಗಳಲ್ಲಿರುವಂತೆ ಕಟ್ಟೆ ಮನೆಗಳನ್ನು ಹೊಂದಿದ್ದರು. ನಾಯಕರ ಕಟ್ಟೆ ಮನೆಗಳ ಹೆಸರುಗಳನ್ನು ಆ ಜನಾಂಗದ ಹಿರಿಯ ವ್ಯಕ್ತಿಗಳು ಹೊಂದಿದ ಉಲ್ಲೇಖಗಳಿವೆ. ಉದಾಹರಣೆಗೆ

ತೇಜಸ್ವಿನಿಕಟ್ಟಿಮನೆ, ಕಟ್ಟೆನಾಯಕ ಇತ್ಯಾದಿ. ರಾಜಪ್ರಭುತ್ವದಲ್ಲಿ ಜನಸಾಮಾನ್ಯರಿಗೆ ನ್ಯಾಯ ದೊರಕಿಸಲು ಇಂತಹ ಕಟ್ಟೆ ಮನೆಗಳು ಸಹಾಯಕವಾಗಿದ್ದವು. ಇವುಗಳು ಇಂದಿನ ತಾಲ್ಲೂಕು ಮತ್ತು ಜಿಲ್ಲಾ ನ್ಯಾಯಾಲಯಗಳನ್ನು ಹೋಲುತ್ತಿದ್ದವು.

'ಕಟ್ಟಿಮನೆ; ಎಂದರೆ ಜಾತಿಯ ಶ್ರೇಣಿ ಸಂಘಸಂಸ್ಥೆ. ಇಂದು ಕಟ್ಟಿಮನೆಯನ್ನು 'ಪಂಚಾಯಿತಿಕಟ್ಟೆ' ಎಂದು ಕರೆಯುವುದೇ ಹೆಚ್ಚು ವಾಡಿಕೆ. ಅಂದರೆ ಚಾವಡಿ. ಇನ್ನೊಂದು ಅರ್ಥದಲ್ಲಿ ಕಟ್ಟೆ ಮನೆ ಎಂದರೆ ಗ್ರಾಮಾಧಿಕಾರಿಯ ಮನೆ. ಊರ ಮುಖಂಡರ ಮನೆ. ಬುಡಕಟ್ಟು ಸಮುದಾಯಗಳಲ್ಲಿ ಕಟ್ಟಿಮನೆ ಯಜಮಾನನು ಊರಿನ-ಜಾತಿಯ ಮುಖಂಡನೂ ಆಗಿರುತ್ತಿದ್ದ. ಕಟ್ಟಿಮನೆಯ ಕಾರ್ಯಸ್ವರೂಪವು ಜನಾಂಗದ ಆಚಾರ-ವಿಚಾರ, ರೂಢಿ ಮತ್ತು ಸಂಪ್ರದಾಯಗಳನ್ನು ಕೇಂದ್ರಿಕರಿಸಿಕೊಂಡಿರುತ್ತದೆ. ಪಂಚಾಯಿತಿಯಲ್ಲಿ ಕಟ್ಟಿಮನೆ ಹಿರಿಯರು ದೈವದ ತೀರ್ಮಾನದಂತೆ ಎಲ್ಲಾ ಸಮಸ್ಯೆಗಳನ್ನು ಸೌಹಾರ್ದಯುತವಾಗಿ ಬಗೆಹರಿಸುತ್ತಿದ್ದರು. ಹಿಂದೆ ಪ್ರತಿಯೊಂದು ಸಂಗತಿಗೂ ಕಟ್ಟಿಮನೆಗಳಿಗೆ ಹೋಗುವ ಪರಿಪಾಠವಿತ್ತು. ಇವರಲ್ಲಿ ವಂಶಪರಂಪರೆಯ ಆಡಳಿತ ದಾಯಾದಿಗಳ ಕಲಹಗಳಿಂದ ಕಟ್ಟಿಮನೆಗಳು ತಮ್ಮ ಮೂಲ ಆಶಯಗಳಿಗೆ ಧಕ್ಕೆಯನ್ನು ತಂದುಕೊಂಡಿವೆ. ಬೇಡರು ಇಂದು ಪೊಲೀಸ್ ಠಾಣೆ ಮತ್ತು ಕೋರ್ಟ್‌ಗಳಿಗೆ ಹೋಗುವುದರಿಂದ ಆಧುನಿಕತೆ ಎಲ್ಲಾ ರಂಗಗಳಲ್ಲೂ ಪ್ರವೇಶಿಸಿ ಪರಿವರ್ತನೆಗೆ ನಾಂದಿ ಹಾಡಿದೆ.

ಬೇಡರ ಕಟ್ಟಿಮನೆಗಳಲ್ಲಿ ಪಂಚಾಯಿತಿ ಮಾಡುವ ವಿಚಾರಗಳೆಲ್ಲವೂ ಆಯಾ ಹಟ್ಟಿಗಳ ಕೊಟ್ಟುಕೊಳ್ಳುವ ಸಂಬಂಧವನ್ನೇ ಸಂಕೇತಿಸುತ್ತವೆ. ಕಟ್ಟಿಮನೆಗಳಿಗೆ ಸಂಬಂಧಿಸಿದ ಫಿರ್ಯಾದಿಗಳಿಗೆ ನೋಟಿಸು ಕೊಟ್ಟು ಪಂಚಾಯಿತಿ ವಿಚಾರಣೆ ನಡೆಸುವುದು ಸಹಜ. ಕಟ್ಟಿಮನೆಗಳ ಪಂಚಾಯಿತಿಯಲ್ಲಿ ಹಿರಿಯರ ಮಾತು ಎಲೆ ಅಡಿಕೆ, ದಂಡ ಹಾಕುವ ಪ್ರಕ್ರಿಯೆ ಪ್ರಮುಖವಾಗಿದ್ದು ಇಂತಹ ನಿಯಮಗಳಿಗೆ ಹೆಣ್ಣು-ಗಂಡು ಇಬ್ಬರೂ ಒಳಪಡುತ್ತಾರೆ. ಹೀಗೆ ಛಿದ್ರ ಛಿದ್ರವಾಗಿ ನೆಲೆಸಿರುವ ಬೇಡರು ತಮ್ಮ ಅನುಕೂಲತೆಗೆ ತಕ್ಕಂತೆ ದೇವರು, ಕಟ್ಟಿಮನೆ, ಗುಡಿಕಟ್ಟೆಗಳನ್ನು ಹೊಂದಿರುವುದು ಸಹಜ.

ಸಾಮಾನ್ಯವಾಗಿ ಕಟ್ಟಿಮನೆಗಳು ವಿಜಯನಗರೋತ್ತರ ಕಾಲದಲ್ಲಿ ಸ್ಥಾಪನೆಯಾಗಿ ನಾಯಕರು ಪಾಳೆಯಗಾರರಾಗಿ ಮುಂದುವರೆದಾಗ ಆನೆಗುಂದಿ ಅರಸರ ಪ್ರೇರಣೆ ಮತ್ತು ಪ್ರೋತ್ಸಾಹಗಳಿಂದ ಕಾರ್ಯ ನಿರ್ವಹಿಸುತ್ತಿದ್ದವು. ಹರಪನಹಳ್ಳಿ ಪಾಳೆಯಗಾರರ ನ್ಯಾಯಾಡಳಿತ ವ್ಯವಸ್ಥೆಯೂ ಇದಕ್ಕೆ ಹೊರತಾಗಿರಲಿಲ್ಲ. ಇವರ ಕಾಲದಲ್ಲಿ ಕಂದಾಯದ ಪ್ರಮುಖ ಗ್ರಾಮಕ್ಕೆ ಒಂದು ಪಂಚಾಯಿತಿಕಟ್ಟೆ ಇದ್ದು ಗೌಡ-ಅಧ್ಯಕ್ಷ, ಮಠದಸ್ವಾಮಿ, ಗ್ರಾಮದೇವರು, ಪೂಜಾರಿ, ಶ್ಯಾನುಭೋಗ, ಕುಲಕರ್ಣಿ, ಬಣಕಾರ, ಶೆಟ್ಟಿ, ಹುಂಡೇಕಾರ, ತಳವಾರರೆಂಬ ೬ ಜನ ಸದಸ್ಯರಿದ್ದರು. ಐದು ಅಥವಾ ಏಳು ಗ್ರಾಮಗಳಲ್ಲಿ ಉಂಟಾದ ಜಗಳಗಳು ಮುಖ್ಯ ಗ್ರಾಮದ ಕಟ್ಟಿಮನೆಯಲ್ಲಿಯೇ ಗ್ರಾಮದ ಮತ್ತು ಹಿರಿಯರ ಸಮ್ಮುಖದಲ್ಲಿ ಚರ್ಚಿಸಿ

ತೀರ್ಮಾನವಾಗುತ್ತಿದ್ದವು. ಕಟ್ಟೆಮನೆ ಗೌಡರು ಮತ್ತು ಸದಸ್ಯರು ಗ್ರಾಮದ ಒಂದು ಅರಳಿಕಟ್ಟೆ ಇಲ್ಲವೇ ದೇವರ ಗುಡಿಕಟ್ಟೆಯ ಮೇಲೆ ಕುಳಿತು ನ್ಯಾಯ ನಿರ್ಣಯ ಮಾಡುತ್ತಿದ್ದರು.

ಕಟ್ಟೆಮನೆಗಳ ಸಮಿತಿಯಲ್ಲಿ ತೀರ್ಮಾನವಾಗದೆ ಉಳಿದ ಜಗಳಗಳು ಆಯಾ ಪ್ರದೇಶಕ್ಕೆ ಸಂಬಂಧಿಸಿದ ಸಾಮಂತ ಅರಸರ ಸಮ್ಮುಖದಲ್ಲಿ ತೀರ್ಮಾನವಾಗುತ್ತಿದ್ದವು. ಅಲ್ಲಿಯೂ ತೀರ್ಮಾನವಾಗದೇ ಉಳಿದ ವ್ಯಾಜ್ಯಗಳು ಹರಪನಹಳ್ಳಿ ಅರಸರ ಸಮಿತಿಯಲ್ಲಿ ತೀರ್ಮಾನವಾಗುತ್ತಿದ್ದವು. ಅರಸ ೨ನೆಯ ಸೋಮಶೇಖರನಾಯಕನ ಕಾಲದಲ್ಲಿ ನ್ಯಾಯ ವಿಚಾರಣ ಸಮಿತಿಯಲ್ಲಿ ಅಯ್ಯಪ್ಪ ಚಿಂತಾಮಣಿಯಪ್ಪ, ಶೂರ ಚಿಂತಾಮಣಿಯಪ್ಪ, ಅಲೇಕಾರ ಹಂಪರಸಪ್ಪ, ಬೊಕ್ಕಸದ ಭೀಮಯ್ಯ[೪೬೧], ಇದ್ದರೆಂದೂ ಈ ಕಟ್ಟೆಮನೆ ಸಮಿತಿಯವರು ಗ್ರಾಮದ ಪ್ರತಿ ಮನೆಯ ಒಬ್ಬ ಹಿರಿಯರನ್ನು ನ್ಯಾಯ ನಿರ್ಣಯಿಸಲು ಆಹ್ವಾನಿಸುತ್ತಿದ್ದರು. ಸೋಮವಾರ ಸಂಜೆ ಅಥವಾ ಹಬ್ಬಗಳಲ್ಲಿ ಒಂದು ದಿನವನ್ನು ಗೊತ್ತುಪಡಿಸುತ್ತಿದ್ದರು. ಬಂದ ಹಿರಿಯರು ಪುರುಷ ಇಲ್ಲವೇ ಸ್ತ್ರೀಯರಾಗಬಹುದು. ಎರಡೂ ಕಡೆಯವರು ರಾಜಿಸೂತ್ರಗಳಿಗೆ ಒಪ್ಪಿದಲ್ಲಿ ಅವರಿಗೆ ತೆಂಗಿನಕಾಯಿ, ಅಡಿಕೆ, ಎಲೆ, ವೀಳ್ಯಕೊಟ್ಟು ದೇವರ ಮುಂದೆ ಇನ್ನೆಂದೂ ಹೀಗೆ ತಪ್ಪು ಮಾಡುವುದಿಲ್ಲ ಎಂಬುದಾಗಿ ಪ್ರಮಾಣ ಮಾಡಿಸಿ ಕಳುಹಿಸುತ್ತಿದ್ದರು.

**ದಂಡ ಅಥವಾ ಶಿಕ್ಷೆ**

ಅಪರಾಧದ ಪ್ರಮಾಣಕ್ಕನುಗುಣವಾಗಿ ಶಿಕ್ಷೆಗಳು ಇದ್ದವು. ಚಿಕ್ಕ ತಪ್ಪು ಮಾಡಿದವರಿಗೆ ದಂಡವನ್ನು ಹಣದ ರೂಪದಲ್ಲಿ ಪಾವತಿಸಬೇಕೆಂದು ತಿಳಿಸಲಾಗಿತ್ತು. ದೊಡ್ಡ ಅಪರಾಧಿಗಳಿಗೆ ಒಂದು, ಎರಡು ಇಲ್ಲವೇ ಮೂರು ತಿಂಗಳು ಕಾಲ ಸೆರೆಮನೆಗೆ ಹಾಕಲಾಗುತ್ತಿತ್ತು. ಗ್ರಾಮಕ್ಕೆ ಒಂದು ಚಾವಡಿಯಿದ್ದು ಅದರ ಒಂದು ಕೋಣೆಯಲ್ಲಿ ಅಪರಾಧಿಗಳನ್ನು ಒಂದರೆಡು ದಿನಗಳ ಕಾಲ ಇರಿಸುತ್ತಿದ್ದರು. ಕೆಲವೊಮ್ಮೆ ಅಪರಾಧಿಗಳನ್ನು ರಾಜಧಾನಿಗೆ ಕರೆದೊಯ್ಯುತ್ತಿದ್ದರು. ಕಳ್ಳತನ ಮಾಡಿದವರಿಗೆ ತಲೆ ಬೋಳಿಸಿ ಕತ್ತೆ ಮೇಲೆ ಕೂಡಿಸಿ ಮೆರವಣಿಗೆ ಮಾಡುತ್ತಿದ್ದರು. ಅತ್ಯಾಚಾರವೆಸಗಿದವರಿಗೆ ದೇವರ ಗುಡಿಯಲ್ಲಿ ಕಟ್ಟಿ ಎರಡು ದಿನಗಳ ಕಾಲ ಊಟ ನೀರು ಕೊಡದೇ ಶಿಕ್ಷಿಸುತ್ತಿದ್ದರು. ದೇವರ ಹಾಗೂ ಊರಿನ ಕೆಲಸಗಳಿಗೆ ವ್ಯತಿರಿಕ್ತವಾಗಿ ನಡೆದುಕೊಂಡರೆ ಎರಡು ಹೊನ್ನು ದಂಡ ಇಲ್ಲವೆ ಊರಿಂದಾಚೆ ಬಹಿಷ್ಕಾರ ಹಾಕಲಾಗುತ್ತಿತ್ತು. ರಾಜಾಜ್ಞೆ ಮೀರಿ ನಡೆದವರಿಗೆ ಮರಣ ದಂಡನೆ ಶಿಕ್ಷೆ ವಿಧಿಸಲಾಗುತ್ತಿತ್ತು. ಅಪರಾಧ ಮಾಡಿದವನ ಕುತ್ತಿಗೆಯನ್ನು ಖಡ್ಗದಿಂದ ಕತ್ತರಿಸಿ ತಗ್ಗಿಗೆ ಎಸೆಯುತ್ತಿದ್ದರು. ಇಲ್ಲವೆ ಬಂದು ಕಂದಕದಲ್ಲಿ ಎರಡು ಉದ್ದವಿರುವ ಗೂಟಗಳನ್ನು ನೆಟ್ಟು ಅವುಗಳಿಗೆ ಅಡ್ಡ ಒಂದು ತೊಲೆಯನ್ನು ಕಟ್ಟಿ ಅಪರಾಧಿಯನ್ನು ಅದಕ್ಕೆ ತೂಗು ಹಾಕಿ ಅವನ ಮುಖವನ್ನು ಬಟ್ಟೆಯಿಂದ ಮುಚ್ಚಿ ಅವನ ತೂಕಕ್ಕಿಂತ ಎರಡು ಪಟ್ಟು ಹೆಚ್ಚು ತೂಕದ ಕಲ್ಲುಗಳನ್ನು ಎರಡೂ ಕಾಲುಗಳಿಗೆ ತೂಗು ಹಾಕಿ ಅವನು ನಿಂತ ಆಧಾರವನ್ನು ತಪ್ಪಿಸುತ್ತಿದ್ದರು. ಆಗ ನೆಲೆಕ್ಕೆ ಬಿದ್ದು ಪ್ರಾಣ

ಬಿಟ್ಟಾಗ ದೇಹವನ್ನು ಮಣ್ಣಿನಲ್ಲಿ ಹೂಳುತ್ತಿದ್ದರು. ನೇಣುಗಂಬಕ್ಕೇರಿಸುವ ಸ್ಥಳದಲ್ಲಿ ಸೇನಾಪತಿ ಮತ್ತು ೫೦ ಜನ ಸೈನಿಕರನ್ನು ಬಿಟ್ಟು ಬೇರೆ ಯಾರೂ ಸುಳಿಯುವಂತಿರಲಿಲ್ಲ[೪೬೨].

ಹರಪನಹಳ್ಳಿಯಿಂದ ಕೊಟ್ಟೂರಿಗೆ ಹೋಗುವ ರಸ್ತೆಯ ಎಡಭಾಗದ ಪ್ರದೇಶ ಈಗ ಕೃಷಿ ಉತ್ಪನ್ನ ಮಾರುಕಟ್ಟೆ, ಈ ಸ್ಥಳದಲ್ಲಿ ಹಿಂದೆ ಪಾಳೆಯಗಾರರ ಕಾಲದಲ್ಲಿ ಅಪರಾಧಿಗಳನ್ನು ಶೂಲಕ್ಕೇರಿಸುತ್ತಿದ್ದರು. ಅರಸರು ಕಟುಕರನ್ನು ಬಿಜಾಪುರ, ಬೈಲಹೊಂಗಲಗಳಿಂದ ಕರೆಸಿ ಅವರಿಗೆ ಮದ್ಯಪಾನ ಮಾಡಿಸಿ ಅವರಿಂದ ದೊಡ್ಡ ಅಪರಾಧಿಗಳನ್ನು ಕೊಲೆ ಮಾಡಿಸುತ್ತಿದ್ದರು. ಪ್ರತಿ ಗ್ರಾಮದಲ್ಲಿ ತಳವಾರರಿದ್ದು ಪಾಳೆಯದ ಪ್ರಕಾರ ರಾತ್ರಿ ಖಡ್ಗ ಹಿಡಿದು ಗಸ್ತು ತಿರುಗುತ್ತಿದ್ದರು. ಯಾರಾದರೂ ಮಹಿಳೆಯರಿಗೆ, ಮಕ್ಕಳಿಗೆ, ದುರ್ಬಲರಿಗೆ ಹಿಂಸೆ ಕೊಟ್ಟರೆ, ಕಳ್ಳತನ ಮಾಡಿದರೆ ಅವರನ್ನು ಪಂಚಾಯಿತಿಕಟ್ಟೆ ಸಮಿತಿಗೆ ಹಾಜರುಪಡಿಸುತ್ತಿದ್ದರು. ಹಾಗೆಯೇ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಜನರು ಎತ್ತಿನ ಗಾಡಿಯಲ್ಲಿ ಕಾಲು ನಡಿಗೆಯಲ್ಲಿ ಪ್ರಯಾಣ ಮಾಡುತ್ತಿದ್ದಾಗ ಕಳ್ಳರ ಕಾಟ ಆಗಾಗ್ಗೆ ಸಂಭವಿಸುತ್ತಿದ್ದಿತು. ಅದು ಅರಸರ ಗಮನಕ್ಕೆ ಬಂದರೆ ಕಳ್ಳರು ಗುರುತಾದರೆ ಶಿಕ್ಷಿಸುತ್ತಿದ್ದರು. ಈ ಮರಣದಂಡನೆಗಳ ವ್ಯಾಜ್ಯಗಳು ಅರಸರ ನ್ಯಾಯಾಲಯದಲ್ಲಿ ತೀರ್ಮಾನವಾಗುತ್ತಿದ್ದವು. ಹಾಗೆಯೇ ಅರಸರು ಯುದ್ಧಕ್ಕೆ ಬರಲು ಆದೇಶ ಕಳುಹಿಸಿದಾಗ ಅದನ್ನು ಪಾಲಿಸದೇ ಇದ್ದವರಿಗೆ ಎರಡು ತಿಂಗಳು ಕಾರಾಗೃಹ ಶಿಕ್ಷೆ ವಿಧಿಸುತ್ತಿದ್ದರು. ಭೂಮಿಯ ಅಳತೆ, ದಾರಿ, ಮನೆ, ಜಾಗ, ಕಣದ ಜಾಗಗಳ ವಿಷಯಗಳಿಗೆ ಕಲಹ ಉಂಟಾದಾಗ ಸುಬೇದಾರ ಎಂಬ ಅಧಿಕಾರಿ ಶ್ಯಾನುಭೋಗ ಅಥವಾ ಕುಲಕರ್ಣಿಗಳ ನೆರವಿನಿಂದ ಅಳತೆ ಮಾಡಿಸಿ ಪರಿಹಾರ ಒದಗಿಸಿಸುತ್ತಿದ್ದರು. ಇಲ್ಲಿಯೂ ಇತ್ಯರ್ಥವಾಗದ ಜಗಳಗಳನ್ನು ಅರಸ ಇಲ್ಲವೇ ಸಾಮಂತ ಅರಸರ ಸಮಿತಿಗಳಿಗೆ ಕಳುಹಿಸುತ್ತಿದ್ದರು. ಹರಪನಹಳ್ಳಿ ಪಾಳೆಯಗಾರ ನಾಯಕ ಅರಸರ ಸಾಮಂತ ಅರಸರೆಂದರೆ ತಂಬ್ರಹಳ್ಳಿ ಓಬರನಾಯಕ, ಚಿಗಟೇರಿಯ ಶಿವನಪ್ಪನಾಯಕ, ವೀರನದುರ್ಗದ ರಾಮಯ್ಯನಾಯಕ, ಬಾಗಳಿ ರಂಗನಾಯಕ, ಕುರೇದಗಡ್ಡಕೋಟೆಯ ಭರಮನಗೌಡನಾಯಕ[೪೬೩]. ಈ ಸಾಮಂತ ಅರಸರ ಆಳ್ವಿಕೆಯ ವ್ಯಾಪ್ತಿ ಪ್ರದೇಶದಲ್ಲಿ ಪಂಚಾಯಿತಿ ಕಟ್ಟೆ ಮತ್ತು ಅರಸರ ನ್ಯಾಯ ಸಮಿತಿಗಳಿದ್ದು ಅರಸರಂತೆಯೇ ನ್ಯಾಯ ತೀರ್ಮಾನ ದಂಡ ಶಿಕ್ಷೆ ವಿಧಿಸುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರರು ಕೇವಲ ಅಪರಾಧಿಗಳಿಗೆ ಶಿಕ್ಷಿಸುವ ಗುಣವನ್ನು ಹೊಂದಿರದೆ ಕ್ಷಮಾಗುಣವನ್ನು ಹೊಂದಿದ್ದರು. ತಪ್ಪು ಮಾಡಿದವರು ತಪ್ಪು ಒಪ್ಪಿಕೊಂಡರೆ ಶತ್ರುಗಳು ಕೊಡುವ ಶಿಕ್ಷೆಯನ್ನು ತಾಳಲಾರದೆ ಓಡಿ ಬಂದು ಆರಸನ ಮೊರೆ ಹೊಕ್ಕರೆ ಅವರನ್ನು ರಕ್ಷಿಸುವ ಅದಕ್ಕೆ ಉಂಟಾದ ಕಷ್ಟ–ಕಾರ್ಪಣ್ಯಗಳನ್ನು ಸಹಿಸುವ ಶಕ್ತಿ–ತಾಳ್ಮೆಗಳನ್ನು ಹೊಂದಿದ್ದ ದಯಾಶೀಲಾ ಆಗಿದ್ದರು. ಇವರ ಶಾಸನಗಳಲ್ಲಿ ಪತ್ರಗಳಲ್ಲಿ 'ಭಾಷೆಗೆ ತಪ್ಪುವ ನಾಯಕರ ಗಂಡ' ಮರೆ ಹೊಕ್ಕರೆ ಕಾಯುವ

ಮರಾಂತರ ಗೆಲ್ವ ಬಾಗಳಿ ಸೋಮಶೇಖರನಾಯಕರ ಬಸವಪ್ಪನಾಯಕರು ಎಂದು ನಿರೂಪ ಬರೆಸಿರುವರು. ಇದರಿಂದ ಇವರ ದಯಾಗುಣ ಅರಿವಾಗುತ್ತದೆ.

ಸಾಮಾನ್ಯವಾಗಿ ಜನರಂತೆ ಹರಪನಹಳ್ಳಿ ನಾಯಕರಾದ ಬಾಗಳಿ ಬಸಪ್ಪನಾಯಕ ಮತ್ತು ಕೊನೆಯ ಸೋಮಶೇಖರನಾಯಕರು ಕಾರಾಗೃಹ ವಾಸ ಅನುಭವಿಸಿದ್ದರು. ಬಾಗಳಿ ಬಸಪ್ಪನಾಯಕ ದಿವಾನ ಹಂಪರಸಪ್ಪನ ಸಲಹೆ ಕೇಳದೆ ಹೆಂಡತಿ ಮತ್ತು ಸರದಾರರನ್ನು ಕರೆದುಕೊಂಡು ಹಗರಿಬೊಮ್ಮನಹಳ್ಳಿಗೆ ಹೋಗಿ ಟಿಪ್ಪುಸುಲ್ತಾನನ ಕೈ ಸೆರೆಯಾಗಿ ಕಬ್ಬಾಳದುರ್ಗದ ಸೆರೆಮನೆಯಲ್ಲಿ ಮರಣ ಹೊಂದಿದ. ಹಾಗೆಯೇ ೨ನೇ ಸೋಮಶೇಖರನಾಯಕ ದಿವಾನ ವಿರೂಪಾಕ್ಷಪ್ಪನ ಸಲಹೆಯನ್ನು ಧಿಕ್ಕರಿಸಿ ಹರಿಹರಕ್ಕೆ ಹೋಗಿ ಬ್ರಿಟೀಷ್‌ರ ಒಡಂಬಡಿಕೆಗೆ ಒಪ್ಪಿಗೆ ನೀಡದೆ ಬ್ರಿಟೀಷರ ಸೆರೆ ಸಿಕ್ಕು ಶ್ರೀರಂಗಪಟ್ಟಣದ ಕಾರಾಗೃಹದಲ್ಲಿದ್ದು ಮರಣ ಹೊಂದಿದನು.

ಹೀಗೆ ಹರಪನಹಳ್ಳಿ ಪಾಳೆಯಗಾರರು ತಮ್ಮದೇ ನ್ಯಾಯ ತೀರ್ಮಾನ ವ್ಯವಸ್ಥೆಯನ್ನು ಹೊಂದಿದ್ದು ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆ ನೆಲೆಸುವಂತೆ ಮಾಡಿ ದಕ್ಷ-ಸಮರ್ಥ ಆಡಳಿತ ನಿರ್ವಹಣೆಗೆ ಹೆಸರಾಗಿದ್ದರು.

## ಅಡಿ ಟಿಪ್ಪಣಿಗಳು

೧. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಪುಟ–೧೭೬.

೨. ಚಿಕ್ಕೇರೂರು ಗೋವಿಂದಾಚಾರ್ಯ, ಹರಪನಹಳ್ಳಿ ಪಾಳೆಯಗಾರರು, ಅಪ್ರಕಟಿತ ಹಸ್ತಪ್ರತಿ, ಪುಟ–೩೬

೩. ಸದಾಶಿವಪ್ಪ ಕುಂ.ಬಾ., ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಪುಟ–೮೬.

೪. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ಪುಟ–೧೧೦

೫. ಅದೇ ಪುಟ–೫೮.

೬. ಅದೇ ಪುಟ–೫೮.

೭. ಅದೇ ಪುಟ–೫೯.

೮. ಅದೇ ಪುಟ–೫೯.

೯. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ–೮೫

೧೦. ಅದೇ ಪುಟ–೮೩.

೧೧. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪುಟ–೩೮

೧೨. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ–೭೬

೧೩. ಮುಗಳಿ ರಂ.ಶ್ರೀ., ಕರ್ನಾಟಕದ ಸಾಂಸ್ಕೃತಿಕ ಪರಂಪರೆ (ಅನು) ಡಾ.ಕೆ.ಜಿ.ಶಾಸ್ತ್ರಿ ಮತ್ತು ಎಸ್.ಸಿ.ಪಾಟೀಲ, ಪುಟ–೧೪೨

೧೪. Appadorai A, Economic conditions in south India II P.738

೧೫. ಲಲಿತಾಂಬ ಎನ್.ಆರ್., ಅಪ್ರಕಟಿತ ಮಹಾಪ್ರಬಂಧ ಪುಟ–೫೭.

೧೬. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ–೧, ಪುಟ–೨೪೧.

೧೭. ಅದೇ ಪುಟ–೨೨೪.

೧೮. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪುಟ–೫೮.

೧೯. ಕ.ವಿ.ವಿ.ಶಾಸನ ಸಂ–೧, ಪುಟ–೨೪೨.

೨೦. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ–೩೧.

೨೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪುಟ–೭೪.

೨೨. ಗಿರಿಜಾ ಟಿ, ೨೦೦೪, ಪಂಚಗಣಾಧೀಶ್ವರರಲ್ಲಿ ಶ್ರೀಗುರು ಕೊಟ್ಟೂರೇಶ್ವರ, ಪುಟ–೧೪೦.

೨೩. ಶ್ಯಾಮಾಶಾಸ್ತ್ರಿ ಆರ್. (ಸಂ), ೧೯೯೭, ಕೌಟಿಲ್ಯನ ಅರ್ಥಶಾಸ್ತ್ರ ಭಾಗ–೨, ಪುಟ–೪೬.

೨೪. ವಿಜ್ಞಾನೇಶ್ವರನ ಮಿತಾಕ್ಷರ (ಅನು) ಘರಪುರೆ. ಜೆ.ಆರ್. ೨ನೆಯ ಮುದ್ರಣ, ಬೊಂಬಾಯಿ, ೧೯೩೯, ಪುಟ-೧೫೬.

೨೫. ಬಸವರಾಜ ಕುಂಚೂರು, ೨೦೧೨, ನಮ್ಮೂರ ಕೆರೆಗಳು, ಪುಟ-೧೧.

೨೬. ಎ.ಕ.ಸಂ-೧೪, ನಂ-೦೪, ಜುಲೈ-೧೯೧೭

೨೭. ಮಿರಾಶಿ ವಿ.ವಿ., ದಿ ಹಿಸ್ಟರಿ ಅಂಡ್ ಇನ್ಸಕ್ರಿಪ್ಷನ್ ಆಫ್ ದಿ ಶಾತಾವಾಹನಾಸ್ ಅಂಡ್ ವೆಸ್ಟರ್ನ್‌ಕ್ಷತ್ರಪಾಸ್ ಭಾಗ-೨, ವಿಭಾಗ-೩, ನಂ-೩೪, ಪುಟ-೮೫.

೨೮. ಅದೇ ವಿಭಾಗ-೧, ನಂ-೩೭, ಪುಟ-೯೨.

೨೯. ಎಂ.ಎ.ಆರ್., ೧೯೨೯, ನಂ-೧.

೩೦. ಎ.ಕ.ಸಂ-೭, ಶಿಕಾರಿಪುರ, ಪುಟ-೧೭೬.

೩೧. ಹೈದ್ರಾಬಾದ್ ಆರ್ಕಿಯಾಲಜಿಕಲ್ ಸೀರಿಸ್, ನಂ-೫

೩೨. ಇ.ಸಿ.ಆರ್. (ಎಪಿಗ್ರಾಫಿಯಾ ಕರ್ನಾಟಕ-ಸಂಸ್ಕರಿಸಿದ ಮುದ್ರಣ) ಸಂ-೮, ಹೊಳೆ ನರಸೀಪುರ, ಪುಟ-೪೨.

೩೩. ಅದೇ, ಅರಕಲಗೂಡು, ಪುಟ-೧೧.

೩೪. ಎ.ಕ.ಸಂ.೧೦, ಮುಳುಬಾಗಿಲು, ಪುಟ-೧೭೨-೧೭೩.

೩೫. ಎಸ್.ಐ.ಐ., ೪ ನಂ-೨೬೭, ಪುಟ-೬೧-೬೬.

೩೬. ಫ್ರಾನ್ಸಿಸ್ ಬುಕನಾನ್, ೧೯೮೮, A journey from madras throw the countries of Mysore canaras and Malabar Assian Educational services, New Delhi, ಸಂ-೧, ಪುಟ-೪೯.

೩೭. ಅದೇ ಪುಟ-೨೬೭.

೩೮. ದೀಕ್ಷಿತ್ ಜಿ.ಎಸ್., ಜಿ.ಆರ್.ಕುಪ್ಪುಸ್ವಾಮಿ, ಎಸ್.ಕೆ.ಮೋಹನ್(ಅನು) ನೀಲತ್ತಹಳ್ಳಿ ಕಸ್ತೂರಿ ೨೦೦೦, ಕರ್ನಾಟಕದಲ್ಲಿ ಕೆರೆ ನೀರಾವರಿ, ಪುಟ-೧೨.

೩೯. ಎ.ಕ.ಸಂ-೧೦, ಪುಟ-೯೭., ಎಸ್.ಐ.ಐ. ೯ ಪಿ ೧೧, ನಂ೫೨೮, ಎಸ್ಸೈಐ ಸಂ-೬, ನಂ-೨೬೭., ಪುಟ-೩೧೮. ಕ್ರಿ.ಶ.೧೪೧೦

೪೦. ಶ್ರೀಕೃಷ್ಣದೇವರಾಯನ ಅಮುಕ್ತಮೌಲ್ಯದ ನಿರುಪಮ(ಅನು) ಸರ್ಗ-೪, ಶ್ಲೋಕ, ಪುಟ-೨೩೬.

೪೧. ಎ.ಕ.ಸಂ-೧೧, ಜಗಳೂರು ೪೧, ಕ್ರಿ.ಶ.೧೫೨೬.

೪೨. ಅದೇ ದಾವಣಗೆರೆ ೧೨೦, ಜಗಳೂರು ೨೪, ಕ್ರಿ.ಶ.೧೫೫೧.

೪೩. ಅದೇ ದಾವಣಗೆರೆ ೨೯, ಕ್ರಿ.ಶ.೧೪೨೪.

೪೪. ಇಂದೂಬಾಯಿ ಟಿ.ಕೆ.(ಸಂ) ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಪದ್ಯ ೨೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೭, ಪುಟ-೨೬.

೪೫. ಎ.ಕ. ೧೧, ದಾವಣಗೆರೆ ೬೮, ಕ್ರಿ.ಶ.೧೩೮೨.

೪೬. ಎ.ಕ. ೭, ಹೊನ್ನಾಳಿ ೭, ಕ್ರಿ.ಶ.೧೬೨೩.

೪೭. ಎ.ಕ. ೧೧, ದಾವಣಗೆರೆ ೨೩, ಕ್ರಿ.ಶ.೧೪೧೦.

೪೮. ಪಂಡಿತ ಎಸ್. ಬಸಪ್ಪ(ಸ), ೧೯೯೭, ದೇವಕವಿಕೃತ ಮುರುಳಸಿದ್ಧನ ಕಾವ್ಯ ಪದ್ಯ ೪೪, ತರಳುಬಾಳು ಪ್ರಕಾಶನ, ಸಿರಿಗೆರೆ, ಪುಟ-೨.

೪೯. ಎ.ಕ. ೧೧, ದಾವಣಗೆರೆ ೩೪, ಕ್ರಿ.ಶ.೧೩೭೯.

೫೦. ಎ.ಕ. ೦೭, ಚನ್ನಗಿರಿ ೬೪.

೫೧. ಎ.ಕ. ೧೧, ದಾವಣಗೆರೆ ೩೪, ಕ್ರಿ.ಶ.೧೩೭೯.

೫೨. ಎಸ್.ಐ.ಐ.೯ ಸಂ-೨ ನಂ-೫೨೨, ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ೨೧೬, ಕ್ರಿ.ಶ.೧೫೨೭

೫೩. ಎ.ಕ.೭, ಚೆನ್ನಗಿರಿ ೨೦, ಕ್ರಿ.ಶ.೧೭೧೫.

೫೪. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ-೧, ಹರಪನಹಳ್ಳಿ ೧೯೨, ಕ್ರಿ.ಶ.೧೬೪೪.

೫೫. ಕಲ್ಬುರ್ಗಿ ಎಂ.ಎಂ.(ಸಂ), ಕರ್ನಾಟಕ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೧೯೯೪, ಪುಟ-೨೫.

೫೬. ಎಸ್.ಐ.ಐ.೯ ಸಂ ೨ ನಂ.೫೯೫, ಕ.ವಿ.ವಿ. ಶಾಸನ ಸಂ-೧, ಹರಪನಹಳ್ಳಿ ೧೯೨.

೫೭. ಎಸ್.ಐ.ಐ.೯(೧), ೨೫೪, ೧೧೪೮, ಕೊಟ್ಟಕಲ್ಲು

೫೮. ಅದೇ.

೫೯. ಅದೇ

೬೦. ಕ.ವಿ.ವಿ.ಶಾಸನ ಸಂ-೧, ಶಾಸನ ಸಂ-೯೫, ೧೧೭೪, ಬಾಗಳಿ

೬೧. ಎಸ್.ಐ.ಐ. ೯ (೧) ೨೮೧, ೧೧೮೮, ಬಾಗಳಿ.

೬೨. ಅದೇ ೧೭೪, ಬಾಗಳಿ

೬೩. ಅದೇ ೮೧, ೧೦೧೮, ಬಾಗಳಿ.

೬೪. ಅದೇ ೧೭೪, ಬಾಗಳಿ.

೬೫. ಅದೇ ೧೭೩, ೧೧೦೨, ಬಾಗಳಿ.

೬೬. ಅದೇ ೨೭೧, ೧೧೭೩, ೭೪, ಚಟ್ನಿಹಳ್ಳಿ

೬೭. ಅದೇ

೬೮. ಅದೇ ೨೪೫, ೧೧೪೬, ಚಟ್ನಿಹಳ್ಳಿ

೬೯. ಎಸ್.ಐ.ಐ. ೯(೧) ೮೫, ೧೦೩೦ ತೆಲಗಿ.

೭೦. ಅದೇ ೧೧೧೩, ೧೦೪೫, ಹಿರೇಮ್ಯಾಗಳಗೇರಿ

೭೧. ಎಸ್.ಐ.ಐ.೬, ೫೭೫, ಉಚ್ಚಂಗಿದುರ್ಗ.

೭೨. ಎಸ್.ಐ.ಐ. ೯(೧) ೨೪೫, ೧೧೪೬, ಚಟ್ನಿಹಳ್ಳಿ.

೭೩. ವಾಸುದೇವ ಬಡಿಗೇರ. ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೧, ಪುಟ-೧೯೨.

೭೪. ಸಂತೋಷ್ ಎನ್.ಜಿ., ೨೦೦೯, ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ಪಾಳೆಯಗಾರರ ಕಾಲದ ಕೃಷಿ ವ್ಯವಸ್ಥೆ, ಅಪ್ರಕಟಿತ ಮಹಾಪ್ರಬಂಧ, ಪುಟ-೧೧೮.

೭೫. ಸಣ್ಣ ನೀರಾವರಿ ಇಲಾಖೆಯ ಅಂಕಿ ಅಂಶಗಳ ಪ್ರಕಾರ

೭೬. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೬೩.

೭೭. ಗಿರಿಜಾ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ-೭೧೧

೭೮. ಬಸವರಾಜ ಕುಂಚೂರು, ಪೂರ್ವೋಕ್ತ, ಪುಟ-೩೦.

೭೯. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೧೦೫.

೮೦. ಸಣ್ಣ ನೀರಾವರಿ ಇಲಾಖೆಯ ಅಂಕಿ ಅಂಶಗಳು.

೮೧. ಗಿರಿಜಾ ಟಿ., ಪೂರ್ವೋಕ್ತ, ಪುಟ-೭೦೫.

೮೨. ಬಸವರಾಜ ಕುಂಚೂರು, ಪೂರ್ವೋಕ್ತ, ಪುಟ-೨೯.

೮೩. ನೀರಾವರಿ ಇಲಾಖೆಯ ಅಂಕಿ ಅಂಶಗಳು.

೮೪. ಮಂಜುನಾಥ ಯಲ್ಲಾಪುರದ ಅವರು ಬರೆದ ಲೇಖನ ದಿ.೧೯.೦೭.೨೦೧೨, ಪ್ರಜಾವಾಣಿ ದಿನಪತ್ರಿಕೆ.

೮೫. ಬಸವರಾಜ ಕುಂಚೂರು, ಪೂರ್ವೋಕ್ತ, ಪುಟ-೧೩೩

೮೬. ನೀರಾವರಿ ಇಲಾಖೆಯ ಅಂಕಿ ಅಂಶಗಳು.

೮೭. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೬೭.

೮೮. ಅದೇ ಪುಟ-೧೦೫.

೮೯. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು-ಒಂದು ಅಧ್ಯಯನ, ಪುಟ-೩೫.೩೬.

೯೦. ಪುಟ್ಟಣ್ಣ ಎಂ.ಎಸ್., ಪುಟ-೫೮.

೯೧. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೧೦೯.

೯೨. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ-೧, ಹರಪನಹಳ್ಳಿ ೧೯೨, ಕ್ರಿ.ಶ.೧೬೪೪.

೯೩. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೧೨೪.

೯೪. ಸಂತೋಷ್ ಎನ್.ಜಿ., ೨೦೦೯, ಪೂರ್ವೋಕ್ತ, ಪುಟ-೧೧೩.

೯೫. ಕೊಟ್ರಯ್ಯ ಸಿ.ಎಂ.(ಮೂಲ), ಧೃವನಾರಾಯಣ(ಅನು) ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೧, ಪುಟ-೧೦೪.

೯೬. ಎ.ಕ.೧೧, ಜಗಳೂರು-೨೦.

೯೭. ಕ.ವಿ.ವಿ. ಶಾಸನ ಸಂ-೧, ಹರಪನಹಳ್ಳಿ ೧೮೪, ಕ್ರಿ.ಶ.೧೧೫೦.

೯೮. ಶಿವಣ್ಣ ಕೆ.ಎಸ್.(ಸಂ), ಕರ್ನಾಟಕ ಚರಿತ್ರೆ ಸಂಪುಟ-೩, ಪ್ರಸರಾಂಗ, ಕ.ವಿ.ವಿ. ಹಂಪಿ, ೧೯೯೭, ಪುಟ-೧೬೨.

೯೯. ಚಿದಾನಂದಮೂರ್ತಿ ಎಂ, ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ಪುಟ-೩೬೨-೩೭೦.

೧೦೦. ಇಂಪಿರಿಯಲ್ ಗೆಜಟೀಯರ್ ಆಫ್ ಇಂಡಿಯಆ ಸಂ-೩, ಪುಟ-೩೧೮.

೧೦೧. ರಾಬರ್ಟಸಿವೆಲ್ ಮೂಲ), ಸದಾನಂದ ಕನವಳ್ಳಿ(ಅನು) ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ, ಎರಡನೆಯ ಮುದ್ರಣ, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೬, ಪುಟ-೩೩೨.

೧೦೨. ಸದಾಶಿವಪ್ಪ ಕುಂ.ಬಾ., ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ-೩೦.

೧೦೩. ಅದೇ ಪುಟ-೧೦೫.

೧೦೪. ಅದೇ ಪುಟ-೧೦೫.

೧೦೫. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೩೧.

೧೦೬. ಚಿದಾನಂದಮೂರ್ತಿ ಎಂ, ೧೯೭೯, ಪೂರ್ವೋಕ್ತ, ಪುಟ-೩೬೪.

೧೦೭. ಕುಲಕರ್ಣಿ ನಾಗೇಶ ರಂಗೋ (ಅನು), ಯಜ್ಞವಲ್ಕ್ಯಸ್ಮೃತಿ, ಪುಟ-೧೯೧.

೧೦೮. ಎಸ್.ಐ.ಈ.೯(೧) ೨೭೬, ೧೧೮೩, ಮಸಲವಾಡ (ಹರಪನಹಳ್ಳಿ ತಾಲ್ಲೂಕು)

೧೦೯. ಕ.ವಿ.ವಿ.ಶಾಸನ ಸಂ-೧, ಶಾಸನ ಸಂ-೧೧೨೧, ಕೊಂಚಗರೆ ಸಿರಗುಪ್ಪ ತಾಲ್ಲೂಕು

೧೧೦. ಎಸ್.ಐ.ಐ.೯(೧) ೨೯೭, ೧೧೭೭, ಕುರುಗೋಡು (ಬಳ್ಳಾರಿ ತಾಲ್ಲೂಕು) ಮತ್ತು ೨೫೩, ೧೧೪೮, ಓರವಾಯಿ (ಬಳ್ಳಾರಿ ತಾಲ್ಲೂಕು)

೧೧೧. ಅದೇ, ೨೨೫, ೧೧೩೧, ಬೈಲೂರು (ಬಳ್ಳಾರಿ ತಾಲ್ಲೂಕು)

೧೧೨. ಅದೇ ೧೬೬, ೧೧೯೩, ಕುಡುತಿನಿ (ಬಳ್ಳಾರಿ ತಾಲ್ಲೂಕು)

೧೧೩. ಕ.ವಿ.ಶಾ.ಸಂ-೧, ಶಾಸನ ಸಂ-೩೦, ೧೦೧೭, ಬಲ್ಲಕುಂದೆ (ಸಿರಗುಪ್ಪ ತಾಲ್ಲೂಕು)

೧೧೪. S.I.I.IX(i), 44, 1049, ಕಲ್ಕುಂಬ (ಬಳ್ಳಾರಿ ತಾಲ್ಲೂಕು)

೧೧೫. ಅದೇ, ೩೩೦, ೧೧೩೩, ಹಿರೇಹಡಗಲಿ(ಹಡಗಲಿ ತಾಲ್ಲೂಕು) ಮತ್ತು ಕ.ವಿ.ವಿ.ಶಾಸನ ಸಂ–೧, ಹರಪನಹಳ್ಳಿ ೧೧೩.

೧೧೬. ಅದೇ ೧೬೫, ೧೯೯, ಕುರುವತ್ತಿ (ಹಡಗಲಿ ತಾಲ್ಲೂಕು)

೧೧೭. ಕ.ವಿ.ಶಾಸನ ಸಂ–೧, ಶಾಸನ ಸಂ–೩೫, ಬಲ್ಲಕುಂದೆ (ಸಿರಗುಪ್ಪ ತಾಲ್ಲೂಕು)

೧೧೮. ಕೃಷ್ಣಭಟ್ಟ ಕೆ. (ಅನು) ಕೌಟಿಲ್ಯನ ಅರ್ಥಶಾಸ್ತ್ರ, ಅಧಿಕರಣ, ii-iಪುಟ–೯೮–೯೯.

೧೧೯. ಕುಲಕರ್ಣಿ ನಾಗೇಶ ರಂಗೋ, ಪೂರ್ವೋಕ್ತ, ಪುಟ–೭೪.

೧೨೦. S.I.I.IX(i), ೧೦೪, ೧೦೪೬, ಮೋರಗೆರೆ (ಹಡಗಲಿ ತಾಲ್ಲೂಕು)

೧೨೧. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪುಟ–೨೩೩.

೧೨೨. S.I.I.IX(i), ೧೪೧, ೧೦೭೯, ನೀಲಗುಂದ.

೧೨೩. ಅದೇ ೧೪೧, ೧೦೭೯.

೧೨೪. ಅದೇ ೨೪೫, ೧೧೪೬, (ಹರಪನಹಳ್ಳಿ ತಾಲ್ಲೂಕು)

೧೨೫. ಚನ್ನಪ್ಪ ಉತ್ತಂಗಿ (ಸಂ) ಸರ್ವಜ್ಞನ ವಚನಗಳು, ೧೨೨೯, ಪುಟ–೧೬೨.

೧೨೬. ವೆಂಕಟರತ್ನಂ ಎ.ವಿ., ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ,. ಮೈಸೂರು, ೧೯೭೯, ಪುಟ–೫೭.

೧೨೭. ಶಿವಣ್ಣ ಕೆ.ಎಸ್.(ಸಂ), ಕರ್ನಾಟಕ ಚರಿತ್ರೆ ಸಂ–೩, ಪ್ರಸಾರಾಂಗ, ಕ.ವಿ.ವಿ.ಹಂಪಿ, ೧೯೯೭, ಪುಟ–೧೫೩.

೧೨೮. ಗುರುರಾಜಾಚಾರ್ ಎಸ್. ಎ ನೋಟ್ ಆನ್ ಸಂ ಅಗ್ರಿಕಲ್ಚರ್ ಆಪರೇಷನ್ಸ್ ಇನ್ ಮೆಡಿವೆಲ್ ಕರ್ನಾಟಕ, ದೇವರಾಜ್ ಡಿ.ವಿ. ಚನ್ನಬಸಪ್ಪ ಎಸ್. ಪಾಟೀಲ್(ಸಂ) ಡೈರಕ್ಟರೇಟ್ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಸಿಯಂ, ಮೈಸೂರು, ೧೯೯೫, ಪುಟ–೯೫.

೧೨೯. ಗುರುರಾಜಚಾರ್ ಎಸ್. ಸಮ್ ಆಸ್‌ಪೆಕ್ಟ್ ಆಫ್ ಎಕನಾಮಿಕ್ ಅಂಡ್ ಸೋಶಿಯಲ್ ಲೈಫ್ ಇನ್ ಕನಾಟಕ, ಪ್ರಸಾರಾಂಗ, ಮೈಸೂರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪, ಪುಟ–೧೯, ೪೩.

೧೩೦. ಫ್ರೆಡರಿಕ್ ಚಾಲ್ಮರ್ಸ್ ಎರಿಪೋರ್ಟ್ ಆಫ್ ಚಿತ್ರದುರ್ಗ ಡಿಸ್ಟ್ರಿಕ್ಟ್, ಮೈಸೂರು, ಪುಟ–೫.

೧೩೧. ಸಂತೋಷ್ ಎನ್.ಜಿ., ೨೦೦೯, ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ಪಾಳೆಯಗಾರರ ಕಾಲದ ಕೃಷಿ ವ್ಯವಸ್ಥೆ, ಅಪ್ರಕಟಿತ ಮಹಾಪ್ರಬಂಧ, ಪುಟ–೮೧.

೧೩೨. ಕ.ವಿ.ವಿ. ಶಾಸನ ಸಂ–೧, ಹರಪನಹಳ್ಳಿ ೧೩೩.

೧೩೩. ಅದೇ ಹರಪನಹಳ್ಳಿ ೨೧೨, ಕ್ರಿ.ಶ.೧೬೦೦.

೧೩೪. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ–೯೯–೧೦೦.

೧೩೫. ಅದೇ ಪುಟ-೧೦೫.

೧೩೬. ಕ.ವಿ.ವಿ. ಶಾಸನ ಸಂ-೧, ಹರಪನಹಳ್ಳಿ ೨೧೨, ಕ್ರಿ.ಶ.೧೬೦೦.

೧೩೭. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ-೯೯-೧೦೦

೧೩೮. ಅದೇ ಪುಟ-೧೦೫.

೧೩೯. ಕೃಷಿಯಂ ಮಾರ್ಪಂ ಒಕ್ಕಲಿಗಂ (ಮಂಗರಾಜ ೩೭೦, ಉಲ್ಲೇಖ 'ಕಿನಿ' ಪುಟ-೨೯೭)

೧೪೦. ಅವಸದಿಂ ಪಳೆಗೆಯ್ವಂ ಕಸಮಂ ಶೋಧಿಸದೆ ಒಕ್ಕಲಿಗನ ಮೋಲೆ (ಶಮದ ೨೬೭, ಉಲ್ಲೇಖ 'ಕಿನಿ' ಪುಟ-೨೯೭)

೧೪೧. ಕೃಷ್ಣದೇವರಾಯನ ಅಮುಕ್ತಮೌಲ್ಯದ ನಿರುಪಮ(ಅನು) ಕ.ವಿ.ವಿ. ಹಂಪಿ, ೧೯೭೯, ಪುಟ-೨೨.

೧೪೨. ಚಿದಾನಂದಮೂರ್ತಿ ಎಂ, ಪೂರ್ವೋಕ್ತ, ಪುಟ-೩೬೪.

೧೪೩. ಚನ್ನಪ್ಪ ಉತ್ತಂಗಿ(ಸಂ) ಸರ್ವಜ್ಞನ ವಚನಗಳು, ಸಂಖ್ಯೆ ೧೩೫೮.

೧೪೪. ದೇ.ಜವರೇಗೌಡ (ಸಂ), ಜನಪ್ರಿಯ ಕನಕದಾಸ ಸಂ-೧೯೯೮, ಪುಟ-೧೭.

೧೪೫. ಸದಾಶಿವಪ್ಪ ಕುಂ.ಬಾ., ೨೦೦೮, ಹರಪನಹಳ್ಳಿ ತಾಲ್ಲೂಕು ದರ್ಶನ, ಪುಟ-೯೩.

೧೪೬. ದೇ.ಜವರೇಗೌಡ (ಸಂ), ೧೯೯೮, ಪೂರ್ವೋಕ್ತ, ಪುಟ-೭೬.

೧೪೭. ಚನ್ನಪ್ಪ ಉತ್ತಂಗಿ(ಸಂ), ಪೂರ್ವೋಕ್ತ, ವಚನ ಪುಟ-೧೩೫೯

೧೪೮. ಪುರಾಣನಾಮ ಚೂಡಾಮಣಿ, ೧೯೫೫, ಪುಟ-೬೦೦.

೧೪೯. ಚಿನ್ನಸ್ವಾಮಿ ಸೋಸಲೆ, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕ.ವಿ.ವಿ. ಹಂಪಿ ಪುಟ-೧೨೬.

೧೫೦. ಎನ್‌ಸೈಕ್ಲೋಪೀಡಿಯಾ ಆಫ್ ರಿಲೀಜಿಯನ್ ಅಂಡ್ ಎಥಿಕ್ಸ್ ಸಂ-೧, ಪುಟ-೨೨೮.

೧೫೧. ಶಿವಣ್ಣ ಕೆ.ಎಸ್., ೧೯೮೩, ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ-೩.

೧೫೨. ಶಿವಣ್ಣ ಕೆ.ಎಸ್., ಕರ್ನಾಟಕ ಚರಿತ್ರೆ ಸಂ-೩ ಪುಟ-೧೫೪.

೧೫೩. ವಿವೇಕ ರೈ (ಸಂ), ಪ್ರವಾಸಿ ಕಂಡ ವಿಜಯನಗರ, ೨೦೦೫, ಪ್ರಸಾರಾಂಗ, ಕ.ವಿ.ವಿ. ಹಂಪಿ, ಪುಟ-೩೫.

೧೫೪. ಶಿವಣ್ಣ ಕೆ.ಎಸ್., ೧೯೮೩, ಪೂರ್ವೋಕ್ತ, ಪುಟ-೩.

೧೫೫. ಲಕ್ಷ್ಮಣ್ ತೆಲಗಾವಿ (ಸಂ), ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಪುಟ-೪೨೭-೪೨೮.

೧೫೬. ಇಂದೂಬಾಯಿ ಟಿ.ಕೆ.(ಸಂ), ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಸಣ್ಣ ಹಾಡುಗಳು ೧೧, ಪದ್ಯ-೩.

೧೫೭. ಎ.ಕ.೧೧, ದಾವಣಗೆರೆ ೧೪೨, ಮತ್ತು ಭಟ್ ಎಂ.ಎಂ. (ಸಂ), ಸರ್ವಜ್ಞನ ವಚನ ಸಂಗ್ರಹ, ನವದೆಹಲಿ, ೧೯೭೧, ವಚನ ೭೨೫, ೫೬೫.

೧೫೮. ಶಿವಣ್ಣ ಕೆ.ಎಸ್., ಕರ್ನಾಟಕ ಚರಿತ್ರೆ ಸಂ-೩ ಪುಟ-೧೫೩.

೧೫೯. ಸದಾಶಿವಪ್ಪ ಕುಂ.ಬಾ., ೨೦೦೮, ಪೂರ್ವೋಕ್ತ, ಪುಟ-೯೩.

೧೬೦. ಇಂದೂಬಾಯಿ ಟಿ.ಕೆ. (ಸಂ), ಶಂಕರನಗಂಡ, ಪದ್ಯ ೪೩, ಪುಟ-೪೩.

೧೬೧. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ಕ್ರಿ.ಶ.೧೭೭೨.

೧೬೨. ಸದಾಶಿವಪ್ಪ ಕುಂ.ಬಾ., ೧೯೯೬, ಹರಪನಹಳ್ಳಿ ಪಾಳೆಯಗಾರರು, ಅನುಬಂಧಗಳು (ಶಾಸನಗಳು) ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ಪುಟ-೯೭.

೧೬೩. ಅದೇ ಪುಟ-೯೭.

೧೬೪. ಶಿವಣ್ಣ ಕೆ.ಎಸ್.(ಸಂ), ಕ.ಚ.ಸಂ-೩, ಪೂರ್ವೋಕ್ತ, ಪುಟ-೧೫೪.

೧೬೫. ಇಂದೂಬಾಯಿ ಟಿ.ಕೆ. (ಸಂ), ಪದ್ಯ ೪೪೨, ಪುಟ-೭೩.

೧೬೬. ಹಿರೇಮಠ ಬಿ.ಆರ್. ೧೯೮೬, 'ಶಾಸನಗಳಲ್ಲಿ ಕರ್ನಾಟಕದ ವರ್ತಕರು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪುಟ-೧೧೯-೧೨೦.

೧೬೭. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೧೮, ಕ್ರಿ.ಶ.೧೭೭೯.

೧೬೮. ಭಟ್‌ಸೂರಿ (ಸಂ), ಶಾಸನ ಅಧ್ಯಯನ ಸಂ-೨, ಸಂಚಿಕೆ-೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೫, ಪಿಟ-೩೬.

೧೬೯. S.I.I.IX(i), 141, 1076, ನೀಲಗುಂದ.

೧೭೦. ಅದೇ ೩೭೧, ೧೨೨೩, ಕೋಗಳಿ.

೧೭೧. ಅದೇ ೨೯೭, ೧೧೭೭, ಕುರುಗೋಡು (ಬಳ್ಳಾರಿ ತಾಲ್ಲೂಕು)

೧೭೨. ಸಂತೋಷ್ ಎನ್ ಜಿ. ೨೦೦೯, ಪೂರ್ವೋಕ್ತ, ಪುಟ-೬೦.

೧೭೩. ಫ್ರಾನ್ಸಿಸ್ ಬುಕನಾನ್ ಪೂರ್ವೋಕ್ತ, ಪುಟ-೩೪೩.

೧೭೪. ವಿರೂಪಾಕ್ಷಿ ಪೂಜಾರಹಳ್ಳಿ, ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥಾಸಾರ, ಪ್ರಸಾರಾಂಗ, ಕ.ವಿ.ವಿ. ಹಂಪಿ, ಪುಟ-೫೩.

೧೭೫. ಅದೇ.

೧೭೬. ಬುಕನಾನ್ ಪೂರ್ವೋಕ್ತ, ಪುಟ-೩೪೩.

೧೭೭. ಪಂಡಿತ ಎಸ್.ಬಸಪ್ಪ (ಸಂ), ದೇವಕವಿ ಕೃತ ಮರುಳಸಿದ್ಧನ ಕಾವ್ಯ, ಮೊದಲನೆ ಸಂಧಿ, ಪದ್ಯ ೧೮, ಪುಟ-೬.

೧೭೮. ಇಂದೂಬಾಯಿ ಟಿ.ಕೆ. ಪೂರ್ವೋಕ್ತ, ಹಾಡು-೨, ಪದ್ಯ-೨೮, ಪುಟ-೭೬.

೧೭೯. ಅದೇ ಪುಟ-೭೬.

೧೮೦. ಅದೇ ಪುಟ-೭೬.

೧೮೧. ಪಂಡಿತ ಎಸ್.ಬಸಪ್ಪ (ಸಂ), ಪೂರ್ವೋಕ್ತ, ೨ನೇ ಸಂಧಿ ಪದ್ಯ-೫೨, ಪುಟ-೨೬.

೧೮೨. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೩, ಕ್ರಿ.ಶ.೧೫೨೪.

೧೮೩. ಎ.ಕ.XIದಾವಣಗೆರೆ ೨೩, ಕ್ರಿ.ಶ.೧೪೧೦.

೧೮೪. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೧೮, ಕ್ರಿ.ಶ.೧೭೭೯.

೧೮೫. ಪಂಡಿತ ಎಸ್.ಬಸಪ್ಪ (ಸಂ), ಪೂರ್ವೋಕ್ತ, ೨ನೇ ಸಂಧಿ ಪದ್ಯ-೫೨, ಪುಟ-೨೬.

೧೮೬. ಸಂತೋಷ್ ಎನ್ ಜಿ. ೨೦೦೯, ಪೂರ್ವೋಕ್ತ, ಪುಟ-೬೨.

೧೮೭. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೧೧೩, ಕ್ರಿ.ಶ.೧೩೮೭.

೧೮೮. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪುಟ-೨೩೧.

೧೮೯. ಚಿನ್ನಸ್ವಾಮಿ ಸೋಸಲೆ, ಪೂರ್ವೋಕ್ತ, ಪುಟ-೧೧೨.

೧೯೦. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೮೬.

೧೯೧. ಎ.ಕ.XI ಜಗಳೂರು ४೧, ಕ್ರಿ.ಶ.೧೫೨೫.

೧೯೨. ಅದೇ ದಾವಣಗೆರೆ ೨೩, ಕ್ರಿ.ಶ.೧೪೧೦.

೧೯೩. ಪುಟ್ಟಣ್ಣ ಎಂ.ಎಸ್. ಪುಟ-೬೦.

೧೯೪. S.I.I. IX (P+II), ಸಂಖ್ಯೆ ೬೯೬, ಕ.ವಿ.ವಿ. ಶಾಸನ ಸಂ-೧, ಹರಪನಹಳ್ಳಿ ೨೧೨, ಕ್ರಿ.ಶ.೧೬೬೦.

೧೯೫. ಪುಟ್ಟಣ್ಣ ಎಂ.ಎಸ್. ಪುಟ-೬೦.

೧೯೬. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೧೯೨, ಕ್ರಿ.ಶ.೧೬೪೪.

೧೯೭. ಮೇಗಳಗೆರೆಯ ಕಲ್ಲೇಶ್ವರ ದೇವಾಲಯದ ೨ನೇಯ ಬಸಪ್ಪನಾಯಕನ ಶಾಸನ.

೧೯೮. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು, ಪುಟ-೧೦೫.

೧೯೯. ಅದೇ ಪುಟ-೯೨.

೨೦೦. ಫ್ರಾನ್ಸಿಸ್ ಬುಕಾನಾನ್ ಪೂರ್ವೋಕ್ತ,

೨೦೧. ಸಂತೋಷ್ ಎನ್ ಜಿ. ೨೦೦೯, ಪೂರ್ವೋಕ್ತ, ಪುಟ-೮೨.

೨೦೨. ಎ.ಕ.XI ದಾವಣಗೆರೆ ೩೪, ಕ್ರಿ.ಶ.೧೩೭೯.

೨೦೩. ಜಗದೀಶ್ ಎಂ.ಎಸ್. ೨೦೦೬, ಮುಕ್ತೇನಹಳ್ಳಿಯ ಪ್ರಾಚೀನ ಅವಶೇಷಗಳು ಮತಗ್ತು ಅಪ್ರಕಟಿತ ಶಾಸನ, ಇತಿಹಾಸ ದರ್ಶನ ಸಂ-೨೧, ಪುಟ-೩೯.

೨೦೪. ಶಾಮಶಾಸ್ತ್ರಿ ಆರ್.(ಸಂ), ಕೌಟಿಲ್ಯನ ಅರ್ಥಶಾಸ್ತ್ರ, ೬ನೇ ಮುದ್ರಣ, ಮೈಸೂರು, ೧೯೬೦, ಪುಟ–೧೨೯.

೨೦೫. ರಾಬರ್ಟ್ ಸಿವೆಲ್, ಎ ಫರಗಟನ್ ಎಂಪೈರ್ ವಿಜಯನಗರ ದೆಹಲಿ, ೧೯೬೨, ಪುಟ–೨೩೦–೨೪೮.

೨೦೬. ಇಂದೂಬಾಯಿ ಟಿ.ಕೆ. ಚಂದ್ರಹಾಸನ ಕಥೆ, ಪದ್ಯ–೧೧೩, ಪುಟ–೧೨೫.

೨೦೭. ಫ್ರಾನ್ಸಿಸ್ ಬುಕನಾನ್ ಪೂರ್ವೋಕ್ತ, ಪುಟ–೩೩೦.

೨೦೮. ಕನಕದಾಸರ ರಾಮಧಾನ್ಯ ಚರಿತೆ, ಪದ್ಯ–೧೪೬, ಪುಟ–೭.

೨೦೯. ಶಿವಣ್ಣ ಕೆ.ಎಸ್. (ಸಂ), ಕರ್ನಾಟಕ ಚರಿತ್ರೆ ಸಂ–೩, ಪುಟ–೨೫೧.

೨೧೦. ಈಶ್ವರಪ್ಪ ಎಂ.ಜಿ., ೧೯೯೫, ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜನಪದ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ–೯೬.

೨೧೧. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ–೯೦.

೨೧೨. ಇಂದೂಬಾಯಿ ಟಿ.ಕೆ., ಉದ್ದಾಳಿಕನ ಕಥೆ, ಪದ್ಯ–೧೧೩, ಪುಟ–೧೨೫.

೨೧೩. ಸರಿತಾಕುಸುಮಾಕರ ದೇಸಾಯಿ (ಸಂ), ಹರಪನಹಳ್ಳಿ ಭೀಮವ್ವನ ಹಾಡುಗಳು, ಶ್ರಾವಣ ಶುಕ್ರವಾರದ ಹಾಡು, ಪದ್ಯ–೨೬.

೨೧೪. ಎ.ಕ.XI ದಾವಣಗೆರೆ ೩೧, ಕ್ರಿ.ಶ.೧೫೩೧, ಎ.ಕ.XI ಚನ್ನಗಿರಿ ೬೯, ಕ್ರಿ.ಶ.೧೫೬೯.

೨೧೫. ಕೋಡ್ ಪಿ.ಕೆ. ಸ್ಟಡೀಸ್ ಇನ್ ಇಂಡಿಯನ್ ಕಲ್ಚರಲ್ ಹಿಸ್ಟರಿ ಸಂ–೧, ಪುಟ–೧೧೬.

೨೧೬. ೨ನೇ ಶಂಧಿ, ಪದ್ಯ–೪೫, ಪುಟ–೧೦೭.

೨೧೭. ಕೋಡ್ ಪಿ.ಕೆ. ಸ್ಟಡೀಸ್ ಇನ್ ಇಂಡಿಯನ್ ಕಲ್ಚರಲ್ ಹಿಸ್ಟರಿ ಸಂ–೧, ಪುಟ–೧೧೬.

೨೧೮. ಮಹಾಲಿಂಗಂ ಟಿ.ವಿ., ೧೯೫೧, ಎಕನಾಮಿಕ್ ಲೈಫ್ ಇನ್ ವಿಜಯನಗರ, ಮದ್ರಾಸ್, ಪುಟ–೪೬.

೨೧೯. ಶಿವಣ್ಣ ಕೆ.ಎಸ್. (ಸಂ), ಕರ್ನಾಟಕ ಚರಿತ್ರೆ ಸಂ–೩, ಪುಟ–೧೫೬.

೨೨೦. ಎ.ಕ.XI ದಾವಣಗೆರೆ ೧೦೬, ಕ್ರಿ.ಶ.೧೫೨೮.

೨೨೧. ಭಟ್ ಎಂ.ಎಂ. (ಸಂ), ಸರ್ವಜ್ಞನ ವಚನ ಸಂಗ್ರಹ, ವಚನ ೭೪೫.

೨೨೨. ಅದೇ ಉದ್ದಾಳಿನ ಕಥೆ–೧, ಪದ್ಯ–೪೦೩, ಪುಟ–೬೯.

೨೨೩. ಅದೇ ಪುಟ–೬೯.

೨೨೪. ಮಹಾಲಿಂಗಂ ಟಿ.ವಿ., ಪೂರ್ವೋಕ್ತ, ಪುಟ–೪೮.

೨೨೫. ಇಂದೂಬಾಯಿ ಟಿ.ಕೆ., ಪೂರ್ವೋಕ್ತ, ಲವಕುಶರ ಕಾಳಗ, ಪುಟ–೧೪೪.

೨೨೬. ಎ.ಕ.VII ಚನ್ನಗಿರಿ ೪೩, ಕ್ರಿ.ಶ.೧೪೫೩.

೨೨೭. ಅದೇ XI ದಾವಣಗೆರೆ ೩೨, ಕ್ರಿ.ಶ.೧೪೧೦.

೨೨೮. ನಾಗೇಗೌಡ ಹೆಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂ-೨, ಪುಟ-೪೧೨.

೨೨೯. ಎ.ಕ. XI ದಾವಣಗೆರೆ ೨೯, ಕ್ರಿ.ಶ.೧೪೪೦.

೨೩೦. ರಾಬರ್ಟ್ ಸಿವೆಲ್, (ಮೂಲ) ಸದಾನಂದ ಕನವಳ್ಳಿ (ಅನು) ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ , ೨ನೇ ಆವೃತ್ತಿ ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೬, ಪುಟ-೨೫೦-೫೧.

೨೩೧. ಮಹಾಲಿಂಗಂ ಟಿ.ವಿ., ಪೂರ್ವೋಕ್ತ, ಪುಟ-೪೫.

೨೩೨. ಬುಕನಾನ್ ಪೂರ್ವೋಕ್ತ, ಪುಟ-೩೩೦.

೨೩೩. ಭಟ್ ಎಂ.ಎಂ. (ಸಂ), ಪೂರ್ವೋಕ್ತ, ವಚನ ೫೦೩.

೨೩೪. ಗಾಣ (ಕ.ವಿ.ವಿ. ಶಾಸನ ಸಂ-೧, ಹರಪನಹಳ್ಳಿ ೩) ಕೈಗಾಣ (ಎ.ಕ. XI ದಾವಣಗೆರೆ ೨೦)

೨೩೫. ಕ.ವಿ.ವಿ. ಶಾ.ಸಂ-೧, ಹರಪನಹಳ್ಳಿ ೧೨೦, ಕ್ರಿ.ಶ.೧೫೫೦.

೨೩೬. ಅದೇ ಹರಪನಹಳ್ಳಿ ೫೦

೨೩೭. ಅದೇ ಹರಪನಹಳ್ಳಿ ೬೯.

೨೩೮. ಶೃಂಗೇರಿ ಕಡತಸಂಖ್ಯೆ-೬೬, ದಾಖಲೆ-೬೩.

೨೩೯. S.I.I., IX(i), ಕುರುಗೋಡು (ಬಳ್ಳಾರಿ ತಾಲ್ಲೂಕು)

೨೪೦. ಅದೇ ೨೯೭, ೧೧೭೭, ಕುರುಗೋಡು.

೨೪೧. ಅದೇ ೧೬೪, ೧೧೯೮ ಕುಡುತಿನಿ (ಬಳ್ಳಾರಿ ತಾಲ್ಲೂಕು)

೨೪೨. ಅದೇ ೨೯೭, ೧೧೯೭, ಬಾಗಳಿ (ಹರಪನಹಳ್ಳಿ ತಾಲ್ಲೂಕು)

೨೪೩. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ ಪುಟ-೨೪೧.

೨೪೪. S.I.I., IX(i), 334, 1217, ಮತ್ತು ೨೯೭, ೧೧೭೭, ಕುರುಗೋಡು.

೨೪೫. ಅದೇ ೩೮೦, ೧೨೮೨, ಹಲುವಾಗಿಲು (ಹರಪನಹಳ್ಳಿ ತಾಲ್ಲೂಕು)

೨೪೬. ಅದೇ ೨೭೫, ೧೦೬೪, ಉಚ್ಚಂಗಿ (ಹರಪನಹಳ್ಳಿ ತಾಲ್ಲೂಕು)

೨೪೭. ಅದೇ ೨೯೭, ೧೧೭೭, ಕುರುಗೋಡು.

೨೪೮. ಹಿರೇಮಠ ಬಿ.ಆರ್. 'ಶಾಸನಗಳಲ್ಲಿ ಕರ್ನಾಟಕದ ವರ್ತಕರು ತ.ನಾ.ಒಂ.ಅ., ಪುಟ-೨೧೫.

೨೪೯. S.I.I., IX(i), ೨೯೭, ೧೧೭೭, ಕುರುಗೋಡು.

೨೫೦. ಅದೇ, ೩೩೮, ೧೨೨೧, ಕೊಟ್ಟೂರು (ಕೂಡ್ಲಿಗಿ ತಾಲ್ಲೂಕು)

೨೫೧. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೧೨೦, ಕ್ರಿ.ಶ.೧೫೫೦.

೨೫೨. ಅದೇ, ಹರಪನಹಳ್ಳಿ ೧೨೦

೨೫೩. ಅದೇ ೨೧೫, ದುಗ್ಗಾವತಿ (ಹರಪನಹಳ್ಳಿ ತಾಲ್ಲೂಕು)

೨೫೪. ಅದೇ ೧೭೮, ೧೧೦೮, ಬಾಗಳಿ

೨೫೫. ವಾಸುದೇವ ಬಡಿಗೇರ, ಪೂರ್ವೋಕ್ತ ಪುಟ-೨೪೩.

೨೫೬. S.I.I., IX(i), ೨೯೭, ೧೧೭೭, ಕುರುಗೋಡು.

೨೫೭. ಅದೇ ೧೩೪, ೧೧೩೨, ಬಾಗಳಿ

೨೫೮. ಕ.ವಿ.ವಿ.ಶಾ.ಸಂ-೧ ಶಾ.ಸಂ-೯೯, ೧೨೧೮, ಸೋಗಿ (ಹಡಗಲಿ)

೨೫೯. ಅದೇ, ಹರಪನಹಳ್ಳಿ ೧೮, ಕ್ರಿ.ಶ.೧೭೭೯.

೨೬೦. ಅದೇ, ಹರಪನಹಳ್ಳಿ ೧೯, ಕ್ರಿ.ಶ.೧೭೦೦.

೨೬೧. ಬುಕನಾನ್, ಪೂರ್ವೋಕ್ತ ಪುಟ-೩೩೦.

೨೬೨. ಅದೇ ಪುಟ-೩೩೦.

೨೬೩. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೧೨೦, ಕ್ರಿ.ಶ.೧೫೫೦.

೨೬೪. ಎ.ಆರ್.ನಂ.೨೬೫, ೧೯೧೮.

೨೬೫. ಸದಾಶಿವಪ್ಪ ಕುಂ.ಬಾ. ಪೂರ್ವೋಕ್ತ ಪುಟ-೧೭-೧೯.

೨೬೬. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩, ಕ್ರಿ.ಶ.೧೭೨೯.

೨೬೭. ಎ.ಕ. XI, ದಾವಣಗೆರೆ ೧೦೫, ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೩೪, ಕ್ರಿ.ಶ.೧೧೨೭.

೨೬೮. ಎ.ಕ. VII, ದಾವಣಗೆರೆ ೧೦೫.

೨೬೯. ಸಾಮಕ್ ಎಸ್.ಜಿ. ಹೊನ್ನಾಳಿ ತಾಲ್ಲೂಕಿನ ಕುಂದೂರಿನ ಅಪ್ರಕಟಿತ ಶಾಸನ, ಇತಿಹಾಸದರ್ಶನ, ೨೦, ಬೆಂಗಳೂರು, ಪುಟ-೧೬೦.

೨೭೦. ಪಂಡಿತ ಎಸ್.ಬಸಪ್ಪ (ಸಂ) ದೇವಕವಿಕೃತ ಮರುಳಸಿದ್ಧನ ಕಾವ್ಯ, ತರಳುಬಾಳು ಪ್ರಕಾಶನ, ಸಿರಿಗೆರೆ, ೧೯೯೭, ೨ನೇ ಸಂಧಿ, ಪದ್ಯ-೧೧, ಪುಟ-೦೪.

೨೭೧. ಎ.ಕ. VII, ಹೊನ್ನಾಳಿ, ೮೫.

೨೭೨. ವಿವೇಕ ರೈ ಬಿ.ಎ. (ಸಂ), ಪ್ರವಾಸಿ ಕಂಡ ವಿಜಯನಗರ, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೫, ಪುಟ-೭೧

೨೭೩. ಎ.ಕ. XI, ದಾವಣಗೆರೆ ೧೨೦.

೨೭೪. ಕಲುಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್.(ಸಂ), ಕೆಳದಿಸಮಗ್ರ ಅಧ್ಯಯನ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ, ೧೯೯೪, ಪುಟ-೮೪.

೨೭೫. ಅಪ್ಪಾದೊರೈ ಎ., ೧೯೫೫, ಎಕನಾಮಿಕ್ ಕಂಡಿಷನ್ ಇನ್ ಕರ್ನಾಟಕ, ಧಾರವಾಡ, ಪುಟ-೫೫೦-೫೫೧.

೨೭೬. ಕಲುಬುರ್ಗಿ ಎಂ.ಎಂ. (ಸಂ), ಕರ್ನಾಟಕದ ಕೈಫಿಯತ್ತುಗಳು, ಪುಟ-೩೯.

೨೭೭. ಎ.ಕ. XI, ದಾವಣಗೆರೆ ೧೦೮.

೨೭೮. ಅದೇ ದಾವಣಗೆರೆ ೨೩.

೨೭೯. ಎ.ಕ. VII, ಚನ್ನಗಿರಿ, ೫೧, ಕ್ರಿ.ಶ.೧೬೫೩.

೨೮೦. ಅದೇ ಚನ್ನಗಿರಿ, ೫೧, ಕ್ರಿ.ಶ.೧೭೫೮.

೨೮೧. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩, ಕ್ರಿ.ಶ.೧೭೨೯.

೨೮೨. ಕಲುಬುರ್ಗಿ ಎಂ.ಎಂ. (ಸಂ), ಕರ್ನಾಟಕದ ಕೈಫಿಯತ್ತುಗಳು, ಪುಟ-೧೧೫.

೨೮೩. ರಾಮಾನುಜಂ ಪಿ.ಎಸ್. ಪೂರ್ವೋಕ್ತ ಪುಟ-೩೭೭.

೨೮೪. S.I.I., IX(P+ii), ಸಂ-೬೪೦, ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೧೨೦ ಕ್ರಿ.ಶ.೧೫೫೦.

೨೮೫. ಎ.ಕ. XI, ಜಗಳೂರು, ೨೪, ಕ್ರಿ.ಶ.೧೫೫೧, ಎ.ಕ. VII, ಚನ್ನಗಿರಿ ೬೨, ಎ.ಕ. XI, ದಾವಣಗೆರೆ ೬೧, ೬೭, S.I.I., VI ೫೭೧, ೧೦೭೦, ಕ.ವಿ.ವಿ.ಶಾ.ಸಂ-೧ ಮತ್ತು ೭, ೧೧೦೦.

೨೮೬. ಎ.ಕ. XI, ದಾವಣಗೆರೆ ೧೦೬.

೨೮೭. ಶಾಮಾಶಾಸ್ತ್ರಿ ಆರ್.(ಸಂ), ಲಿಂಗಣ್ಣ ಕವಿಯ ಕೆಳದಿನೃಪ ವಿಜಯ, ೧೯೭೩, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ-೧೮೨.೩

೨೮೮. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ ಪುಟ-೯೬.

೨೮೯. ಅದೇ ಪುಟ-೯೬.

೨೯೦. ಹಿರೇಮಠ ಬಿ.ಆರ್. ಪೂರ್ವೋಕ್ತ ಪುಟ-೧೧೬.

೨೯೧. ಅದೇ ಪುಟ-೧೦೪.

೨೯೨. ಗುರುರಾಜಾಚಾರ್ ಎಸ್. ಪೂರ್ವೋಕ್ತ ಪುಟ-೧೧೨.

೨೯೩. ಹಿರೇಮಠ ಬಿ.ಆರ್. ಪೂರ್ವೋಕ್ತ ಪುಟ-೧೨೨.

೨೯೪. ಶಾಸ್ತ್ರಿ ಬಿ.ಎಸ್., ಕೆಳದಿ ಮತ್ತು ಪೋರ್ಚುಗೀಸರು, ಪುಟ-೧೫೯.

೨೯೫. ವೆಂಕಟರತ್ನಂ ಎ.ವಿ., ೧೯೭೯. ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ-೧೧೬-೧೧೮.

೨೯೬. ಎ.ಕ. VII, ಹೊನ್ನಾಳಿ ೮೪

೨೯೭. ಅದೇ ಹೊನ್ನಾಳಿ ೦೬.

೨೯೮. ಅದೇ ಚನ್ನಗಿರಿ ೪೩. ಕ್ರಿ.ಶ.೧೬೫೩.

೨೯೯. ಎ.ಕ. XI, ದಾವಣಗೆರೆ ೨೮, ಜಗಳೂರು ೨೪.

೩೦೦. ಅದೇ ದಾವಣಗೆರೆ ೧೬೫, ಜಗಳೂರು ೩೭.

೩೦೧. ಅದೇ ದಾವಣಗೆರೆ ೨೮,೩೧,೩೪,೬೭,೬೮.

೩೦೨. ಅದೇ ದಾವಣಗೆರೆ ೬೭.

೩೦೩. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೨೧.

೩೦೪. ಎ.ಕ. VII, ಚನ್ನಗಿರಿ ೫೧.

೩೦೫. ಎ.ಕ. XI, ದಾವಣಗೆರೆ ೧೦೮.

೩೦೬. ಅದೇ ದಾವಣಗೆರೆ ೧೪೩.

೩೦೭. ಅದೇ ದಾವಣಗೆರೆ ೬೭.

೩೦೮. ಅದೇ ದಾವಣಗೆರೆ ೨೨.

೩೦೯. ಅದೇ ದಾವಣಗೆರೆ ೧೪೭, ೧೫೭.

೩೧೦. ಅದೇ ಜಗಳೂರು ೨೪.

೩೧೧. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೨೧೬.

೩೧೨. ಶೃಂಗೇರಿ ಕಡತ ಸಂಖ್ಯೆ–೦೬, ದಾಲೆ–೬೩.

೩೧೩. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೩೩.

೩೧೪. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ ಪುಟ–೬೨.

೩೧೫. ರಾಮಾನುಜಂ ಪಿ.ಎಸ್. ಪೂರ್ವೋಕ್ತ ಪುಟ–೧೦೪.

೩೧೬. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೨೦.

೩೧೭. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ ಪುಟ–೮೮.

೩೧೮. ಎ.ಕ. XI, ದಾವಣಗೆರೆ ೬೭.

೩೧೯. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ ಪುಟ–೩೦.

೩೨೦. ಅದೇ ಪುಟ–೧೦೦.

೩೨೧. ಅದೇ ಪುಟ–೩೭.

೩೨೨. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೨೧೯, ಕ್ರಿ.ಶ.೧೭೧೯.

೩೨೩. ನಾರಾಯಣ ಪಿ.ವಿ., ವ.ಸಾ.ಒಂ.ಸಂ.ಅ. ಪುಟ–೧೮೪.

೩೨೪. ವ್ಯವಹಾರಗಣಿತ–೧–೧೫.

೩೨೫. ಲಕ್ಷ್ಮಣ್ ತೆಲಗಾವಿ (ಸಂ)., ೧೯೮೭, ಹರತಿಸಿರಿ, ಪುಟ–೪೩೮–೩೯.

೩೨೬. ಬಸವಣ್ಣನವರ ಹೆಚ್ಚಿನ ವಚನ (ಸಂ), ಉಮಾಪತಿ, ಪುಟ–೫೦.

೩೨೭. ವಿಶ್ವನಾಥ ಕೆ., ೧೯೮೬, 'ಅಗ್ರೇರಿಯನ್ ಸಿಸ್ಟಂ ಅಂಡರ್ ವಿಜಯನಗರ (ಅಪ್ರಕಟಿತ ಮಹಾಪ್ರಬಂಧ) ಪುಟ–೬೦.

೩೨೮. ಎ.ಕ. XI, ದಾವಣಗೆರೆ ೭೮, ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೧೩.

೩೨೯. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೩೩.

೩೩೦. ಎ.ಕ. XI, ದಾವಣಗೆರೆ ೨೩.

೩೩೧. ಅದೇ

೩೩೨. ಅದೇ ಜಗಳೂರು ೩೭.

೩೩೩. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೨೧೨.

೩೩೪. ಶಿ.ರಾಜೇಂದ್ರಪ್ಪ ಪೂರ್ವೋಕ್ತ, ಪುಟ–೧೩೭.

೩೩೫. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೩೩.

೩೩೬. ಶಿ.ರಾಜೇಂದ್ರಪ್ಪ ಪೂರ್ವೋಕ್ತ, ಪುಟ–೧೩೭.

೩೩೭. ಎಂ.ಎ.ಅರ್., ೧೯೩೪ ಪುಟ–೧೧೮.

೩೩೮. ಎ.ಕ. ೨೪, SI ೧೫.

೩೩೯. ಎ.ಕ. XI, ದಾವಣಗೆರೆ ೩೧.

೩೪೦. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೨೮.

೩೪೧. ಎ.ಕ. XI, ದಾವಣಗೆರೆ ೧೧೭.

೩೪೨. ಎ.ಕ. VII, ಚನ್ನಗಿರಿ ೭೬, ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೨೧೨, ಕ್ರಿ.ಶ. ೧೬೦೦.

೩೪೩. ಎ.ಕ. XI, ಜಗಳೂರು ೩೧.

೩೪೪. ಪುಟ್ಟಣ್ಣ ಎಂ.ಎಸ್., ಪುಟ–೫೮.

೩೪೫. ಅದೇ ಪುಟ–೫೮.

೩೪೬. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೮, ಕ್ರಿ.ಶ. ೧೭೦೯.

೩೪೭. ಅದೇ ಹರಪನಹಳ್ಳಿ ೧೮.

೩೪೮. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ ಪುಟ–೯೯–೧೦೦

೩೪೯. ಅದೇ ಪುಟ–೧೨೯.

೩೫೦. ಅದೇ ಪುಟ-೧೨೯.

೩೫೧. ಕಲಬುರ್ಗಿ ಎಂ.ಎಂ. ರಾಮಭಟ್ಟ ಬಿ.ಎಸ್.(ಸಂ), ಪೂರ್ವೋಕ್ತ, ಪುಟ-೩೦೬.

೩೫೨. ಎ.ಎ.ಅರ್., ೧೯೪೩, ಪುಟ-೧೨೯.

೩೫೩. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪುಟ-೩೩೨.

೩೫೪. ಮಹಾಲಿಂಗಂ ಟಿ.ವಿ., ೧೯೬೭, 'ಸೌತ್ ಇಂಡಿಯನ್ ಪಾಲಿಟಿ ಮದ್ರಾಸ್, ಪುಟ-೩೨೦.

೩೫೫. ನಾಗೇಗೌಡ ಹೆಚ್.ಎಲ್., ಪ್ರವಾಸಿ ಕಂಡ ಇಂಡಿಯಾ-೨.

೩೫೬. ಅದೇ ಪುಟ-೩೫೬.

೩೫೭. ರಾಬರ್ಟ್ ಸಿವೆಲ್ ಪೂರ್ವೋಕ್ತ, ಪುಟ-೩೪೭.

೩೫೮. ಪಂಡಿತ್ ಎಸ್.ಬಸಪ್ಪ, ಪೂರ್ವೋಕ್ತ, ಪುಟ-೪೩.

೩೫೯. ಶ್ರೀಕಂಠಯ್ಯ ಕೆ., ಪೂರ್ವೋಕ್ತ, ಪುಟ-೩೩೨.

೩೬೦. ಚಿನ್ನಸ್ವಾಮಿ ಸೋಸಲೆ, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕ.ವಿ.ವಿ. ಹಂಪಿ, ಪುಟ-೩೭.

೩೬೧. ನಾಗೇಗೌಡ ಹೆಚ್.ಎಲ್. ಪೂರ್ವೋಕ್ತ, ಪುಟ-೩೬೭-೩೬೯.

೩೬೨. ಚಿನ್ನಸ್ವಾಮಿ ಸೋಸಲೆ, ಪೂರ್ವೋಕ್ತ, ಪುಟ-೩೮.

೩೬೩. ಸದಾಶಿವಪ್ಪ ಕುಂ.ಬಾ. ಪೂರ್ವೋಕ್ತ, ಪುಟ-೮೯.

೩೬೪. ಲಕ್ಷ್ಮಣ್ ತೆಲಗಾವಿ (ಸಂ), ಹರತಿಸಿರಿ, ಪುಟ-೪೩೮.

೩೬೫. ಚಿನ್ನಸ್ವಾಮಿ ಸೊಸಲೆ, ಪೂರ್ವೋಕ್ತ, ಪುಟ-೧೨೪.

೩೬೬. ಫ್ರಾನ್ಸಿಸ್ ಬುಕನಾನ್, ೧೯೮೮, ಪೂರ್ವೋಕ್ತ, ಪುಟ-೩೩೦.

೩೬೭. ಅದೇ ಪುಟ-೩೩೦.

೩೬೮. ಪಂಡಿತ್ ಎಸ್.ಬಸಪ್ಪ (ಸಂ), ಪೂರ್ವೋಕ್ತ, ೩ನೇ ಸಂಧಿ ಪದ್ಯ-೧೭, ಪುಟ-೩೪.

೩೬೯. ಇಂದೂಬಾಯಿ ಟಿ.ಕೆ. (ಸಂ), ಶಂಕರನಗಂಡನ ಗಾಡು, ಪದ್ಯ-೨೭, ಪುಟ-೭೬.

೩೭೦. ಬುಕನಾನ್ ಪೂರ್ವೋಕ್ತ, ಪುಟ-೩೩೦.

೩೭೧. ಸದಾಶಿವಪ್ಪ ಕುಂ.ಬಾ. ೨೦೦೬, ಪೂರ್ವೋಕ್ತ, ಪುಟ-೧೦೭.

೩೭೨. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪುಟ-೨೩೭.

೩೭೩. ಅದೇ ಪುಟ-೨೩೭.

೩೭೪. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೩.

೩೭೫. ಅದೇ ದಾವಣಗೆರೆ ೨೦.

೩೭೬. ಎ.ಕ. VII, ಹೊನ್ನಾಳಿ ೦೧.

೩೭೭. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೩.

೩೭೮. ಪಂಡಿತ್ ಎಸ್.ಬಸಪ್ಪ (ಸಂ), ಪೂರ್ವೋಕ್ತ, ೩ನೇ ಸಂಧಿ ಪದ್ಯ–೩೪, ಪುಟ–೪೦.

೩೭೯. ಬುಕನಾನ್, ಪೂರ್ವೋಕ್ತ, ಪುಟ–೩೩೦.

೩೮೦. ಎ.ಕ. XI, ದಾವಣಗೆರೆ ೨೯.

೩೮೧. ಇಂದೂಬಾಯಿ ಟಿ.ಕೆ. (ಸಂ), ಪೂರ್ವೋಕ್ತ, ಪುಟ–೧೪೪.

೩೮೨. ಪಂಡಿತ್ ಎಸ್.ಬಸಪ್ಪ (ಸಂ), ಪೂರ್ವೋಕ್ತ, ೩ನೇ ಸಂಧಿ ಪದ್ಯ–೪೩, ಪುಟ–೪೨.

೩೮೩. ಶ್ರೀಕಂಠಯ್ಯ ಎಸ್.ಕೆ. ಪೂರ್ವೋಕ್ತ, ಪುಟ–೧೩೮.

೩೮೪. ಅದೇ ಪುಟ–೩೫೬.

೩೮೫. ರಾಬರ್ಟ್ ಸಿವೆಲ್ (ಮೂಲ) ಸದಾನಂದ ಕನವಳ್ಳಿ, )ಕನ್ನಡ ಅನುವಾದ) ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ, ೨೦೦೬, ಪ್ರಸಾರಾಂಗ, ಕ.ವಿ.ವಿ. ಹಂಪಿ ಪುಟ–೨೪೭.

೩೮೬. ಎ.ಕ. XI, ದಾವಣಗೆರೆ ೧೦೬. ಕ್ರಿ.ಶ.೧೫೨೮.

೩೮೭. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೩.

೩೮೮. ಮಂಜುನಾಥ ಯಲ್ಲಾಪುರದ ಮತ್ತು ಚಂದ್ರಹಾಸ ಹಿರೇಮಳಲಿ ಪ್ರಜಾವಾಣಿ ದಿನಪತ್ರಿಕೆ, ಲೇಖನ 'ಖಡ್ಗ' ಖ್ಯಾತಿಯ ಸಾಂಸ್ಕೃತಿಕ ಗ್ರಾಮ ಮಾಡಲಗೇರಿ, ಪುಟ–೦೩.

೩೮೯. ಅದೇ ಪುಟ–೦೩.

೩೯೦. ಅದೇ ಪುಟ–೦೩.

೩೯೧. ಮಂಜುನಾಥ ಯಲ್ಲಾಪುರದ, ೧೪.೦೬.೨೦೧೨, 'ಅರಗಿನ ಆಯುಧ ತಯಾರಿಕೆಯ ವೀರನೆಲ' ಪುಟ–೩೨.

೩೯೨. ಗುರುರಾಜಾಚಾರ್ ಎಸ್. ಪೂರ್ವೋಕ್ತ, ಪುಟ–೩೬.

೩೯೩. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೯. ಕ್ರಿ.ಶ.೧೭೦೦.

೩೯೪. ಭಟ್‌ಸೂರಿ ಕೆ.ಜಿ. (ಸಂ), ಪೂರ್ವೋಕ್ತ, ಪುಟ–೩೬.

೩೯೫. ಎ.ಕ. XI, ದಾವಣಗೆರೆ ೩೧.

೩೯೬. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೯. ಕ್ರಿ.ಶ.೧೭೦೦.

೩೯೭. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು, ಪುಟ–೬೯.

೩೯೮. ಎ.ಕ. XI, ದಾವಣಗೆರೆ ೧೭೪. ಕ್ರಿ.ಶ.೧೪೧೭.

೩೯೯. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೮೬. ಕ್ರಿ.ಶ.೧೫೫೭.

೪೦೦. ಎ.ಕ. XI, ಜಗಳೂರು ೪೩. ಕ್ರಿ.ಶ.೧೬೫೩.

೪೦೧. ಎ.ಕ. VII, ಹೊನ್ನಾಳಿ ಕ್ರಿ.ಶ.೧೬೩೩.

೪೦೨. ಸೂಕ್ತಿಸುಧಾ, ೩೦-೧೩, ಪುಟ-೩೫೭.

೪೦೩. ವಾಸುದೇವ ಬಡಿಗೇರ, ೨೦೧೨, ಪೂರ್ವೋಕ್ತ, ಪುಟ-೨೫೦.

೪೦೪. ಎಂ.ಎ.ಆರ್., ೧೯೨೬, ಸಂಖ್ಯೆ – ೦೧.

೪೦೫. ರಾಬರ್ಟ್ ಸಿವೆಲ್, ೧೮೦೭, ಪೂರ್ವೋಕ್ತ, ಪುಟ-೩೭೯.

೪೦೬. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩. ಕ್ರಿ.ಶ.೧೭೨೯

೪೦೭. ಅದೇ ಹರಪನಹಳ್ಳಿ ೨೧೫, ಕ್ರಿ.ಶ.೧೬೬೧.

೪೦೮. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು, ಪುಟ-೯೯-೧೦೦.

೪೦೯. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೧೯೨. ಕ್ರಿ.ಶ.೧೫೬೬.

೪೧೦. ಎಂ.ಎ.ಆರ್., ನಂ-೨೬೫, ಕ್ರಿ.ಶ.೧೯೧೮.

೪೧೧. ಎ.ಕ. VII, ಹೊನ್ನಾಳಿ ೭೧.

೪೧೨. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೦೩.

೪೧೩. ಅರುಣ ಹೆಚ್.ಟಿ. ೨೦೦೨, ಕೆಳದಿ ಅರಸರ ತೆರಿಗೆ ಪದ್ಧತಿ(ಅಪ್ರಕಟಿತ ಮಹಾಪ್ರಬಂಧ) ಪುಟ-೩೩.

೪೧೪. ಎ.ಕ. XI, ಜಗಳೂರು ೪೧. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೦೩. ಕ್ರಿ.ಶ.೧೫೨೪.

೪೧೫. ಎ.ಕ. VII, ಚನ್ನಗಿರಿ ೭೬.

೪೧೬. ಎ.ಕ. XI, ದಾವಣಗೆರೆ ೧೬೫, ಕ್ರಿ.ಶ.೧೫೬೨.

೪೧೭. ಎ.ಕ. VII, ಹೊನ್ನಾಳಿ ೦೬.

೪೧೮. ಎ.ಕ. XI, ದಾವಣಗೆರೆ ೬೮, ಜಗಳೂರು ೨೪, ಕ್ರಿ.ಶ.೧೫೫೧.

೪೧೯. ಎ.ಕ. VII, ಚನ್ನಗಿರಿ ೬೨, ಎ.ಕ. XI, ದಾವಣಗೆರೆ ೬೭

೪೨೦. ಎ.ಕ. XI, ದಾವಣಗೆರೆ ೬೭

೪೨೧. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೧೨೦.

೪೨೨. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೧೩೩, ೧೩೪.

೪೨೩. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩, ಕ್ರಿ.ಶ.೧೭೨೯.

೪೨೪. ಎಂ.ಎ.ಆರ್., ೧೯೩೪, ನಂ-೩೦, ಪುಟ-೫೮.

೪೨೫. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೧೪, ಕ್ರಿ.ಶ.೧೫೫೦.

೪೨೬. ಅದೇ ಹರಪನಹಳ್ಳಿ ೨೧೯, ಕ್ರಿ.ಶ.೧೭೨೯.

೪೨೭. ಎ.ಕ. VII, ಹೊನ್ನಾಳಿ ೭೧.

೪೨೮. ಎ.ಕ. XI, ದಾವಣಗೆರೆ ೧೨೦.

೪೨೯. ಸಂತೋಷ್ ಎನ್.ಜಿ., ೨೦೦೯, ಪೂರ್ವೋಕ್ತ, ಪುಟ–೧೪೧.

೪೩೦. ಎಂ.ಎ.ಅರ್., ೧೯೪೩ ಸಂಖ್ಯೆ–೪೩

೪೩೧. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೨೧೩ ಕ್ರಿ.ಶ.೧೭೨೯.

೪೩೨. ಎಂ.ಎ.ಅರ್., ೩೧೮ ಕ್ರಿ.ಶ.೧೯೧೫.

೪೩೩. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೮೬.

೪೩೪. ಅದೇ ಹರಪನಹಳ್ಳಿ ೧೨೧.

೪೩೫. ಎ.ಕ. XI, ಜಗಳೂರು ೦೨.

೪೩೬. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೮೫.

೪೩೭. ಅದೇ ಹರಪನಹಳ್ಳಿ ೧೮೬.

೪೩೮. ಅದೇ

೪೩೯. ಅದೇ ಹರಪನಹಳ್ಳಿ ೧೯.

೪೪೦. ಅದೇ

೪೪೧. ಅದೇ ಹರಪನಹಳ್ಳಿ ೧೮೫.

೪೪೨. ಸಂತೋಷ್ ಎನ್.ಜಿ., ೨೦೦೯, ಪೂರ್ವೋಕ್ತ, ಪುಟ–೧೪೧.

೪೪೩. ಕೇರ್ ಎನ್.ಎನ್.ಅಗ್ರೇರಿಯರ್ ಅಂಡ್ ಫಿಸಿಕಲ್ ಎಕಾನಿಮಿ ಪುಟ–೩೦೦.

೪೪೪. ಕ.ವಿ.ವಿ.ಶಾ.ಸಂ–೧ ಹರಪನಹಳ್ಳಿ ೧೮೫.

೪೪೫. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ, ಪುಟ–೪೪.

೪೪೬. ವ್ಯವಹಾರ ಗಣಿತ–೧–೨೪.

೪೪೭. ಲೀಲಾವತಿಗಣಿತ–೧–೨, ಉಲ್ಲೇಖ ಕ.ಅ.ಸಂಸ್ಥೆ, ಕನ್ನಡ ಸಾಹಿತ್ಯ ವರಿತ್ರೆ, ಸಂ–೪, ಭಾಗ–೨, ಪುಟ–೧೦೫೦.

೪೪೮. Annual Report of archeological department south circle madras, 1909 and 1910 page-25.

೪೪೯. ನೀಲಕಂಠಶಾಸ್ತ್ರಿ ಕೆ.ಎ., ಚೋಳರು, ಪುಟ–೧೬೩, ಉಲ್ಲೇಖ ನಾರಾಯಣ ಪಿ.ವಿ. ವ.ಸಾ.ಒಂ.ಅ. ಪುಟ–೧೭೭.

೪೫೦. Altekar A.S., The Rastrakuta nad their Timer-Page-367.

೪೫೧. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ, ಪುಟ-೯೮.

೪೫೨. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩, ಕ್ರಿ.ಶ.೧೭೨೯.

೪೫೩. ಅದೇ ಹರಪನಹಳ್ಳಿ ೨೨.

೪೫೪. ಕೊಟ್ರೇಶ್ ಎಂ. ಉಚ್ಚಂಗಿದುರ್ಗ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. (ಪ್ರಕಟಿತ) ನಿಬಂಧ, ೧೯೯೬, ಪುಟ-೩೪-೩೫.

೪೫೫. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ-೧೧೯.

೪೫೬. ಕ.ವಿ.ವಿ.ಶಾ.ಸಂ-೧ ಹರಪನಹಳ್ಳಿ ೨೧೩

೪೫೭. ಸದಾಶಿವಪ್ಪ ಕುಂ.ಬಾ., ಪೂರ್ವೋಕ್ತ, ಪುಟ-೯೯.

೪೫೮. ಬಂಗಾಳದಲ್ಲಿ ಜೀಮೂತವಾಹನನೆಂಬ ನಿಬಂಧಕಾರ ರಚಿಸಿದ 'ದಾಯಭಾಗ ಪ್ರಮುಖ ಆಕರ ಗ್ರಂಥವಾಗಿದೆ.

೪೫೯. ಪ್ರೋ.ಲಕ್ಷ್ಮಣ್ ತೆಲಗಾವಿ (ಸಂ), ೨೦೦೮, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ' ಜಿ.ಹೆಚ್.ಪ್ರಸಾದ್ ಅಭಿನಂದನಾ ಸಂಪುಟ, ಪುಟ-೦೬.

೪೬೦. ವಿರೂಪಾಕ್ಷ ಪೂಜಾರಹಳ್ಳಿ, 'ಬೇಡರ ಕಟ್ಟೆಮನೆಗಳ ನ್ಯಾಯಪಂಚಾಯಿತಿ, ಪುಟ-೧೦೨. ಪ್ರೋ.ಲಕ್ಷ್ಮಣ್ ತೆಲಗಾವಿ (ಸಂ), ೨೦೦೮, ಪೂರ್ವೋಕ್ತ

೪೬೧. ಸದಾಶಿವಪ್ಪ ಕುಂ.ಬಾ., ೨೦೧೧, ರಾಯಸಂಸ್ಕೃತಿ, ಹರಪನಹಳ್ಳಿ ಪಾಳೆಯಗಾರರ ನ್ಯಾಯಾಡಳಿತ ವ್ಯವಸ್ಥೆ' ಪುಟ-೯೪.

೪೬೨. ಸದಾಶಿವಪ್ಪ ಕುಂ.ಬಾ., ೨೦೦೬, ಪೂರ್ವೋಕ್ತ ಪುಟ-೯೪.

೪೬೩. ಅದೇ ಪುಟ-೯೫-೯೬.

## ಅಧ್ಯಾಯ - ೪

# ಹರಪನಹಳ್ಳಿ ಪಾಳೆಯಗಾರರ ಶಾಸನಗಳು

ಅಧ್ಯಾಯ – ೪

## ಹರಪನಹಳ್ಳಿ ಪಾಳೆಯಗಾರರ ಶಾಸನಗಳು

### ೪.೧. ಶಾಸನಗಳು

ಪ್ರತಿಯೊಂದು ಅರಸೊತ್ತಿಗೆಯ ಏಳುಬೀಳುಗಳನ್ನು ಅದರ ಹಿನ್ನೆಲೆಯಲ್ಲಿ ರೂಪಿತವಾದ ಜನಜೀವನದ ಸ್ಥೂಲಸ್ವರೂಪವನ್ನು ರಾಜಕೀಯ ಜೀವನದ ನಿರಂತರ ಬದಲಾವಣೆಗಳನ್ನು ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಲು ಶಾಸನಗಳು ಬಹುಮುಖ್ಯ ಆಧಾರಗಳಾಗಿವೆ. ಇತಿಹಾಸದ ಪ್ರಮಾಣಭೂತವಾದ ಪುನರ್‌ನಿರ್ಮಾಣಕ್ಕೆ ಇರುವ ಬಹುಮುಖ್ಯ ಆಧಾರಗಳೆಂದರೆ ಶಾಸನಗಳು, ಸಾಹಿತ್ಯ ಗ್ರಂಥಗಳು, ಸ್ಮಾರಕಗಳು, ಕಲಾಕೃತಿಗಳು, ನಾಣ್ಯಗಳು, ಅವಶೇಷಗಳು, ವಿದೇಶಿಯರ ಬರವಣಿಗೆಗಳು ಕರ್ನಾಟಕದ ರಾಜಕೀಯ ಮತ್ತು ಸಾಮಾಜಿಕ ಪರಂಪರೆಯನ್ನು ತಿಳಿಯುವಂತಾದುದು ಪ್ರಮುಖವಾಗಿ ಶಾಸನಗಳಿಂದಲೇ.

'ಶಾಸನ' ಎಂಬ ಶಬ್ದ ಸಂಸ್ಕೃತದ 'ಶಾಸ್' ಎಂಬ ಧಾತುವಿನಿಂದ ಬಂದಿದೆ. ಅಂದರೆ ಅಪ್ಪಣೆ ಮಾಡು, ಆಜ್ಞೆ ಹಾಗೂ ಘೋಷಣೆ ಹೊರಡಿಸು ಎಂಬ ಅರ್ಥವನ್ನು ನೀಡುತ್ತದೆ. ರಾಜನ ಅಪ್ಪಣೆಯಂತೆ ಅವನು ಕೊಟ್ಟ ದಾನಧರ್ಮಗಳನ್ನು ಘೋಷಿಸುವುದಕ್ಕೋಸ್ಕರ ಶಾಸನಗಳು ರಚಿತವಾದವು. ಸಾಮಾನ್ಯವಾಗಿ ಶಾಸನಗಳನ್ನು ಶಿಲೆ, ಬೃಹತ್ ಬಂಡೆಗಳ, ಕಂಬಗಳ ಮೇಲೆ, ತಾಮ್ರ, ಕಬ್ಬಿಣ ಮುಂತಾದ ಲೋಹಗಳ ಮೇಲೆ ಹಾಕಿಸಲಾಗುತ್ತಿತ್ತು. ಇವುಗಳು ಬಹುಮುಖ್ಯವಾಗಿ ರಾಜನ ಹೆಸರು, ಕಾಲ, ವಂಶಾವಳಿ, ಗಡಿ, ಯುದ್ಧ, ಜಯ, ರಾಜಕೀಯ, ಆರ್ಥಿಕತೆ, ಅಶ್ವಮೇಧಯಾಗ, ಧರ್ಮ, ದೇವರು, ದಾನದತ್ತಿ, ದೇವಾಲಯ/ಸ್ಮಾರಕಗಳ ನಿರ್ಮಾಣ ಮುಂತಾದ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ.

ಭರತಖಂಡದಲ್ಲಿ ಶಾಸನಗಳ ಚರಿತ್ರೆ ಸ್ಪಷ್ಟವಾಗಿ ಆರಂಭವಾಗುವುದು ಮೌರ್ಯ ದೊರೆ ಅಶೋಕ ಮಹಾಶಯನ ಕಾಲದಿಂದ ಭಾರತದಾದ್ಯಂತ ಅನೇಕ ಭಾಗಗಳಲ್ಲಿ ಇವನ ಶಾಸನಗಳು ಕಂಡು ಬರುತ್ತವೆ. ಅಶೋಕನು ಈ ಶಾಸನಗಳನ್ನು ಬರೆಸಲು ಬಳಸಿದ ಬ್ರಾಹ್ಮೀಲಿಪಿಯೇ ಭರತಖಂಡದ (ಸಿಂಧೂ ಸಂಸ್ಕೃತಿಯಲ್ಲಿ ದೊರೆತ ಲಿಪಿಗಳನ್ನು ಬಿಟ್ಟರೆ) ಅತ್ಯಂತ ಪ್ರಾಚೀನ ಲಿಪಿ. ಅಶೋಕನ ಶಾಸನಗಳು ಕನ್ನಡ ನಾಡಿನ ಜಟಿಂಗರಾಮೇಶ್ವರ, ಸಿದ್ದಾಪುರ, ಬ್ರಹ್ಮಗಿರಿ, ಮಸ್ಕಿ, ಮುಂತಾದೆಡೆಗಳಲ್ಲಿ ದೊರೆತಿವೆ. ನಂತರದ ದಿನಗಳಲ್ಲಿ ಪ್ರಾಕೃತ, ಸಂಸ್ಕೃತ, ಕನ್ನಡ, ತಮಿಳು ಮುಂತಾದ ಭಾಷೆಗಳಲ್ಲಿ ಶಾಸನಗಳು ರಚಿಸಲ್ಪಟ್ಟಿವು. ಅಧ್ಯಯನದ ದೃಷ್ಟಿಯಿಂದ ಈ ಎಲ್ಲಾ ಬಗೆಯ ಶಾಸನಗಳನ್ನು ಕಾಲಭೇದ, ದೇಶಭೇದ, ರಾಜಮನೆತನಗಳ ಭೇದ, ಭಾಷಾಭೇದ, ಹಾಗೂ ಲಿಪಿಭೇದಗಳೆಂದು ವಿಂಗಡಿಸಬಹುದೆಂದು ಡಾ. ಪಂಚಮುಖಿಯವರು ಹೇಳಿದ್ದಾರೆ.[೧] ಈ ವಿಭಾಗಗಳೆಲ್ಲವೂ ಶಾಸನಗಳ

ಹೊರಮೈಯನ್ನು ನೋಡಿ ಹೇಳುವ ಮಾತುಗಳು. ಆದರೆ ಅವುಗಳಲ್ಲಿ ವ್ಯಕ್ತವಾಗಿರುವ ಜನಜೀವನದ ಸಂಸ್ಕೃತಿಯನ್ನು ಅರಿಯಬೇಕಾದರೆ ಅವುಗಳ ಆಂತರಿಕ ಸ್ವರೂಪಕ್ಕೆ ಗಮನವನ್ನು ನೀಡಬೇಕಾಗುತ್ತದೆ. ಅವುಗಳು ಪ್ರತಿಪಾದಿಸುವ ವಸ್ತುವಿನ ವೈವಿಧ್ಯವನ್ನು ಗಮನಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಶಾಸನಗಳನ್ನು ಕೆಳಕಂಡಂತೆ ವಿಭಾಗಿಸಬಹುದಾಗಿದೆ.

೧. ದಾನಶಾಸನಗಳು

೨. ವಿದ್ಯಾದಾನಗಳು

೩. ವೀರಗಲ್ಲು, ಮಾಸ್ತಿಗಲ್ಲು, ನಿಷಧಿಗಲ್ಲುಗಳು

೪. ಧರ್ಮಗುರು ಅಥವಾ ವಿಶೇಷ ಜನರಿಗೆ ಕೊಟ್ಟ ದಾನಗಳು

೫. ಮೂರ್ತಿಗಳ ಮೇಲಿನ ಶಾಸನಗಳು

ಈ ಐದು ಭಾಗಗಳನ್ನು ಗಮನಿಸಿದಾಗ ನಮಗೆ ಮುಖ್ಯವಾಗಿ ಎರಡು ಅಂಶಗಳು ತಿಳಿದು ಬರುತ್ತವೆ. ಮೊದಲನೆಯದಾಗಿ ದೇವಾಲಯಗಳಿಗಾಗಿಯೋ, ವಿದ್ಯೆಗಾಗಿಯೋ ಇಲ್ಲವೇ ವಿಶಿಷ್ಟ ವ್ಯಕ್ತಿಗಳಿಗಾಗಿಯೋ ಕೊಟ್ಟ ದಾನಗಳು ಒಂದು ಬಗೆಯದಾದರೆ ವೀರಪುರುಷರ ಸ್ಮಾರಕ ಶಾಸನಗಳು ಜನತೆಯ ವೀರತ್ವವನ್ನು ವೀರತ್ವದ ಜೀವನವನ್ನು ಪ್ರತಿಬಿಂಬಿಸುವ ಸಂಕೇತಗಳಾಗಿದ್ದು ಎರಡನೆಯ ಬಗೆಯವುಗಳಾಗಿವೆ. ಹೀಗೆ ಪರಾಕ್ರಮ ಮತ್ತು ಧರ್ಮಗಳೆರಡೂ ಶಾಸನ ಸಂಸ್ಕೃತಿಯ ಎರಡು ಕಣ್ಣುಗಳಂತೆ. ಈ ಎರಡು ಅಂಶಗಳ ಹಿನ್ನೆಲೆಯಲ್ಲಿ ಕನ್ನಡಿಗರ ಕನ್ನಡನಾಡಿನ ಜನಜೀವನದ ವೈವಿಧ್ಯವನ್ನು ವೈಶಿಷ್ಟವನ್ನು ಅರಿತುಕೊಳ್ಳಬಹುದಾಗಿದೆ. ಒಂದೇ ಶಾಸನವನ್ನು ವಿವಿಧ ದೃಷ್ಟಿಗಳಿಂದ ನೋಡಿದಾಗ ಅದು ಅನೇಕ ವಿಷಯಗಳ ಮೇಲೆ ಬೆಳಕನ್ನು ಬೀರಲು ಸಾಧ್ಯವಾಗುತ್ತದೆ.

ಒಂದು ಶಾಸನ ದಾನ ಶಾಸನವಾಗಿದ್ದರೂ ಆದರಿಂದ ಪ್ರಾಸಂಗಿಕವಾಗಿ ಇನ್ನೂ ಅನೇಕ ಅಂಶಗಳು ಹೊರ ಬೀಳುತ್ತವೆ. ಮೊಟ್ಟಮೊದಲನೆಯದಾಗಿ ಅದನ್ನು ಬರೆಸಿದ ರಾಜ ಇಲ್ಲವೆ ಸಾಮಂತರು ಮತ್ತು ಅವರ ಕಾಲ ಸ್ಪಷ್ಟವಾಗಿ ತಿಳಿಯುತ್ತದೆ. ಐತಿಹಾಸಿಕ ಪ್ರಜ್ಞೆ ಕನ್ನಡ ಸಾಹಿತ್ಯ ಗ್ರಂಥಗಳಿಗಿಂತ ಕನ್ನಡ ಶಾಸನಗಳಲ್ಲಿ ವ್ಯಕ್ತವಾಗಿರುವುದೇ ಹೆಚ್ಚು. ಪ್ರತಿಯೊಂದು ಶಾಸನದಲ್ಲಿಯೂ ಅದು ರಚಿತವಾದ ಕಾಲ ನಿರ್ದಿಷ್ಟವಾಗಿ ಉಲ್ಲೇಖಿತವಾಗಿರುವುದರಿಂದ ಕರ್ನಾಟಕದ ರಾಜಕೀಯ ಚರಿತ್ರೆಗೆ ಮತ್ತು ರಚನೆಗೆ ಅಪಾರವಾದ ಕೊಡುಗೆಯನ್ನು ನೀಡಿವೆ.[೨] ಅನಂತರ ದಾನಶಾಸನಗಳಲ್ಲಿ ಉಲ್ಲೇಖಿತವಾಗಿರುವ ಅಂಶಗಳೆಂದರೆ ಕೊಟ್ಟ ದಾನ ಯಾವುದು? ಅದರ ಉದ್ದೇಶವೇನು? ಎಂಬುವುಗಳಾಗಿವೆ. ಅವುಗಳ ಜೊತೆಗೆ ಅಂದಿನ ಸಾಮಾಜಿಕ-ಧಾರ್ಮಿಕ ಸ್ವರೂಪಗಳನ್ನು ತಕ್ಕಮಟ್ಟಿಗೆ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಕೆಲವು ಶಾಸನಗಳಂತೂ ಅಂದಿನ ಕಾಲದ ಆರ್ಥಿಕ, ಆಡಳಿತ, ವ್ಯಾಪಾರ-ವಾಣಿಜ್ಯ ಮುಂತಾದ ವಿವರಗಳನ್ನು ಸ್ಪಷ್ಟವಾಗಿ ಉಲ್ಲೇಖಿಸಿರುತ್ತದೆ. ರಾಜನ ಪರಾಕ್ರಮ, ವಂಶವೃಕ್ಷ, ದೇಶವಿಸ್ತಾರ, ನಾಡು, ವಿಷಯ, ಊರು, ಗ್ರಾಮ, ಅಗ್ರಹಾರ ಮೊದಲಾದ ವಿಭಾಗಕ್ರಮ

ನಾಡಪೆರ್ಗಡೆ, ಪಟ್ಟಣಸ್ವಾಮಿ, ಊರಗಾವುಂಡ ಮೊದಲಾದ ಅಧಿಕಾರಿಗಳು ಮಾಹಾಡು, ಮಹಾಜನ ಮೊದಲಾದ ಆಡಳಿತ ಸಂಸ್ಥೆಗಳು, ಮಹಾನಾಯಕಾಚಾರ್ಯ, ಭಾಷೆಗೆ ತಪ್ಪುವ ರಾಯರ ಗಂಡ ಮುಂತಾದ ಬಿರುದುಗಳು ಇವುಗಳ ಉಲ್ಲೇಖಗಳು ಪ್ರಾಸಂಗಿಕವಾಗಿ ಉಲ್ಲೇಖಿತವಾಗಿರುತ್ತದೆ.

ಮೇಲಿನ ವಿಚಾರಗಳೊಂದಿಗೆ ಜನರ ಸ್ವಭಾವ ಅಪಾರ-ವಿಚಾರಗಳು ಶ್ರದ್ಧೆ ಸಾಧನೆಗಳು, ಭಕ್ತಿ, ನಂಬಿಕೆ, ವಿಶ್ವಾಸ, ಸ್ವಾಮಿ ನಿಷ್ಠೆ ವ್ಯಕ್ತಿ ವೈಶಿಷ್ಟ್ಯಗಳು ಮುಂತಾದ ಅಂಶಗಳು ಕೆಲವೊಮ್ಮೆ ಕೆಲವೊಂದು ಶಾಸನಗಳಲ್ಲಿ ಗೋಚರಿಸುತ್ತವೆ. ಇವುಗಳಿಂದ ಅಂದಿನ ಜನತೆಯ ಜೀವನವನ್ನು ಅವರ ಸಂಸ್ಕೃತಿಯನ್ನು ಅರಿತುಕೊಳ್ಳಲು ಸಹಾಯಕವಾಗುತ್ತವೆ. ಅಂದರೆ ಅಂದಿನ ಜನರ ಚೈತನ್ಯವನ್ನು ಪಡಿನುಡಿಯುತ್ತಿರುವ ಜೀವಂತ ಸಾಕ್ಷಿಗಳಾಗಿ ಪರಿಣಮಿಸುತ್ತವೆ. ಅಲ್ಲದೇ ಆಯಾಯ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ರಚಿಸಲು ಬಹುಮುಖ್ಯ ಆಧಾರಗಳಾಗಿವೆ. ಏಕೆಂದರೆ ಶಾಸನಗಳು ಅಗೆದಷ್ಟು ಅರ್ಥವನ್ನು ಕೊಡುವ ಅಮೂಲ್ಯ ಸಂಪತ್ತಿನ ಗಣಿಗಳಾಗಿವೆ. ನಮ್ಮ ಹಿಂದಿನ ಹಿರಿಯರ ಆಶೋತ್ತರಗಳನ್ನು ಅವರ ಸಂಸ್ಕೃತಿ ವಿಕಾಸದ ಮಾರ್ಗವನ್ನು ಕಂಡುಕೊಳ್ಳುವ ಅಮೂಲ್ಯ ಸಾಧನಗಳಾಗಿವೆ.[೩] ಹಾಗಾಗಿ ಪ್ರಾಚೀನ ಕಾಲದಿಂದಲೂ ಶಾಸನಗಳನ್ನು ಪತ್ತೆ ಹಚ್ಚುವುದು ಸಂಗ್ರಹಿಸುವುದು ಓದುವ ಕಾರ್ಯ ತ್ವರಿತವಾಗಿರುವುದನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲಿ ಶಾಸನಗಳ ಪ್ರಾರಂಭ ಕ್ರಿ.ಶ.೫ನೆಯ ಶತಮಾನದಿಂದ ಆಗಿರುವುದನ್ನು ಕಾಣಬಹುದು. ಕ್ರಿ.ಶ.೪೫೦ರ ಹಲ್ಮಿಡಿ ಶಾಸನವೇ ಕನ್ನಡದ ಪ್ರಾಚೀನ ಹಾಗೂ ಮೊದಲನೆಯ ಶಾಸನವಾಗಿದೆ.[೪] ಅನಂತರ ಕ್ರಿ.ಶ.೭ನೆಯ ಶತಮಾನದ್ದೆಂದು ಹೇಳಲಾಗುವ ಬಾದಾಮಿಯ ಮಂಗಳೇಶನ ಶಾಸನ. ಬಹುಶಃ ಕನ್ನಡದ ೨ನೆಯ ಶಾಸನ[೫]. ನಂತರದಲ್ಲಿ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಅರಸರುಗಳ ಕಾಲದಲ್ಲಿ ಕನ್ನಡ ಶಾಸನಸಂಪತ್ತು ಶ್ರೀಮಂತವಾಗಿ ಬೆಳೆಯಿತು. ಆದರೆ ಇವರ ನಂತರದಲ್ಲಿ ಬಂಧ ಪಾಳೆಯಪಟ್ಟುಗಳ ಅರಸರ ಕಾಲದಲ್ಲಿ ಅನೇಕ ಶಾಸನಗಳು ರಚನೆಯಾಗಿವೆ. ಆದರೂ ಶಾಸನ ರಚನೆ ಇಳಿಮುಖವಾಗಿರುವುದನ್ನು ಗಮನಿಸಬಹುದು. ರಾಜಮನೆತನಗಳ ದೃಷ್ಟಿಯಿಂದಲೂ ಶಾಸನಗಳನ್ನು ವಿಭಾಗಿಸುವುದಕ್ಕೂ ಅವಕಾಶವಿದೆ. ಉದಾಹರಣೆಗೆ ಬಾದಾಮಿ ಚಾಲುಕ್ಯರ ಶಾಸನಗಳು, ರಾಷ್ಟ್ರಕೂಟರ ಶಾಸನಗಳು, ವಿಜಯನಗರದ ಅರಸರ ಶಾಸನಗಳು, ಪಾಳೆಯಗಾರರ ಶಾಸನಗಳು ಇತ್ಯಾದಿ.

ಪ್ರಾರಂಭದ ಶಾಸನಗಳಲ್ಲಿ ವಿಶೇಷ ಆಡಂಬರದ ಬಿರುದಾವಳಿಗಳು, ವರ್ಣನೆಗಳು ಇಲ್ಲವೆ ನೇರವಾಗಿ ವಿಷಯ ನಿರೂಪಣೆಯನ್ನು ಮಾತ್ರ ಕಾಣಬಹುದು. ಅಂದರೆ ಪ್ರಮುಖವಾಗಿ ಮಂಗಳಶ್ಲೋಕ, ರಾಜವಂಶಾವಳಿ, ದತ್ತಿಯ ವಿವರಣೆ, ದಾನಗಳ ವಿವರಣೆಗಳನ್ನು

ಒಳಗೊಂಡಿರುತ್ತಿದ್ದವು. ಅದರಲ್ಲೂ ಸಾಮಾನ್ಯವಾಗಿ ಗದ್ಯರೂಪದಲ್ಲಿರುತ್ತಿದ್ದವು. ಆದರೆ ಕ್ರಮೇಣ ಶಾಸನಗಳಲ್ಲಿ ವರ್ಣನೆಯ ಪ್ರಭಾವ ಹೆಚ್ಚಾಗಿ ಗದ್ಯಕ್ಕಿಂತ ಪದ್ಯರೂಪವೇ ಪ್ರಧಾನವಾಗಿ ಬೆಳೆಯಿತು.

ಪ್ರಾಚೀನ ಕಾಲದ ಎಲ್ಲಾ ರಾಜಮನೆತನಗಳು ಹಾಕಿಸಿದಂತೆ ಹರಪನಹಳ್ಳಿ ಪಾಳೆಯಗಾರರು ಕೂಡ ಅನೇಕ ಶಾಸನಗಳನ್ನು ಹಾಕಿಸಿದ್ದಾರೆ. ಅಧ್ಯಯನದ ದೃಷ್ಟಿಯಿಂದ ಇವರ ಕಾಲದ ಶಾಸನಗಳನ್ನು ದಾನಶಾಸನಗಳು, ದಾನಶಾಸನಶಿಲ್ಪ, ಸ್ಮಾರಕಶಾಸನಗಳು ಹಾಗೂ ಸ್ಮಾರಕಶಿಲ್ಪಗಳು ಭೂದಾನ ಪಟ್ಟೇದಗಳೆಂದು ವಿಭಾಗಿಸಲಾಗಿದೆ.

### ೪.೨ ದಾನಶಾಸನಗಳು

ಹರಪನಹಳ್ಳಿ ಪಾಳೆಯಗಾರರ ದಾನಶಾಸನಗಳಲ್ಲಿ ಹೆಚ್ಚಾಗಿ ಭೂದಾನ ಕೊಟ್ಟ ಶಾಸನಗಳಾಗಿವೆ. ಭೂದಾನವು ಹಿಂದಿನಿಂದಲೂ ನಡೆದು ಬಂದಂತಹ ಪದ್ಧತಿ. ಭೂದಾನವು ಒಂದು ಧಾರ್ಮಿಕ ಕಾರ್ಯವಾಗಿದ್ದು ಇದರಿಂದ ಪುಣ್ಯ ಲಭಿಸುತ್ತದೆ ಎಂಬ ನಂಬಿಕೆ ಪ್ರಾಚೀನ ಕಾಲದ ಜನರಲ್ಲಿತ್ತು. ಹಾಗಾಗಿ ಅರಸರು, ಸಾಮಂತರು, ಮಾಂಡಲೀಕರು ತಮ್ಮ ತಂದೆ ತಾಯಿಯರ ಹೆಸರಿನಲ್ಲೂ ತಮಗೆ ಇಷ್ಟವಾದ ವ್ಯಕ್ತಿಯ ಹೆಸರಿನಲ್ಲೋ ಪುಣ್ಯವಾಗಲೆಂದು ದೇವರಿಗೆ ದೇವಾಲಯಗಳಿಗೆ ಪಂಡಿತರ ಕಾಲು ತೊಳೆದು ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಧಾರ್ಮಿಕ ದಾನದಲ್ಲಿ ಬ್ರಹ್ಮದೇಯ ಮತ್ತು ದೇವದಾನಗಳು ಪ್ರಮುಖವಾದವು. ಬ್ರಹ್ಮದೇಯವು ಬ್ರಾಹ್ಮಣನಿಗೆ ಅಥವಾ ಅವರ ಗುಂಪಿಗೆ ಅಧ್ಯಯನ, ಅಧ್ಯಾಪನ ಮತ್ತು ಧಾರ್ಮಿಕ ಕಾರ್ಯಗಳನ್ನು ನಿಶ್ಚಿಂತೆಯಿಂದ ನಡೆಸಿಕೊಂಡು ಹೋಗಲು ನೀಡುವಂತಹ ಭೂದಾನವಾಗಿದೆ.

ಶಾಸನಗಳಲ್ಲಿ ಹೆಚ್ಚಾಗಿ ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಅಗ್ರಹಾರ ನಿರ್ಮಾಣ, ಕೆರೆಗಳ ನಿರ್ಮಾಣ ಅವುಗಳ ದುರಸ್ತಿ ಮಾಡಿಸುವ ವಿಚಾರಗಳು ಕಂಡು ಬರುತ್ತವೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ದೊರೆತಿರುವ ಶಾಸನಗಳನ್ನು ವಿವರಿಸಲಾಗಿದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿಯ ಕ್ರಿ.ಶ.೧೫ನೆಯ ಶತಮಾನದ ಶಾಸನವೊಂದರಲ್ಲಿ ಬಂಡೆರಂಗನಾಥಸ್ವಾಮಿಯ ಹಾಗೂ ಅದರ ಪೂಜಾರಿಗಳ ಉಲ್ಲೇಖವಿದೆ.[೬] ಹೊಸಪೇಟೆ ತಾಲ್ಲೂಕಿನ ಹೊಸೂರು ಗ್ರಾಮದ ಕ್ರಿ.ಶ. ೧೬ನೆಯ ಶತಮಾನದ ೧೬ ಸಾಲಿನ ಶಾಸನ ಹೊಸೂರು ಮಹಾಮಾಯಿಯ ಪೂಜಾರ್ಥವಾಗಿ ಬ್ರಾಹ್ಮಣ ಚಿತ್ತವಾಡಿಗಿಯ ಸೀಮೆಯಲ್ಲಿ ಕೆಲವು ಸ್ಥಳಗಳನ್ನು ಮಾದಿನಾಯಕರು ದತ್ತಿ ಬಿಟ್ಟ ವಿಚಾರವನ್ನು ಉಲ್ಲೇಖಿಸುತ್ತದೆ. ಈ ಶಾಸನವನ್ನು ದೇವಾಲಯದ ಭಾಗವತ ನಾಗಯ್ಯ ಬರೆದಿದ್ದಾನೆಂದು ತಿಳಿದು ಬಂದಿದೆ[೭]. ಹೊಸಪೇಟೆ ತಾಲ್ಲೂಕಿನ ಮೆಟ್ರಿ ಗ್ರಾಮದ ಕ್ರಿ.ಶ.೧೬ನೆಯ ಶತಮಾನದ ಶಾಸನ ಓಬಳ ದೇವರಿಗೆ ಬಿಟ್ಟಿಮಾನ್ಯವನ್ನು

ಉಲ್ಲೇಖಿಸಿದೆ[೮]. ಸಾಮಾನ್ಯವಾಗಿ ಆಹೋಬಲಿನರಸಿಂಹಸ್ವಾಮಿ ಪಾಳೆಯಗಾರರ ಮನೆದೇವರಾಗಿತ್ತು. ಹಾಗಾಗಿ ಈ ದೇವರಿಗೆ ಮಾನ್ಯ ಬಿಟ್ಟಿದ್ದರೆಂದು ಇದರಿಂದ ತಿಳಿಯಬಹುದಾಗಿದೆ. ಬಯ್ಯಪ್ಪನಾಯಕನ ಮಗ ಕೃಷ್ಣಪ್ಪನಾಯಕನ ಸಾಮಂತ ಹಳವಿನಾಯಕನು ಬಾಗಳಿಯನ್ನು ಆಳುತ್ತಿದ್ದಾಗ ಬಾಗುಳಿಯ ಪಟ್ಟಣಸ್ವಾಮಿ ಲಕ್ಕಿಸೆಟ್ಟಿಯ ಲಿಂಗಮ್ಮನು ತನ್ನ ಮಗ ಲಿಂಗಯ್ಯನಿಗೆ ಶುಭವಾಗಲೆಂದು ಕಲಿದೇವರಿಗೆ ನೈವೇದ್ಯಕ್ಕೆಂದು ಸ್ಥಾನಿಕ ದೇವರಾಸಿಜೀಯನ ಕೈಯಲ್ಲಿ ದಾನ ನೀಡುತ್ತಾಳೆ[೯].

ಉಚ್ಚಂಗೆಮ್ಮ ದೇವಾಲಯದ ಎದುರಿನ ಸಿಬಾರ ಕಂಬದಲ್ಲಿರುವ ಶಾಸನದಲ್ಲಿ ಮಹಾಮಂಡಳೇಶ್ವರ ಬಲ್ಲಾಳನು ಏಕನಾಥದೇವತೆಗೆ ಸಿಬಾರವನ್ನು ಮಾಡಿಸಿ ಪ್ರತಿಷ್ಠೆ ಮಾಡಿಸಿದ ಉಲ್ಲೇಖವಿದೆ[೧೦]. ಮೊದಲ ಪಾಳೆಯಗಾರ ದಾದೇನಾಯಕನ ಹೆಂಡತಿ ಕ್ರಿ.ಶ.೧೬೫೩ರಲ್ಲಿ ಹೊನ್ನನಾಗತಿ, ಉಚ್ಚಂಗೆಮ್ಮನಿಗೆ ಘಂಟೆಯನ್ನು ಮಾಡಿಸಿ ಸಮರ್ಪಿಸಿದಳು. ಆದರೆ ಅದು ಒಡೆದು ಹೋದಾಗ ಕುಮಾರ ಬಸಪ್ಪ ಘಂಟೆ ಮಾಡಿಸಿ ಸಮರ್ಪಿಸಿದನೆಂದು ನವರಂಗದ ಬಲಭಾಗದ ದೊಡ್ಡ ಘಂಟೆಯ ಶಾಸನ ತಿಳಿಸುತ್ತದೆ[೧೧]. ಘಂಟೆ ಮಾಡಿಸಿದವನು ಕಂಚುಗಾರ ಗೌಡ ದಂಡಪ್ಪನ ಮಗ ನಾಗಪ್ಪ. ಶಾಸನ ಕೆತ್ತಿದವನು ಅಕ್ಕಸಾಲಿ ಮುದಿಯಪ್ಪನ ಮಗ ಕಲಿಯಪ್ಪ. ಅದೇ ದೇವಾಲಯದ ನವರಂಗದ ಎಡಭಾಗದ ಘಂಟೆಯ ಶಾಸನ ಬಾಗಳಿ ಮುಮ್ಮಡಿ ಬಸಪ್ಪನಾಯಕ ಉಚ್ಚಂಗೆಮ್ಮನ ಗುಡಿಯ ದುರಸ್ತಿ ಮಾಡಿಸಿ ಘಂಟೆಯನ್ನು ದತ್ತಿ ಕೊಟ್ಟ ವಿಚಾರ ತಿಳಿಸುತ್ತದೆ[೧೨]. ಈ ಘಂಟೆಯಲ್ಲಿ ದಾದೇನಾಯಕರ ಪತ್ನಿ ಹೊನ್ನೇನಾಗತಿ ಉಚ್ಚಂಗೆಮ್ಮನವರ ವೊಲಗಕ್ಕೆ ದತ್ತಿ ಕೊಟ್ಟ ಘಂಟೆಯನ್ನು ಕುಮಾರ ರಂಗನಾಯಕರು ಕುಮಾರ ಬಸಪ್ಪನಾಯಕರು ಬೊಕ್ಕಸದ ಕೋನಯ್ಯನಿಂದ ಮಾಡಿಸಿದ ಘಂಟೆ ಭಿನ್ನವಾದಾಗ ಕುಮಾರ ಬಸಪ್ಪನಾಯಕರು ಚಿಗಟೇರಿ ಶಿವನಪ್ಪನ ಮುಖಾಂತರ ಘಂಟೆ ಮಾಡಿಸಿದನೆಂದು ವಿವರಣೆಯಿದೆ.

ಮೊದಲ ಬಸವಂತನಾಯಕನ ಕೂಡ್ಲಿಗಿ ತಾಲ್ಲೂಕಿನ ಚಿಕ್ಕಕೆರೆಯಾಗಿನಹಳ್ಳಿಯ ಪೂರ್ವಭಾಗದ ಶಾಸನದಲ್ಲಿ ಬಾಗುಳಿ ಸಂಸ್ಥಾನ ಪರಾಧೀನವಾಗಬಾರದೆಂದು ಮಾರುತಿಗೆ ದತ್ತಿ ಬಿಟ್ಟಿರಬಹುದು. ಆದರೆ ಕಲ್ಲು ಒಡೆದು ಹೋಗಿರುವುದರಿಂದ ಪೂರ್ಣ ಮಾಹಿತಿ ಲಭ್ಯವಾಗಿಲ್ಲ[೧೩]. ಕರಡಿದುರ್ಗದ ಕೋಟೆ ಆಂಜನೇಯ ದೇವಾಲಯದ ಸಭಾಮಂಟಪದಲ್ಲಿರುವ ಮುಮ್ಮಡಿ ಬಸಪ್ಪನಾಯಕನ ಶಾಸನದಲ್ಲಿ ಹನುಮಂತದೇವರ ಮೈದೂರ ಎಂದು ಅಪೂರ್ಣ ಮಾಹಿತಿ ಇರುವುದರಿಂದ ಬಹುಶಃ ಹನುಮಂತದೇವರಿಗೆ ದಾನ ನೀಡಿದ ಮಾಹಿತಿ ಇದ್ದಿರಬಹುದೆಂದು ಊಹಿಸಬಹುದಾಗಿದೆ[೧೪]. ಮುಮ್ಮಡಿ ಬಸಪ್ಪನಾಯಕನು ಉಚ್ಚಂಗೆಮ್ಮನಿಗೆ ಘಂಟೆಯನ್ನು ಸಮರ್ಪಿಸಿದ ವಿಚಾರ ಉಚ್ಚಂಗಿದುರ್ಗದ ಗುಡಿಯ ನವರಂಗದ ಎಡಭಾಗದ ಘಂಟೆ ಶಾಸನ ತಿಳಿಸುತ್ತದೆ[೧೫]. ಮುಮ್ಮಡಿ ಬಸಪ್ಪನಾಯಕನು ಮತ್ತೊಂದು ಶಾಸನ ಉಜ್ಜನಿ ಸಿದ್ದೇಶ್ವರ ದೇವಾಲಯದ ಘಂಟೆ ಶಾಸನವಾಗಿದೆ. ಇದು ಸಿದ್ದೇಶ್ವರ ದೇವರ ಪಾದಕೆ ಘಂಟೆಯನ್ನು ಸಮರ್ಪಿಸಿದ ವಿಚಾರ ತಿಳಿಸುತ್ತದೆ[೧೬]. ಎರಡನೆಯ

ಬಸವಂತನಾಯಕನ ಹಿರೇಮ್ಯಾಗಳಗೇರಿಯ ಕಲ್ಲೇಶ್ವರ ಗುಡಿಯ ಶಾಸನ ಬಸವಂತನಾಯಕನ ಕಾರ್ಯಕರ್ತ ಮೇಗಳಗೆರೆಯ ಸ್ಥಾನಿಕ ಬಾಬಾನಾಯಕರು ಸಿದ್ದನಬಾವಿಯನ್ನು ಕಲ್ಲೇಶ್ವರ ಅನಂತಶಯನ ಗುಡಿಯನ್ನು ಜೀರ್ಣೋದ್ಧಾರ ಮಾಡಿ ಕಟ್ಟಿಸಿದ ವಿಚಾರವನ್ನು ಉಲ್ಲೇಖಿಸುತ್ತದೆ[೧೭]. ಕೊಟ್ಟೂರು ಬಸವೇಶ್ವರ ದೇವರ ಧರ್ಮಕ್ಕಾಗಿ ವೊಡ್ಡಿನಹಳ್ಳಿ ಗ್ರಾಮವನ್ನು ಲಿಂಗಾರ್ಪಿತ ಮಾಡಿಕೊಟ್ಟ ವಿಚಾರ ಪ್ರಭುದೇವರ ಮಠದ ಕ್ರಿ.ಶ.೧೭೨೨ರ ವೊಡ್ಡಿನಹಳ್ಳಿಯ ಶಾಸನ ತಿಳಿಸುತ್ತದೆ[೧೮].

ಬಾಗಳಿಯ ಮುಮ್ಮಡಿಬಸಪ್ಪನಾಯಕ ಮಲ್ಲಿಯಪ್ಪ ಸೆಟ್ಟಿಯವರಿಗೆ ಕೊಟ್ಟೂರು ಬಸವೇಶ್ವರ ದೇವರ ಸನ್ನಿಧಿಯಲ್ಲಿ ಮಾಡುವ ದಾಸೋಹಕ್ಕೆ ಕನ್ನಾಯಕನಕಟ್ಟೆ ಗ್ರಾಮವನ್ನು ಶಿವಾರ್ಪಿತವಾಗಿ ಕೊಟ್ಟನೆಂದು ತಿಳಿದು ಬರುತ್ತದೆ[೧೯].

ವ್ಯಕ್ತಿಯು ಮಾಡಿದ ಸೇವೆಗಳು, ಧಾರ್ಮಿಕ ಹಾಗೂ ಸಾರ್ವಜನಿಕ ಕಾರ್ಯಗಳು ಮತ್ತು ಯುದ್ಧದಲ್ಲಿ ಮಾನಪ್ರಾಣಗಳನ್ನು ರಕ್ಷಿಸಿದಂತಹ ವ್ಯಕ್ತಿಗಳಿಗೆ ರಾಜರು, ರಾಣಿಯರು, ಅಧಿಕಾರಿಗಳು ಹಾಗೂ ಗ್ರಾಮಸ್ಥರು ದಾನವನ್ನು ನೀಡುತ್ತಿದ್ದರು. ಇಂತಹ ಕೆಲವು ಶಾಸನಗಳು ಹರಪನಹಳ್ಳಿ ಪಾಳೆಯಗಾರರ ಕಾಲಾವಧಿಯಲ್ಲಿ ಕಾಣಸಿಗುತ್ತವೆ. ಅವುಗಳನ್ನು ಕಾಲಾನುಕ್ರಮವಾಗಿ ಕೆಳಕಂಡಂತೆ ವಿವರಿಸಲಾಗಿದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬನ್ನಿಕಲ್ಲು ಗ್ರಾಮದ ಹಳ್ಳಿಕೊಟ್ರಪ್ಪನವರ ಮನೆ ಮುಂದೆ ಬಿದ್ದಿರುವ ಸುಮಾರು ೧೭ನೆಯ ಶತಮಾನದ ಶಾಸನದಲ್ಲಿ ಬಸಪ್ಪನಾಯಕನ ಆಡಳಿತಾವಧಿಯಲ್ಲಿ ಬನ್ನಿಕಲ್ಲಿನ ಗೌಡ ಮತ್ತು ಚಿಟ್ಟುಕುರುವತ್ತಿಗೌಡರ ಸಮಕ್ಷಮದಲ್ಲಿ ಶಾನಭೋಗರಿಗೆ 'ನೂರವರಹ' ಪದಗಾಣಿಕೆ ನೀಡಲು ಹೋದಾಗ 'ಹತ್ತುವರಹ' ಪಡೆದನು. ಅದಕ್ಕಾಗಿ ಅವನಿಗೆ 'ರಾಗಿಬಿತ್ತನೆಗೆ' ಹೊಲವನ್ನು ಮಾನ್ಯವಾಗಿ ಕಲ್ಲು ಹಾಕಿಸಿ ಕುರುವತ್ತಿಗೌಡನು ಭದ್ರಗೌಡನಿಗೆ ಇದನ್ನು ಮುಂದುವರೆಸಿಕೊಂಡು ಹೋಗಲು ಸೂಚಿಸಿದಂತೆ ತಿಳಿಯುತ್ತದೆ.[೨೦] ಕಸವನಹಳ್ಳಿ ಗ್ರಾಮದ ಉತ್ತರಕ್ಕೆ ಹೊಲದಲ್ಲಿ ಬಿದ್ದಿರುವ ಶಾಸನ (ಕಲ್ಲು ಒಡೆದಿದೆ) ವೀರವೆಂಕಟ ಪತಿಮಹಾರಾಯನ ಮಗ ಬಾಗಳಿ ಬಸವಂತಪ್ಪನಾಯಕರು ಕಸವನಹಳ್ಳಿ ಪುರವರ್ಗ ಹಾಳು ಬಿದ್ದಾಗ ಸರಿಪಡಿಸಿ ಅದನ್ನು ಜೀರ್ಣೋದ್ಧಾರ ಮಾಡಿದ ಗಿರಿಮಲ್ಲಪ್ಪನ ಮೊಮ್ಮಗ ಹಾಗೂ ಬಸವಯ್ಯನ ಮಗನಾದ ತಿರುಕಪ್ಪನಿಗೆ ಭೂದಾನ ನೀಡಿದ ಬಗ್ಗೆ ಉಲ್ಲೇಖವಿದೆ[೨೧]. ಈ ಶಾಸನ ೩೫ ಸಾಲುಗಳನ್ನು ಹೊಂದಿದೆ. ಬಾಗಳಿ ಬಸವಂತಪ್ಪನಾಯಕನು ತನ್ನನ್ನು ವೆಂಕಟಪತಿದೇವರಾಯನ ಮಗನೆಂದು ಕರೆದುಕೊಂಡಿದ್ದಾನೆ. ಹಾಗೆಯೇ ಮತ್ತೊಂದು ವಿಚಾರವು ತಿಳಿದು ಬರುತ್ತದೆ. ಹರಪನಹಳ್ಳಿ ತಾಲ್ಲೂಕಿನ ಕಸವನಹಳ್ಳಿ ಗ್ರಾಮದಲ್ಲಿರುವ ಕ್ರಿ.ಶ.೧೬೬೦ರ ಶಾಸನ ಶ್ರೀವೀರವೆಂಕಟಪತಿ ಮಹಾದೇವಾರಾಯನ ಪುತ್ರ ಬಾಗುಳಿಯ ಬಸವಪ್ಪನಾಯಕ

ಗಿರಮಲ್ಲಪ್ಪನ ಮಗ ಉಜ್ಜಿನ ಸಿಂಹಾಸನದ ಶಿಷ್ಯ ಬಸವಯ್ಯನ ತಿರುಕಪ್ಪನಿಗೆ ಕಸವನಹಳ್ಳಿಯ ಜೀರ್ಣೋದ್ಧಾರ ಕಾರ್ಯಕ್ಕಾಗಿ ದಾನ ಬಿಟ್ಟ ಸಂಗತಿ ಇದೆ.

ಹರಪನಹಳ್ಳಿ ತಾಲ್ಲೂಕು ಅರಸೀಕೆರೆ ಗ್ರಾಮದ ಕೆರೆಯ ಹತ್ತಿರ ಬಿದ್ದಿರುವ ಶಾಸನ ವಿಜಯನಗರದ ಅರಸ ರಾಮದೇವ/ರಾಮರಾಯನ ಕುಮಾರ ಬಾಗುಳಿ ಬಸವಪ್ಪನಾಯಕ ಅಯ್ಯನವರು ಮುರಿಗೆಯ ಸಾಂತರ ಮಗ ಗಿರಿಮಲ್ಲಣ್ಣನ ಮಗ ಬಸವಯ್ಯನಿಗೆ ರಾವುತ ವೃತ್ತಿಗಾಗಿ ಭೂದಾನ ನೀಡಿದ ಬಗ್ಗೆ ಮಾಹಿತಿ ನೀಡುತ್ತದೆ[೨೨]. ಮುಮ್ಮಡಿಬಸಪ್ಪನಾಯಕ ತಮ್ಮ ಪುರೋಹಿತರೂ, ಜೋಯಿಸರೂ ಆದ ಸಿಂಹಾದ್ರಿ ಭಟ್ಟರ ಮಕ್ಕಳು ವೋಬಳಭಟ್ಟರು, ಲಕ್ಷ್ಮಣಭಟ್ಟರು, ಹಿರೇಚಂದ್ರಭಟ್ಟರು, ಚಿಕ್ಕಚಂದ್ರಭಟ್ಟರು, ಚಿಕ್ಕವೋಬಳಭಟ್ಟರು ಮತ್ತು ಅವರ ಮಕ್ಕಳು ಯೋಗೇಶ್ವರಭಟ್ಟರು, ಕಾಶಿಭಟ್ಟರು, ಅನಂತಭಟ್ಟರು, ವಿಶ್ವನಾಥಭಟ್ಟರ ಮಕ್ಕಳು ಯಲ್ಲಂಭಟ್ಟರು, ನರಸಿಂಹಭಟ್ಟರು, ದೇವೋತ್ತಭಟ್ಟರು, ಹಿರೇವೋಬಳಭಟ್ಟರ ಮಕ್ಕಳು ಹನುಮಂತಭಟ್ಟರು, ತಿಮ್ಮಣ್ಣಭಟ್ಟರಿಗೆ ಹೊಲಗಳನ್ನು ಮಾನ್ಯ ನೀಡಿ ನಿರೂಪ ಹಾಕಿಸಿದ್ದಾರೆ[೨೩]. ಶೃಂಗೇರಿಯ ಶ್ರೀಶಂಕರಭಾರತೀಸ್ವಾಮಿಗಳವರ ಮಠಕ್ಕೆ ಹಲುವಾಗಲು ಬಳಿಯ ತುಂಗಭದ್ರಾ ತೀರದ ಬಸಾಪುರ ಗ್ರಾಮವನ್ನು ಸರ್ವಮಾನ್ಯವಾಗಿ ಬಾಗಳಿಯ ಮುಮ್ಮಡಿಬಸವಪ್ಪನಾಯಕ ಅಯ್ಯನವರು ನೀಡಿದ್ದಾರೆಂದು ತಿಳಿದು ಬರುತ್ತದೆ[೨೪]. ಇದೇ ನಾಯಕ ಕೆಸರಹಳ್ಳಿ ಗ್ರಾಮದಲ್ಲಿ ಯೆರೆಹೊಲದ ಬೀಜವರಿಯ ಹತ್ತು ಗಿದ್ದನ ಹೊಲವನ್ನು ದಾರಾದತ್ತವಾಗಿ ಶ್ರೀಕೊಟ್ಟೂರೇಶ್ವರ ಸ್ವಾಮಿ ತುಪ್ಪಕ್ಕೆ ಭೂದಾನ ನೀಡಿದ ಉಲ್ಲೇಖವಿದೆ[೨೫].

ಬಾಗಳಿ ತಿಮ್ಮಮ್ಮಾಜಿ ಬನ್ನಿಕಲ್ಲು ಶೀಲವಂತ ಬಸಯ್ಯನ ಮಗ ಬಸಯ್ಯನಿಗೆ ಭೂದಾನ ನೀಡಿದ ಮಾಹಿತಿ ಕ್ರಿ.ಶ. ೧೭೧೦ರ ಶಾಸನ ನೀಡುತ್ತದೆ[೨೬]. ಹಾಗೆಯೇ ಬಾಗಳಿ ಹರಿಯಮ್ಮಾಜಿ ತಮ್ಮ ರಾಜಪುರೋಹಿತ ಜೋಯಿಸರಾದ ದೇವಣಭಟ್ಟರ ತಮ್ಮ ನಾಗಣ್ಣಭಟ್ಟರಿಗೆ ಕೊರೆಗಲ್ಲು ಕಾಲುವೆಯ ಕಟ್ಟೆಯನ್ನು ಕಟ್ಟಿಸಿದ್ದಕ್ಕಾಗಿ ದಾನ ಧಾರಪೂರ್ವಕವಾಗಿ ಕೊಗುಳಿ ಪೆಂಟಕೆ ಸಲ್ಲುವ ನಾರಾಯಣದೇವರ ಕೆರೆಯ ಗದ್ದೆ ಬೀಜವರಿ ೮೨ ವಕ್ಕಳ ಗದ್ದೆಯನ್ನು ದಾನ ನೀಡಿ ಶಾಸನ ಹಾಕಿಸಿದ್ದಾಳೆ[೨೭]. ಜೋಯಿಸ ಪ್ರಸನ್ನಭಟ್ಟರಿಗೆ ದಾನ ನೀಡಿದ ಹರಿಯಮ್ಮಾಜಿಯ ಮತ್ತೊಂದು ದಾನ ಶಾಸನದಲ್ಲಿ ತಿಳಿಯುವ ವಿಷಯವೆಂದರೆ ಪ್ರಸನ್ನಭಟ್ಟರು ಶಂಕರಚಾರ್ಯರ ಮಠವನ್ನು ಕಟ್ಟಿಕೊಟ್ಟ ಕಾರಣ ಅವರು ಶ್ರೀವಿರೂಪಾಕ್ಷೇಶ್ವರರ ಪ್ರತಿಷ್ಠೆ ಮಾಡಿದ ಕಾರಣ ದೇವರ ಅಮೃತಪಡಿಗೆ ಬಾಗಳಿಯಲ್ಲಿ ಒಂದು ವಕ್ಕಳ ಗದ್ದೆಯನ್ನು ನೀಡಿದ್ದಾಳೆ[೨೮]. ಹಾಗೆಯೇ ದಳವಾಯಿ ಬಸವಪ್ಪನು ತಮ್ಮ ಮಾನ್ಯದ ಗ್ರಾಮ ಅಲಗಿಲವಾಡದಲ್ಲಿ ನಾಗದೇವಭಟ್ಟರಿಗೆ ಗದ್ದೆ ಬೀಜವರಿಯಲ್ಲಿ ಒಂದು ವಿಷಯ ಹರಿಯಮ್ಮಾಜಿ ತಮ್ಮ ರಾಜಪುರೋಹಿತರಾದ ನಾಗದೇವಭಟ್ಟರಿಗೆ ಬರೆಸಿಕೊಟ್ಟ ಭೂದಾನ ಪಟ್ಟೇದದಲ್ಲಿದೆ[೨೯].

ಹ್ಯಾರಡ (ಹೂವಿನಹಡಗಲಿ)ದ ಸೇವಭೋವನ ಮಗನಿಗೆ ಬಾಗಳಿ ಬಸವಪ್ಪನಾಯಕನ ಆದೇಶದಂತೆ ಸೋಗೆ ಮದಕ/ಮದಪ್ಪ ನಾಯಕನು ಭೂದಾನ ನೀಡಿದನೆಂದು ಶಾಸನದಲ್ಲಿ ಉಲ್ಲೇಖವಿದೆ[೩೦]. ಇದೇ ನಾಯಕನ ಮತ್ತೊಂದು ಭೂದಾನ ಶಾಸನದಲ್ಲಿ ಅವರ ಪುರೋಹಿತರಾದ ವಿಶ್ವನಾಥಭಟ್ಟ, ಹಿರೇವೋಬಳಭಟ್ಟ, ಚಿಕ್ಕವೋಬಳಭಟ್ಟ, ಸಿಂಹಾದ್ರಿಭಟ್ಟರ ಪುತ್ರರಿಗೆ ಪಟ್ಟಾಭಿಷೇಕದ ಸಮಯ ನಿಮಗೆ ದಾನ ಧಾರಾಪೂರ್ವಕವಾಗಿ ನಮ್ಮ ಹೊಸೂರು ಪಟ್ಟಡಿಯೊಳಗಿನ ಚಿತ್ತವಾಡಗಿ ಗ್ರಾಮದಲ್ಲಿ ಎರಡು ಇಕ್ಕುಳ ಬೀಜವರಿ ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ. ಇವನ ಮತ್ತೊಂದು ದಾನ ಶಾಸನ ಬಸವಲಿಂಗ ಒಡೆಯರಿಗೆ ಕೊಟ್ಟ ದಾನವನ್ನು ತಿಳಿಸುತ್ತದೆ[೩೧]. ಈ ಶಾಸನದಲ್ಲಿ ಬಾಗಳಿ ಬಸವಪ್ಪನಾಯಕನನ್ನು 'ಕಲಿಯುಗದ ಭೋಜ' ಎಂದು ಉಲ್ಲೇಖಿಸಲಾಗಿದೆ.

ಬಾಗಳಿ ಬಸವಪ್ಪನಾಯಕ 'ಹುಲಿಗಿಕೋಟೆ' ಗೆ ಮುತ್ತಿಗೆ ಹಾಕಿ ಜಯ ಗಳಿಸಿದ ಪ್ರತಿಫಲವಾಗಿ ನಾರಾಯಣದೇವರಕೆರೆ ಸಿದ್ಧಾಂತಿ ರಮಣಭಟ್ಟರಿಗೆ ಬರೆಯಿಸಿಕೊಟ್ಟ ಭೂದಾನ ಪತ್ರದಲ್ಲಿ ನಾವು ಆಳುವಂತಹ ರಾಜ್ಯ ಹೊಸೂರು ಗ್ರಾಮದಲ್ಲಿ ಬೀಜವರಿ ಗದ್ದೆ ಎರಡು ವಕ್ಕುಳವನ್ನು ಸರ್ವಮಾನ್ಯವಾಗಿ ದಾನ ಧಾರಾಪೂರ್ವಕವಾಗಿ ಕೊಟ್ಟಿದ್ದೇವೆ ಎಂದಿದೆ[೩೨]. ಇವನ ನಿಚ್ಚವ್ವನಹಳ್ಳಿಯ ಶಾಸನ ರಾಜಮಾನ್ಯರಾದ ಸುಬೇದಾರ ರಂಗಪ್ಪನವರು ರಾಜ್ಯಕ್ಕೆ ಆದಾಯ ಬರುವ ಹಾಗೆ ಮಾಡಿ ಉಳಿದ ಅರಸರೊಂದಿಗೆ ಬಾಗಳಿ ಸಂಸ್ಥಾನವು ಉತ್ತಮ ಸಂಬಂಧವುಂಟಾಗುವಂತೆ ಮಾಡಿದ್ದರಿಂದ 'ಗಡಿನಿಚಾಪುರ' ಗ್ರಾಮವನ್ನು ದಾನವಾಗಿ ನೀಡಿದನೆಂಬ ಮಾಹಿತಿ ನೀಡುತ್ತದೆ[೩೩]. ಇದು ೩೮ ಸಾಲಿನ ದೊಡ್ಡ ಶಾಸನವಾಗಿದ್ದು ನಾಣ್ಯ, ತೆರಿಗೆ ಮೊದಲಾದ ವಿವರಗಳನ್ನು ಹೊಂದಿದೆ. ಇದು ಆಂಜನೇಯ ದೇವಾಲಯದ ಹೊರಭಿತ್ತಿಯ ಮೇಲೆ ಇದೆ. ಶ್ರೀ ಮನ್‌ಮಹಾನಾಯಕಾಚಾರ್ಯ ಭಾಷೆಗೆ ತಪ್ಪುವ ನಾಯಕರ ಗಂಡ, ಮೊರೆಹೊಕ್ಕರೆ ಕಾಯ್ವ ಮಾರಾಂತರ ಗೆಲ್ವ ಬಾಗಳಿ ಬಸಪ್ಪನಾಯಕ ಪುರೋಹಿತರಿಗೆ ಕೂಡ್ಲಿಗಿ ತಾಲ್ಲೂಕಿನ ನೀರಕಲ್ಲು ಗ್ರಾಮದ ಕೆರೆ ಹಿಂದೆ ಗದ್ದೆ ಬೀಜವರಿಯ ಒಂದು ವಕ್ಕಳ ಗದ್ದೆಯನ್ನು ದಾನ ನೀಡಿದನೆಂದು ತಿಳಿದು ಬಂದಿದೆ[೩೪]. ಹಾಗೆಯೇ ಹೊಳಲು ಕೋಟೆಯ ಮುತ್ತಿಗೆಯಲ್ಲಿ ಜಯಗಳಿಸಿದಾಗ ನಾರಾಯಣದೇವರಕೆರೆ ಸಿದ್ಧಾಂತಿ ರಮಣಭಟ್ಟರಿಗೆ ಕೊಟ್ಟೂರು ಸೀಮೆಯ ಡಣಾಯಕನ ಕೆರೆ ಪಟ್ಟಡಿ 'ಮಗಿಮಾವಿನಹಳ್ಳಿ' ಕೆರೆ ಗದ್ದೆ ಬೀಜವರಿ ಒಂದು ವಕ್ಕಳ ಗದ್ದೆಯನ್ನು ದಾನ ನೀಡಿ ಶಾಸನ ಹಾಕಿಸಿದ್ದಾನೆ[೩೫]. ಹಾಗೆಯೇ ಜೋಯಿಸ ಸಿಂಹಾದ್ರಿಭಟ್ಟರ ಮಕ್ಕಳಾದ ವೋಬಳಭಟ್ಟರು, ಲಕ್ಷ್ಮಣಭಟ್ಟರು, ಹಿರೇಚಂದ್ರಭಟ್ಟರಿಗೆ ಮಲ್ಲಾಪುರ ಗ್ರಾಮ ಮಾನ್ಯದ ಹೊಲಗಳನ್ನು ವಾಟ ಮಾಡಿಕೊಳ್ಳಲು ನಿರೂಪ ಹಾಕಿಸಿದ್ದಾನೆ[೩೬].

ಸೋಮಶೇಖರನಾಯಕ ಖ್ಯಾಮಣಿ ದೀಕ್ಷಿತರ ಯಲ್ಲಪ್ಪಸೋಮಯಾಜಿ ಎಂಬ ಮಕ್ಕಳಿಗೆ ನಿಲುವಂಜಿ ಗ್ರಾಮವನ್ನು ಮಾನ್ಯ ನೀಡಿದ ಬಗ್ಗೆ ಉಲ್ಲೇಖವಿದೆ[೩೭]. ಅರಮನೆ ವೈದ್ಯ ಕೃಷ್ಣಾಚಾರ್ಯರಿಗೆ ಕಾಯಕದಹಳ್ಳಿಯನ್ನು ದಾನ ನೀಡಿದ್ದಾನೆಂದು ತಿಳಿದು ಬರುತ್ತದೆ. ಹಾಗೆಯೇ ವಿಠಲಯ್ಯನವರಿಗೆ

ಕೋಗಳಿ ವೆಂಟಕೆ ಕೊಟ್ಟೂರು ಸೀಮೆಯ ಮೈದೂರು ಗ್ರಾಮದಲ್ಲಿ ಎರಹೊಲವನ್ನು ದಾನ ನೀಡಿದ್ದಾನೆ. ಬಾಗಳಿ ಬಸಪ್ಪನಾಯಕ ಕೂಡ್ಲಿಗಿ ಮಠದ ನರಸಿಂಹಭಾರತಿಸ್ವಾಮಿಗಳಿಗೆ ಉಂಬಳಿ ಹಾಕಿದ ವಿಷಯವಿದೆ. ರಮಣಭಟ್ಟರಿಗೆ ನಾರಾಯಣದೇವರ ಕೆರೆಯ ಪಟ್ಟಡಿ ಗ್ರಾಮ ಅರಳಹಳ್ಳಿಯ ಮಾಗಣಿ ಭೂಮಿಯನ್ನು ದಾನ ನೀಡಿದ್ದಾನೆ[೩೮]. ಸತ್ಯಪೂರ್ಣಚಾರ್ಯರ ಪುತ್ರ ಕೃಷ್ಣಾಚಾರ್ಯರಿಗೆ ಕೊಟ್ಟೂರು ಸೀಮೆ, ಮಾದಿಹಳ್ಳಿ ಪಟ್ಟಡಿಯ ಬೂದಿಹಾಳ್ ಗ್ರಾಮದಲ್ಲಿ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ[೩೯]. ಹಾಗೆಯೇ ಹಾಲಪಶ್ರೀಗುರುಗಳಿಗೆ ಭೂದಾನ ನೀಡಿದ ಬಗ್ಗೆ ಮಾಹಿತಿ ಇದೆ[೪೦].

ಸದಾಶಿವರಾಯನು ವಿದ್ಯಾನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಹಡಪದ ಕೃಷ್ಣಪ್ಪನಾಯಕರಿಗೆ ನೀಡಿದ ಕೊಟ್ಟೂರು ಸೀಮೆಗೆ ಸೇರಿದ ಬಾಗಳಿಯ ಚಾಮಿನಾಯಕನ ಮಗ ಹಳವಿನಾಯಕನು ಬಾಗಳಿ ಮತ್ತು ಅದರ ಉಪಗ್ರಾಮಗಳ ಕುರುಬರಿಗೆ ಕುರಿ ತೆರಿಗೆಯನ್ನು ಮನ್ನಾ ಮಾಡಿದ ವಿಚಾರವಿದೆ[೪೧]. ದಾದೇನಾಯಕನ ಶಾಸನ ಕೊಟ್ಟೂರು ಸೀಮೆಯ ಕುರುಬರಿಗೆ ಕುರಿ ತೆರಿಗೆಯನ್ನು ರಾಮರಾಜನ ಮಗ ತಿಮ್ಮರಾಜ ಆನೆಗೊಂದಿಯಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ರಾಜನ ಕಾರ್ಯಕರ್ತನಾದ ಬಾಗುಳಿಯ ಶ್ರೀಮಾಚಿದೇವನ ಮಗನಾದ ವಾದಿನಾಯಕನು ಬಿಡುತ್ತಾನೆ. ಈ ತೆರಿಗೆಯನ್ನು ತನ್ನ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ಬಾಗಳಿಯ ಕಲ್ಲಿನಾಥದೇವರ ಸನ್ನಿಧಿಯಲ್ಲಿ ನೀಡುತ್ತಾನೆ. ಅಥವಾ ಮನ್ನಾ ಮಾಡುತ್ತಾನೆ[೪೨]. ಹೀಗೆ ಹರಪನಹಳ್ಳಿ ಪಾಳೆಯಗಾರರು ಅನೇಕ ಕಾರಣಗಳಿಗಾಗಿ ಶಾಸನಗಳನ್ನು ಹಾಕಿಸಿ ತಮ್ಮ ದಾನ, ಧರ್ಮ, ಸಮಾಜಸೇವೆ ಮುಂತಾದ ವಿಷಯಗಳನ್ನು ತಿಳಿಯಲು ಸಹಾಯಕವಾಗುವಂತೆ ಮಾಡಿದ್ದಾರೆ.

### ೪.೩. ಸ್ಮಾರಕ ಶಾಸನಗಳು

ಒಬ್ಬನ ನೆನಪಿಗಾಗಿ ನಡೆಸಿದ ಸ್ಮಾರಕಗಳೇ ಸ್ಮಾರಕ ಶಾಸನಗಳಾಗುತ್ತವೆ. ಇವು ವ್ಯಕ್ತಿ-ವ್ಯಕ್ತಿ, ವ್ಯಕ್ತಿ-ಪ್ರಾಣಿಗಳ ನಡುವಿನ ಪ್ರೀತಿಯನ್ನು ವ್ಯಕ್ತಪಡಿಸುತ್ತವೆ. ಪ್ರಾಚೀನ ಕರ್ನಾಟಕದಲ್ಲಿ ವೀರತ್ವ, ತ್ಯಾಗಗಳು ಬಹುಮುಖ್ಯ ಮೌಲ್ಯಗಳಾಗಿದ್ದವು. ಮಾನರಕ್ಷಣೆಗಾಗಿ ಪ್ರಾಣವನ್ನೇ ಕೊಡುತ್ತಿದ್ದ ಕೊಟ್ಟಿರುವ ಅನೇಕ ಉದಾಹರಣೆಗಳಿವೆ. ಇವೆಲ್ಲ ಸ್ಮಾರಕ ಶಾಸನಗಳ ವ್ಯಾಪ್ತಿಗೆ ಬರುತ್ತವೆ. 'ಸ್ಮಾರಕ' ಎಂಬ ಶಬ್ದವು 'ಸ್ಮೃ' (ಸ್ಮರಿಸು) ಎಂಬ ಧಾತುವಿನ 'ಣಿಜಂತ' ರೂಪವಾಗಿದೆ. ಅಂದರೆ ಯಾವುದು ಸ್ಮರಣೆಗೆ ಬರುವಂತೆ ಮಾಡಲ್ಪಡುತ್ತದೆಯೋ ಅದು ಸ್ಮಾರಕ ಎನ್ನಬಹುದಾಗಿದೆ[೪೩]. ಇಂತಹ ಸ್ಮಾರಕಗಳು ಪುರುಷ ಮತ್ತು ಸ್ತ್ರೀಯರ ಶಿಲ್ಪ ಶಾಸನ ಸ್ಮಾರಕಗಳು ಕರ್ನಾಟಕದಲ್ಲಿ ಸಾಕಷ್ಟು ಕಂಡು ಬಂದಿವೆ. ಇವುಗಳನ್ನು ಮಾಸ್ತಿಕಲ್ಲು ಮತ್ತು ವೀರಗಲ್ಲುಗಳೆಂದು ಕರೆಯಲಾಗಿದೆ.

ವೀರಗಲ್ಲುಗಳನ್ನು ವೀರನೊಬ್ಬ ಯುದ್ಧದಲ್ಲಿ ಶತ್ರುಗಳೊಡನೆ ಧೈರ್ಯದಿಂದ ಹೋರಾಡಿ ವೀರಮರಣವನ್ನಪ್ಪಿದ ನೆನಪಿಗಾಗಿ ಹಾಕಿಸಿರುವ ಶಾಸನ ಸ್ಮಾರಕಗಳಾಗಿವೆ. ಇವುಗಳಲ್ಲಿ ತುರುಗಳ್

ಶಾಸನ, ಪೆಣ್ಬುಯಲ್ ಶಾಸನ, ಊರಳಿವು (ವೀರ) ಶಾಸನ, ಗಡಿಕಾಳಗ ಹೋರಾಟದ ವೀರಗಲ್ಲು ಮತ್ತು ಕಳ್ಳರೊಡನೆ ಹೋರಾಡಿದ ವೀರಗಲ್ಲು ಎಂಬ ಪ್ರಕಾರಗಳು ಪ್ರಮುಖವಾಗಿವೆ.

ಸಾಮಾನ್ಯವಾಗಿ ಮರಣ ಹೊಂದಿದವನ ಸ್ಮರಣೆಗಾಗಿಯೇ ಅಥವಾ ಸಮಾಧಿ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ ಕೆಲವು ಗುರುತುಗಳನ್ನು ಹಾಗೂ ಸಂಕೇತಗಳನ್ನು ಆ ಸ್ಥಳದಲ್ಲಿ ನೆಡುತ್ತಿದ್ದರು. ಈ ಸಂಪ್ರದಾಯ ಆಯಾಯ ದೇಶಗಳ ಧರ್ಮ, ನಂಬಿಕೆ, ಆಚರಣೆ, ಸಾಮಾಜಿಕ, ಪ್ರತಿಷ್ಠೆಗಳಿಗೆ ಅನುಗುಣವಾಗಿ ಬೆಳೆದು ಬಂದಿವೆ. ಅಂದರೆ ಬೃಹದಾಕಾರದ ಪಿರಮಿಡ್ಡುಗಳಿಂದ ಹಿಡಿದು ಸಣ್ಣಮಟ್ಟ ಕಲ್ಲುಗಳವರೆಗೂ ಪ್ರಾಗೈತಿಹಾಸಿಕ ಕಲ್ಲಿನ ಮನೆಗಳಿಂದ ಅಮೃತಶಿಲೆಯ ನಿರ್ಮಿತಿಗಳವರೆಗೂ ಈ ಸಂಪ್ರದಾಯದ ವ್ಯಾಪ್ತಿ ಹಾಗೂ ವೈಭವವನ್ನು ಗುರುತಿಸಬಹುದಾಗಿದೆ[೪೪]. ಹಾಗಾಗಿ ಸ್ಮಾರಕಗಳು ಅಂದಿನ ಮಾನವನ ಜೀವನಶೈಲಿ, ಧೋರಣೆ, ನಾಗರೀಕತೆ ಮತ್ತು ಸಂಸ್ಕೃತಿಯನ್ನು ತಿಳಿಸಿಕೊಡುವ ಆಧಾರಗಳಾಗಿವೆ.

ವೇದಗಳ 'ಪಿತೃಮೇಧ' ಎಂಬ ವಿಧಿಯಲ್ಲಿ ಸತ್ತವನ ಸಂಸ್ಕಾರದ ಸ್ಥಳದಲ್ಲಿ ಸ್ಮಾರಕ ನಿರ್ಮಿಸುವ ಬಗ್ಗೆ ಮಾಹಿತಿ ದೊರೆಯುತ್ತದೆ. ಶತಪಥ ಬ್ರಾಹ್ಮಣದಲ್ಲಿ ಹಾಗೆಯೇ ಕಾಮಿಕ ಕಾರಣ, ಕಿರಣ, ಚಿಂತ್ಯಾ, ದೀಪ್ತ, ಮಕುಟ, ಮಾತುಂಗ-ಪರಮೇಶ್ವರ, ಯೋಗ ಜಗಳೆಂಬ ಆಗಮಗಳಲ್ಲಿ ಸಹ ಸ್ಮಾರಕಗಳ ಬಗ್ಗೆ ಪ್ರಸ್ತಾಪವಿದೆ. ಕೆಲವೆಡೆ ಸ್ಮಾರಕವನ್ನು ಸಮಾಧಿಲಿಂಗ ಸ್ಥಾಪನ ಎಂದು ಕರೆಯಲಾಗಿದೆ[೪೫].

ಸ್ಮಾರಕಕಲ್ಲುಗಳನ್ನು ನೆಡುವಂತಹ ಆಚರಣೆಯನ್ನು ಹೊಂದಿರುವ ಅಂತ್ಯಸಂಸ್ಕಾರದ ವಿಧಿ ಪ್ರಮುಖವಾಗಿ ಮಧ್ಯಭಾರತದ ಮಾರಿಯಾ ಜನಾಂಗದಲ್ಲಿ ಬೆಳೆದು ಬಂದಿರುವುದನ್ನು ಗುರುತಿಸಲಾಗಿದೆ. ಕರ್ತನಾದ ತಾನು ಋಣಮುಕ್ತನಾಗುವುದಲ್ಲದೇ ಸತ್ತವನಿಗೂ ಶಾಂತಿ ಮತ್ತು ರಕ್ಷಣೆಯನ್ನು ಕಲ್ಲು ನೀಡುವುದೆಂಬ ಪ್ರಬಲವಾದ ನಂಬಿಕೆ ಈ ಸ್ಮಾರಕಗಳ ನಿರ್ಮಾಣದ ಮುಖ್ಯ ಉದ್ದೇಶವಾಗಿದೆ. ಅದರಲ್ಲೂ ಬಹುತೇಕ ಸ್ಮಾರಕಗಳು ಕಲ್ಲುಗಳೇ ಆಗಿದ್ದು ಕಲ್ಲುಗಳಲ್ಲಿ ಮೃತನ ಆತ್ಮರಕ್ಷಣೆ ಪಡೆಯುವುದೆಂಬ ನಂಬಿಕೆಯಿತ್ತು. ಈ ರೀತಿ ನೆಟ್ಟ ಕಲ್ಲುಗಳು ಊರಿನ ದನಕರುಗಳನ್ನು ರಕ್ಷಿಸಲು ಹೋಗಿ ಸತ್ತ, ಯುದ್ಧದಲ್ಲಿ ಸತ್ತ, ಆಕಸ್ಮಿಕವಾಗಿ ಸತ್ತ ಹಾಗೂ ಪತಿಯೊಂದಿಗೆ ಸಹಗಮನ ಮಾಡಿದ ಮಹಾಸತಿಯರ ಸ್ಮಾರಕ ಶಿಲೆಗಳಾಗಿರುತ್ತವೆ. ಈ ಕಲ್ಲುಗಳ ಮೇಲೆ ಸತ್ತ ವ್ಯಕ್ತಿಯ ಹೆಸರು ಕಾಲ ಮತ್ತು ಕಾರಣವನ್ನು ಹಾಗೂ ಸತ್ತವರ ಚಿತ್ರವನ್ನು ಬಿಡಿಸಲಾಗಿರುತ್ತದೆ[೪೬]. ಅದರಲ್ಲೂ ಮುಖ್ಯವಾಗಿ ಕುರುಬ ಹಾಗೂ ಬೇಡ/ನಾಯಕ ಜನಾಂಗದವರು ತಮ್ಮ ಪೂರ್ವಜರನ್ನು ಆರಾಧಿಸುವ ಸಂಪ್ರದಾಯವನ್ನು ಇಂದಿಗೂ ರೂಢಿಸಿಕೊಂಡಿದ್ದಾರೆ. ಬೇಡರ ಗುಡಿಗಳಲ್ಲಿ ಸತ್ತ ವ್ಯಕ್ತಿಗಳ ಸಂಕೇತವಾಗಿ ಕಲ್ಲನ್ನು ಇಟ್ಟು ಎಣ್ಣೆಯನ್ನು ಬಳಿದು ಆರಾಧಿಸುತ್ತಾರೆ. ಇವುಗಳನ್ನು ಸಾಮಾನ್ಯವಾಗಿ 'ಪಾಂಡವರಗುಡಿ' ಗಳೆಂದು

ಕರೆಯಲಾಗಿದೆ. ಈ ರೀತಿಯ ಗುಡಿಗಳು ದಕ್ಷಿಣಭಾರತದಲ್ಲಿ ವಿಶೇಷವಾಗಿ ಕುರುಬ ಮತ್ತು ಬೇಡ ಜನಾಂಗದವರು ವಾಸಿಸುತ್ತಿರುವ ಕಡೆ ಹೆಚ್ಚಾಗಿವೆ. ಇವುಗಳನ್ನು ಬಡಗರೂ ನಿರ್ಮಿಸುತ್ತಾರೆಂದು ತಿಳಿದು ಬಂದಿದೆ[೪೭].

ದಕ್ಷಿಣ ಭಾರತದ ಹಲವೆಡೆ ಸಹಗಮನ ಮಾಡಿದ ಸ್ತ್ರೀಯರ ಸ್ಮಾರಕ ಕಲ್ಲು ಹಾಗೂ ವೀರನಿಗೆ ನಿರ್ಮಿಸಿದ ಸಮಾಧಿ ಶಿಲೆಗಳು ದೊರೆತಿವೆ. ಊರಿನ ಹಿತರಕ್ಷಣೆಗಾಗಿ ಕಾದಾಡಿ ಸತ್ತ ವ್ಯಕ್ತಿಗಳ ಸ್ಮಾರಕವಾಗಿದ್ದರೆ ಕಲ್ಲಿನ ಒಂದು ಮುಖದಲ್ಲಿ ವ್ಯಕ್ತಿಯೊಬ್ಬ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ನಿಂತಿರುವ ಚಿತ್ರ, ಕೆಲವೊಮ್ಮೆ ಕುದುರೆಯ ಮೇಲೆ ಕುಳಿತಿರುವ ಚಿತ್ರ, ಒಂದು ಪುರುಷ ಮತ್ತು ಸ್ತ್ರೀ ಅಥವಾ ಹನುಮಂತನ ಚಿತ್ರ, ಸೂರ್ಯ–ಚಂದ್ರರ ಚಿತ್ರಗಳು, ಸಾವಿಗೆ ಕಾರಣ, ದಿನ ಮುಂತಾದವುಗಳ ವಿವರಗಳು ಇರುತ್ತವೆ. ಕೆಲವೊಮ್ಮೆ ಸತ್ತ ವ್ಯಕ್ತಿಯು ಅಧಿಕಾರದ ಶ್ರೀಮಂತಿಕೆಯ ಸಂಕೇತಗಳಾಗಿ ಕುದುರೆ, ಒಂಟೆ, ಆನೆಯ ಮೇಲೆ ಕುಳಿತಿರುವಂತೆ ಸಂತೋಷ ನೀಡಲು ನೃತ್ಯಗಾರ್ತಿಯರನ್ನು ಸುಖ ನೀಡುವ ಲಾಂಡಮಡಕೆಯನ್ನು, ಅವನು ಬಳಸಿದ ಆಯುಧಗಳನ್ನು ರಕ್ಷಿಸಿದ ಬೇಟೆಯಾಡಿದ ಪ್ರಾಣಿಗಳನ್ನು ಬಿಡಿಸಿರುತ್ತಾರೆ[೪೮]. ಈ ಕಲ್ಲುಗಳಿಗೆ ಪೂಜೆ ಮಾಡಿ ಹರಕೆಯನ್ನು ಸಲ್ಲಿಸುತ್ತಾರೆ[೪೯]. ಈ ಶಿಲೆಗಳ ಪ್ರತಿಷ್ಠಾಪನೆ ಸಂಪ್ರದಾಯ ವಿಧಾನಗಳಿಗನುಣವಾಗಿ ಅಂತ್ಯ ಸಂಸ್ಕಾರದ ಆಚರಣೆಯ ವಿಧಿಯಲ್ಲಿಯೇ ನೆಡುತ್ತಾರೆ[೫೦].

ಕೆಲವೆಡೆ ಸತ್ತವರ ಪ್ರತಿಮೆಗಳನ್ನು, ಗೊಂಬೆಗಳನ್ನು ಮಣ್ಣಿನಿಂದ ಅಥವಾ ಮರದಿಂದ ಮಾಡಿ ಗುಡಿಗಳಲ್ಲಿಟ್ಟು ವರ್ಷಕ್ಕೊಮ್ಮೆ ಜಾತ್ರೆ ನಡೆಸಿ ಹಳೆಯ ಬೊಂಬೆಗಳ (ಸಾಮಾನ್ಯವಾಗಿ ಬೊಂಬೆಗಳು ಹುಲಿ, ಮನುಷ್ಯ ನಾಯಿಗಳಾಗಿರುತ್ತವೆ) ನ್ನು ತೆಗೆದು ಹೊಸ ಬೊಂಬೆಗಳನ್ನಿಟ್ಟು ಹರಕೆ ಸಲ್ಲಿಸಿ ಬಲಿಯನ್ನು ನೀಡುತ್ತಾರೆ[೫೧]. ಇನ್ನೂ ಕೆಲವೆಡೆ ಊರ ಗೌಡನು ವೀರರ ಬಂಗಾರದ ವಿಗ್ರಹಗಳನ್ನು ಹರಿಶಿಣ ತುಂಬಿದ ಪೆಟ್ಟಿಗೆಯಲ್ಲಿಟ್ಟು ವರ್ಷಕ್ಕೊಮ್ಮೆ ಸುತ್ತಮುತ್ತಲಿನ ವಂಶಸ್ಥರು ಒಂದೆಡೆ ಸೇರಿ ತಮ್ಮ ವೀರರ ವಿಗ್ರಹಗಳನ್ನು ಸಾಲಾಗಿಟ್ಟು ತುಪ್ಪದ ದೀಪಗಳನ್ನು ಹಚ್ಚಿ ಪೂಜಿಸುತ್ತಾರೆ[೫೨]. ಕೆಲವೆಡೆ ಬೆಳ್ಳಿಯ ವೀರರ ವಿಗ್ರಹಗಳಿದ್ದು ಅವುಗಳನ್ನು ವಿಶೇಷವಾಗಿ ಮದುವೆಯ ಸಂದರ್ಭಗಳಲ್ಲಿ ಪೂಜಿಸುತ್ತಾರೆ[೫೩]. ಕೆಲವಡೆ ವೀರರ ಆಯುಧಗಳನ್ನು ಪೂಜಿಸುತ್ತಾರೆ[೫೪]. ಹಾಗೆಯೇ ಪಾದಗಳ ಗುರುತುಗಳನ್ನು ಪಾದರಕ್ಷೆಗಳನ್ನು ಆರಾಧಿಸುವುದನ್ನು ಗಮನಿಸಬಹುದು[೫೫]. ಇಂತಹ ಸ್ಮಾರಕಗಳನ್ನೆ ವೀರಗಲ್ಲು, ಮಾಸ್ತಿಕಲ್ಲುಗಳೆಂದು ಕರೆಯಲಾಗಿದೆ.

ವೀರ: ಮೂಲತಃ ಸಂಸ್ಕೃತ ಭಾಷೆಯ ಪದ 'ವೀರ' ಎಂಬುದು ಅನೇಕ ಇಂಡೋ–ಆರ್ಯನ್ ಭಾಷೆಗಳಲ್ಲಿ ಬಳಕೆಯಾಗಿರುವುದು ಕಂಡು ಬಂದಿದೆ. ಸಾಮಾನ್ಯವಾಗಿ ಒಬ್ಬ ವ್ಯಕ್ತಿಯ ಶಕ್ತಿ, ಸಾಮರ್ಥ್ಯ, ಪರಾಕ್ರಮಗಳನ್ನು ಸೂಚಿಸುವ ಪದವಾಗಿದ್ದರೂ ಕೆಲವು ಭಾಷೆಗಳಲ್ಲಿ ಮೇಕೆ, ಟಗರು, ಗಂಡು ಒಂಟೆ ಮುಂತಾದ ಅರ್ಥಗಳಲ್ಲಿ ಬಳಸಲಾಗುತ್ತದೆ[೫೬]. ಪ್ರಾರಂಭದಲ್ಲಿ ಕೇವಲ ಪರಾಕ್ರಮವನ್ನು

ಮಾತ್ರ ಸೂಚಿಸಲು 'ವೀರ' ಪದವನ್ನು ಬಳಸುತ್ತಿದ್ದರು. ಆದರೆ ಕ್ರಮೇಣ ವೀರತನವನ್ನು ತಾತ್ವಿಕಮಟ್ಟದಲ್ಲಿ ಮತೀಯ ಪರಿಸರದಲ್ಲಿ ಹಲವಾರು ಹಂತಗಳಲ್ಲಿ ಗುರುತಿಸಿರುವುದನ್ನು ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಮತ್ತು ಭಾರತೀಯರ ನಂಬಿಕೆಗಳಿಂದ ತಿಳಿಯಬಹುದಾಗಿದೆ[೫೭].

ಲಾಕ್ಷಣಿಕರು ದಾನವೀರ, ಯುದ್ಧವೀರ, ಧರ್ಮವೀರ ಹಾಗೂ ದಯಾವೀರ ಎಂಬ ವೀರ ರಸದ ಕೆಲವು ಮುಖಗಳನ್ನು ಗುರುತಿಸಿದ್ದಾರೆ. ನಂತರ ಸತ್ಯವೀರ, ವಿರಹವೀರ, ಕ್ಷಮಾವೀರ, ಸತ್ಯಾಗ್ರಹವೀರ ಎಂಬ ಭೇದಗಳನ್ನು ಕಲ್ಪಿಸಿದ್ದಾರೆ[೫೮]. ಅಚ್ಯುತರಾಯನೆಂಬ ಶಾಸ್ತ್ರಕಾರ ತನ್ನ 'ಸಾಹಿತ್ಯಸಾರ' ಎಂಬ ಗ್ರಂಥದಲ್ಲಿ ವೀರರಸದ ೧೨ ಪ್ರಭೇದಗಳನ್ನು ತಿಳಿಸಿದ್ದಾನೆ. ಸ್ತ್ರೀಯರ ಪಾತಿವ್ರತ್ಯ ಗುಣವನ್ನು ಸೂಚಿಸುವ 'ವೀರಮಾಸ್ತಿ' ಎಂಬ ಪುರುಷನ ಏಕಪತ್ನಿ ವ್ರತವನ್ನು ಹೊಗಳುವಂತಹ ಅನೇಕ ಶಾಸನಗಳಿವೆ. ಹಿಂದೂಧರ್ಮದ ಪ್ರಕಾರ ಕ್ಷತ್ರಿಯರೇ ವೀರರು ಎಂದು ತಿಳಿಸಿದೆ. ಆದರೆ ಇತರೆ ವರ್ಣದವರು ಆ ಪಟ್ಟಕ್ಕೆ ಅರ್ಹರಲ್ಲ ಎಂದಲ್ಲ. ಕ್ಷತ್ರಿಯರಿಗೆ ಸಹಾಯಕರಾಗಿ ನಿಂತು ಹೋರಾಡುತ್ತಿದ್ದವರು ಎಲ್ಲ ವರ್ಣಗಳ –ಜಾತಿಗಳ ಜನರು ಅದರಲ್ಲೂ ಸಾಮಾನ್ಯವಾಗಿ ಶೂದ್ರರೇ ಸೈನಿಕರಾಗಿರುತ್ತಿದ್ದರು ಎಂಬುದನ್ನು ಮರೆಯುವಂತಿಲ್ಲ. ಆದರೆ ಕ್ಷತ್ರಿಯರು ಕೆಳವರ್ಗದ ವೀರರೊಂದಿಗೆ ಹೋರಾಡಲು ಹಿಂಜರಿಯುತ್ತಿದ್ದರು. ಹಾಗೆಯೇ ಬ್ರಾಹ್ಮಣರೂ ಕೂಡ ಕತ್ತಿಗಳನ್ನು ಹಿಡಿಯುತ್ತಿದ್ದರು. ಆದರೆ ಅವರ ವೀರತ್ವ ಹಾಗೂ ಪೌರುಷದ ಬಗ್ಗೆ ಜನತೆಗೆ ತಾತ್ಸಾರ ಇತ್ತು[೫೯]. ಹಾಗಾಗಿ ದಾನಕ್ಕೆ, ಯುದ್ಧಕ್ಕೆ ಕ್ಷತ್ರಿಯರೇ ಸಮರ್ಥರು. 'ಅಬ್ರಹ್ಮಣ್ಯಂ ಬೋಃ' ಎನ್ನಲು 'ಅವಿದಾ' ಎಂದು ಕೂಗಿಕೊಳ್ಳಲು ಮಾತ್ರ ಬ್ರಾಹ್ಮಣರು ಸಮರ್ಥರು ಎಂಬ ರನ್ನನ ದುರ್ಯೋಧನನ ಹೇಳಿಕೆ ಎಲ್ಲಾ ಕಾಲಕ್ಕೂ ಅನ್ವಯಿಸುವುದಿಲ್ಲ[೬೦].

ಇತಿಹಾಸ ಕಾಲದ ವೀರರನ್ನು ಅರಸರನ್ನು ಗಮನಿಸಿದಾಗ 'ವೀರತ್' ಯಾವುದೇ ಒಂದು ಜಾತಿಗೆ ಮಾತ್ರ ಸೀಮಿತವಾಗಿರದೆ ವ್ಯಕ್ತಿಯ ಶೌರ್ಯ, ಪರಾಕ್ರಮ, ಸ್ವಾಭಿಮಾನವನ್ನು ಅವಲಂಬಿಸಿರುತ್ತದೆ. ಹಾಗಾಗಿ ಇಂತಹ ಜಾತಿಯವರೇ ವೀರರೆಂದು ಕರೆಯುವುದಕ್ಕಿಂತ ವೀರರೆಲ್ಲರೂ 'ವೀರಕುಲ'ದವರೇ ಎಂಬ ವಿಚಾರ ಪಂಪನ ಹೇಳಿಕೆಯಿಂದ ತಿಳಿದು ಬರುತ್ತದೆ[೬೧]. ಕೆಳ ಜಾತಿಯವರೆಂದು ಪರಿಗಣಿಸಿದವರೇ ನಾಯಕರು, ಅರಸರು, ಸಾಮಂತರು ಮತ್ತು ಪಾಳೆಯಗಾರರಾಗಿ ಪ್ರಾಬಲ್ಯಕ್ಕೆ ಬಂದರು. ಇವರು ತಮ್ಮ ವೀರತ್ವದ ಜೊತೆಗೆ 'ಜಾತಿಯ' ಪ್ರತಿಷ್ಠೆಯನ್ನು ಸೇರಿಸಿಕೊಳ್ಳುವ ಸಲುವಾಗಿ ತಮ್ಮ ವಂಶಾವಳಿಗಳನ್ನು ಪುರಾಣಕಾಲದ ಸೂರ್ಯ–ಚಂದ್ರರ ವಂಶಕ್ಕೆ ಹೋಲಿಸಿಕೊಳ್ಳುತ್ತಿದ್ದರು. ಸೈನಿಕನಿಗೆ ಹೆಚ್ಚಿನ ಅಧಿಕಾರ ಮತ್ತು ಬುದ್ಧಿಬಲವಿಲ್ಲದಿದ್ದರೂ ಅವನಲ್ಲಿದ್ದ ಶಿಸ್ತು, ಸಂಯಮ ತನ್ನ ಒಡೆಯನಿಗೆ ತೀರಿಸಬೇಕೆನ್ನುವ ಅನ್ನದ ಋಣ ಸ್ವಾಮಿನಿಷ್ಠೆಗಳಿಂದ ಹೋರಾಡಿ ಮಡಿದಿದ್ದ ವ್ಯಕ್ತಿಯನ್ನು ಸಮಾಜ ವೀರರೆಂದು ಪರಿಗಣಿಸಿದೆ. ಆದರೆ ಶಕ್ತಿವಂತ ತನ್ನ ಧೂರ್ತತನದಿಂದ ಮಾಡಿದ ಯಾವುದೇ ಕೃತ್ಯವೂ ಸಹ 'ವೀರತನ'ವೆಂದು ಎಲ್ಲಿಯೂ ಪರಿಗಣಿಸಲ್ಪಟ್ಟಿಲ್ಲ. ಅಸಹಾಯಕರು,

ಅಬಲೆಯರು, ನಿರಾಯುಧರ ಮೇಲೆ ಅಕಾರಣವಾಗಿ ಕೈ ಮಾಡುವುದನ್ನು ವೀರತನವೆಂದು ಕರೆದಿಲ್ಲ. ಅಂದರೆ ಒಬ್ಬ ವ್ಯಕ್ತಿಯ ಸಾವು ಅವನ ಉದ್ದೇಶವನ್ನು ಪರಿಗಣಿಸುತ್ತದೆ.

ಉದಾಹರಣೆ : ರಾವಣ, ಕೀಚಕ, ದುರ್ಯೋಧನರು ವೀರರಾದರೂ ಅವರ ಸಾವಿಗೆ ಕಾರಣ ಬೇರೆ. ಹಾಗಾಗಿ ಕನ್ನಡದ ಶಾಸನಗಳು ಧರ್ಮಯುದ್ಧವನ್ನು ಮೆಚ್ಚಿವೆ[೬೧]. ದನಗಳನ್ನು ಕದಿಯುವುದು, ಸ್ತ್ರೀಯರನ್ನು ಅಪಹರಿಸುವುದು, ಊರುಗಳಿಗೆ ಬೆಂಕಿ ಹತ್ತಿಸಿ ನಾಶ ಮಾಡುವುದು ಮುಂತಾದ ಅಧಾರ್ಮಿಕ ಕೃತ್ಯಗಳು ಆ ಕಾಲಕ್ಕೆ ನಡೆಯುತ್ತಿದ್ದವೆಂದು ಶಾಸನಗಳು ನಿರೂಪಿಸುತ್ತವೆ[೬೨].

ವೀರನಾದವನು ತನ್ನ ಪರಾಕ್ರಮವನ್ನು ಯುದ್ಧದಲ್ಲಿ ಪ್ರದರ್ಶಿಸುವುದರಿಂದ ಅಥವಾ ಸಾಯುವುದರಿಂದ ಮಾತ್ರ 'ವೀರ'ನೆಂಬ ಗೌರವಕ್ಕೆ ಪಾತ್ರನಾಗುತ್ತಿರಲಿಲ್ಲ. ತನ್ನ ಹಾಗೂ ಇತರರ ರಕ್ಷಣೆಗಾಗಿ ಮಾಡುವ ಹೋರಾಟವನ್ನು ವೀರತನವೆಂದು ಪರಿಗಣಿಸಲಾಗಿತ್ತು. ಹಾಗೆ ಹೋರಾಡದೆ ತಟಸ್ಥನಾಗಿರುವವನನ್ನು ಷಂಡನೆಂದು ಕರೆಯಲಾಗುತ್ತಿತ್ತೆಂದು ತಿಳಿಯಲಾಗಿದೆ[೬೩]. ವೃತ್ತಿಯಿಂದ ಸೈನಿಕರಲ್ಲದಿದ್ದರೂ ತಮ್ಮ ಮೇಲೆ ಆಕ್ರಮಣ ಮಾಡಿದ ಕಳ್ಳರಿಂದ ತಮ್ಮ ರಕ್ಷಣೆ ಮಾಡಿಕೊಳ್ಳಲು ಸಮರ್ಥರಾಗಿದ್ದ ವರ್ತಕ ವರ್ಗದವರನ್ನು 'ವೀರಬಣಂಜು'ಗಳೆಂದು ಕನ್ನಡ ಶಾಸನಗಳು ಹೊಗಳಿವೆ. ಇದು ಕೇವಲ ಅವರ ಸ್ವರಕ್ಷಣೆಯೇ ವಿನಃ ಪರಾಕ್ರಮ ಪ್ರದರ್ಶವಲ್ಲ[೬೪]. ಈ ಮೂಲಕ ವೀರತನವನ್ನು ಎತ್ತಿ ಹಿಡಿದ ಸಮಾಜ ವೀರರಲ್ಲದವರನ್ನು ತಿರಸ್ಕಾರದಿಂದ ನೋಡುವುದರ ಮೂಲಕವೂ 'ವೀರತನ'ವನ್ನು ಎತ್ತಿ ಹಿಡಿದಿದ್ದಾರೆ. ಆದರೆ ಸಾವು ಎಂಬುದು ಎಂದಾದರೂ ಬರುವಂಥದ್ದೇ. ಅದಕ್ಕೆ ಹೆದರಿ ಓಡಿ ಹೋಗುವುದರಿಂದ 'ಹೇಡಿ' ಎಂಬ ಅಪಮಾನವನ್ನು ಎದುರಿಸುವ ಜೊತೆಗೆ 'ಬ್ರಹ್ಮಪಾತ ಪಾತಕ' ಎಂಬ ಪಾಪ ಬರುವುದೆಂಬ ನಂಬಿಕೆ ಜನರಲ್ಲಿತ್ತು[೬೫]. ಹಾಗೆಯೇ ಯುದ್ಧದಲ್ಲಿ ಸ್ವಾಮಿಗೆ ತಪ್ಪಿದ ಭೃತ್ಯನು ರೌರವನರಕಕ್ಕೆ ಹೋಗುತ್ತಾನೆಂದು[೬೬] ಯುದ್ಧದಿಂದ ಹಿಂದೆ ಸರಿದರೆ ಸ್ವರ್ಗ ಲಭಿಸುವುದಿಲ್ಲವೆಂದೂ[೬೭] ಕನ್ನಡಕಾವ್ಯಗಳಿಂದ ತಿಳಿದು ಬರುತ್ತದೆ. ಒಟ್ಟಾರೆ ವೀರನ ಬಗ್ಗೆ ಅಂದಿನ ಸಮಾಜದಲ್ಲಿ ಉತ್ತಮ ಗೌರವ ಭಾವನೆಯಿತ್ತು. 'ದ್ವಾವಿಮ್ ಪುರುಷ್‌ಲೋಕೇ ಸೂರ್ಯಮಂಡಲ ಭೇದಿನೌ ಪರಿವ್ರಾಡ್ಯೋಗ ಯುಕ್ತಾಶ್ಚರಣೇ ಜಾಭಿಮುಖೇಹತಃ' ಅದರೆ ಸೈರ್ಯಮಂಡಲವನ್ನು ಇಬ್ಬರು ಮಾತ್ರ ಭೇದಿಸಬಲ್ಲರು. ಒಬ್ಬರು ಯೋಗ ಸಾಧನೆ ಮಾಡಿದ ಪರಿವ್ರಾಜಕ ಮತ್ತೊಬ್ಬ ರಣರಂಗದ ಮೂಲಕ ಸಾಧನೆ ಮಾಡಿದ ಯೋಧ ಎಂದು ಈ ಶ್ಲೋಕ ಅರ್ಥೈಸುತ್ತದೆ. ಈ ಶ್ಲೋಕ ಕರ್ನಾಟಕದ ಅನೇಕ ವೀರಗಲ್ಲುಗಳ ಪಾಠದಲ್ಲಿ ಪದೇಪದೇ ಉದ್ಧೃತವಾಗಿದೆ. ಹಾಗಾಗಿ ಯುದ್ಧದಲ್ಲಿ ಮಡಿಯುವುದು ಪಾರಮಾರ್ಥಿಕ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವಾದುದೆಂದು ಜನ ನಂಬಿದ್ದರು. ಇದರಿಂದಲೇ 'ವೀರಸ್ವರ್ಗ'ದ ಕಲ್ಪನೆ ಹುಟ್ಟಿಕೊಂಡಿದ್ದು. ಇಂತಹ ವೀರ ಮರಣ ವೀರನಿಗೆ ಮಾತ್ರವಲ್ಲ ಆತನ ತಾಯಿಗೂ ಹೆಮ್ಮೆಯ ವಿಷಯವಾಗಿತ್ತು[೬೮]. ಪಾಳೆಯಗಾರರ ಪ್ರದೇಶದಲ್ಲಿ ಶಾಸನಗಳಿಲ್ಲದೆ ಶಿಲ್ಪ ಹೊಂದಿರುವ ಕೆಲ ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳು ತಂಬ್ರಹಳ್ಳಿ ಉಪನಾಯಕನಹಳ್ಳಿ, ಹಿರೇಮ್ಯಾಗಳಗೇರಿ, ಗುಡಿಗುಡಾಳು, ಬಸವಕೋಟೆ ಮುಂತಾದಡೆ ಕಂಡುಬರುತ್ತವೆ.

### ೪.೪ ನಿರೂಪ ಭೂ ಪಟ್ಟೇದಗಳು

ಹರಪನಹಳ್ಳಿ ಪಾಳೆಯಗಾರರ ಶಾಸನಗಳನ್ನು ಪರಿಶೀಲಿಸುವಾಗ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧ (ಬಳ್ಳಾರಿ ಜಿಲ್ಲೆ)ರ ಪುಸ್ತಕದಲ್ಲಿ ಪ್ರಕಟಗೊಂಡಿರುವವುಗಳು ಒಂದೆಡೆಯಾದರೆ, ಚಿಕ್ಕೇರೂರು ಗೋವಿಂದಾಚಾರ್ಯರವರ ಅಪ್ರಕಟಿತ ಹಸ್ತಪ್ರತಿಯಲ್ಲಿರುವ ನಿರೂಪ, ಭೂಪಟ್ಟೇದಗಳು ಇನ್ನೊಂದು ಪ್ರಕಾರದವುಗಳಾಗಿವೆ ಎಂದು ಇಲ್ಲಿ ಪರಿಗಣಿಸಲಾಗಿದೆ. ಕ.ವಿ.ವಿ. ಶಾಸನ ಸಂಪುಟ-೧ರಲ್ಲಿ ಪ್ರಕಟಗೊಂಡಿರುವ ಹರಪನಹಳ್ಳಿ ಪಾಳೆಯಗಾರರ ಶಾಸನಗಳು ಹರಪನಹಳ್ಳಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಹೊಸಪೇಟೆ ತಾಲೂಕಿನ ಗ್ರಾಮಗಳಲ್ಲಿ ಕಂಡುಬರುತ್ತವೆ. ಕ್ರಿ.ಶ. ೧೫೦೦ ರಿಂದ ೧೮೦೦ ಕಾಲಾವಧಿಯ ಶಾಸನಗಳನ್ನು ಪಟ್ಟಿ ಮಾಡಲಾಗಿದೆ. ಇಂತಹ ೪೧ ಶಾಸನಗಳು ದೊರೆತಿವೆ. ನಿರೂಪ, ಭೂಪಟ್ಟೇದಗಳೆಂದು ಕರೆಯಲಾಗಿರುವ ಶಾಸನಗಳು ಕಾಗದದ ಮೇಲೆ ಬರೆಯಲಾಗಿದ್ದು ಮೂಲ ಪ್ರತಿಗಳಿಂದ ನಕಲು ಪಡೆದು ಚಿಕ್ಕೇರೂರು ಗೋವಿಂದಾಚಾರ್ಯರು ತಮ್ಮ ಅಪ್ರಕಟಿತ ಹಸ್ತಪ್ರತಿಯಲ್ಲಿ ದಾಖಲಿಸಿದ್ದಾರೆ. ಇಂತಹ ೨೮ ನಿರೂಪಗಳು ದೊರೆತಿದ್ದು ಇವು ಕ್ರಿ.ಶ. ೧೭೦೧ ರಿಂದ ೧೭೭೨ರ ಕಾಲಾವಧಿಯ ನಡುವೆ ರಚಿಸಲಾದವುಗಳಾಗಿವೆ. ಬಾಗಳಿ ಮುಮ್ಮಡಿ ಬಸಪ್ಪ ನಾಯಕ, ಬಾಗಳಿ ಹರಿಯಮ್ಮಾಜಿ, ಬಾಗಳಿ ಬಸಪ್ಪ ನಾಯಕ, ಬಾಗಳಿ ವೀರಬಸಪ್ಪ ನಾಯಕ, ಬಾಗಳಿ ಬಸಪ್ಪ ನಾಯಕರ ಸೋಮಶೇಖರ ನಾಯಕ ಬಾಗಳಿ ಸೋಮಶೇಖರ ನಾಯಕರ ಬಸಪ್ಪ ನಾಯಕ ಮುಂತಾದವರ ಹೆಸರುಗಳನ್ನು ಉಲ್ಲೇಖಿಸುತ್ತವೆ. ಈ ನಿರೂಪ ಭೂ ಪಟ್ಟೇದಗಳ ವಿವರಣೆಗಳೆಲ್ಲವನ್ನೂ ಶಾಸನಗಳ ಮಾಹಿತಿಯಲ್ಲಿಯೇ ನೀಡಲಾಗಿದೆ. ಒಟ್ಟಾರೆ ಹರಪನಹಳ್ಳಿ ಪಾಳೆಯಗಾರರ ಶಾಸನಗಳು ದೊರೆತಿರುವ ಪಟ್ಟಿಯಲ್ಲಿ ಎಲ್ಲವುಗಳನ್ನು ಸೇರಿಸಿ ಅಧ್ಯಾಯದ ಕೊನೆಯಲ್ಲಿ ನೀಡಲಾಗಿದೆ.

**ಹರಪನಹಳ್ಳಿ ಪಾಳೆಯಗಾರರ ಶಾಸನಗಳು ದೊರೆತಿರುವ ವಿವರ ಪಟ್ಟಿ**

| ಕ್ರ.ಸಂ. | ತಾಲ್ಲೂಕು ಹೆಸರು | ಸಂಖ್ಯೆ | ಸ್ಥಳಗಳು |
|---|---|---|---|
| ೧ | ಹರಪನಹಳ್ಳಿ | ೨೨ | ಕೆರೆಗುಡಿಹಳ್ಳಿ, ಬಾಗುಳಿ, ಮುತ್ತಿಗೆ, ಕೆ.ಕಲ್ಲಹಳ್ಳಿ, ಮೈದೂರು, ಉಚ್ಚಂಗಿದುರ್ಗ, ಕಸವನಹಳ್ಳಿ, ಅರಸೀಕೆರೆ, ಕರಡೀದುರ್ಗ, ಹಿರೇಮ್ಯಾಗಳಗೇರಿ, ವೊಡ್ಡಿನಹಳ್ಳಿ, ನಿಚ್ಚವ್ವನಹಳ್ಳಿ, ಕನ್ನಾಯಕನಕಟ್ಟೆ, ದೇವರ ತಿಮ್ಮಾಲಾಪುರ |
| ೨ | ಹಗರಿಬೊಮ್ಮನಹಳ್ಳಿ | ೦೩ | ತಂಬ್ರಹಳ್ಳಿ, ಬನ್ನಿಹಳ್ಳಿ, ಬನ್ನಿಕಲ್ಲು |
| ೩ | ಹೂವಿನಹಡಗಲಿ | ೦೮ | ಹ್ಯಾರಡ, ಸೋಗಿ, ದೊಡ್ಡಗೋವಿಂದನಹಳ್ಳಿ |
| ೪ | ಹೊಸಪೇಟೆ | ೦೩ | ಹೊಸೂರು, ಮೇಟ್ರಿ |
| ೫ | ಕೂಡ್ಲಿಗಿ | ೦೫ | ರಾಜಬಾವನಹಳ್ಳಿ, ಕೊಟ್ಟೂರು, ಚಿಕ್ಕಕೆರೆಯಾಗಿನಹಳ್ಳಿ, ಉಜ್ಜನಿ, ಹಗರಿಗಜಾಪುರ |
| ೬ | ದಾನಪತ್ರ ಭೂಪಟ್ಟೇದಗಳು | ೨೮ | ಚಿಕ್ಕೇರೂರು ಗೋವಿಂದಾಚಾರ್ಯರು ಸಂಪಾದಿಸಿದ ಹಸ್ತಪ್ರತಿಗಳ ನಕಲು. ಕೃಪೆ: ಹರಪನಹಳ್ಳಿ ಪಾಳೆಯಗಾರರು ಅಪ್ರಕಟಿತ ಹಸ್ತಪ್ರತಿ |

### ೪.೫ ಶಾಸನ ಕವಿಗಳು ಮತ್ತು ಕಂಡರಣೆಕಾರರು

ಭಾರತೀಯ ಶಾಸನಗಳ ಪರಂಪರೆಯನ್ನು ಅವಲೋಕಿಸಿದಾಗ ಶಾಸನಗಳಿಗೆ ತನ್ನದೇ ಆದ ಇತಿಹಾಸವಿದೆ. ರಾಜ ಮಹಾರಾಜರು ಶಾಸನಗಳನ್ನು ಬರೆಸಲು ಕಾರಣಕರ್ತರಾದರೆ, ಶಾಸನಗಳನ್ನು ಸಂಯೋಜಿಸಿ, ಅವುಗಳ ಪಾಠವನ್ನು ತಯಾರಿಸಿಕೊಂಡು ಶಿಲಾಫಲಕ, ಗೋಡೆ, ಲೋಹಫಲಕ ಮುಂತಾದವುಗಳ ಮೇಲೆ ಕೊರೆದು ಬರೆಯುವುದು ಬಹು ಮುಖ್ಯವಾದ ಕೆಲಸವಾಗಿತ್ತು. ಶಾಸನಗಳಲ್ಲಿ ರಾಜನ ಹೆಸರು, ಕಾಲ, ಧರ್ಮ, ಉದ್ದೇಶ, ವಿಷಯ ಮುಂತಾದ ಮಾಹಿತಿಗಳು ಪ್ರಸ್ತಾಪವಾದರೆ ಶಾಸನ ಗದ್ಯ ಅಥವಾ ಪದ್ಯ ಪಾಠವನ್ನು ಸಾಹಿತ್ಯಾತ್ಮಕವಾಗಿ ಶ್ರೀಮಂತ ಭಾಷೆಯನ್ನು ಬಳಸಿ ಸೊಗಸಾಗಿ ಸಂಯೋಜಿಸುವುದು ಬಹುಮುಖ್ಯ ಹಂತವಾಗಿದೆ. ಇಂತಹ ಶಾಸನಪಾಠ ರಚನೆ, ಶಾಸನ ಪಾಠದ ಬರವಣಿಗೆ ಮುಂತಾದ ಕಾರ್ಯ ನಿರತರಾದ ಪಂಡಿತರನ್ನು ಶಾಸನ ಕವಿಗಳು ಮತ್ತು ಕಂಡರಣೆಕಾರರು ಎನ್ನಲಾಗುತ್ತದೆ. ಭಾರತದಲ್ಲಿ ಕಂಡು ಬಂದ ಕೆಲ ಶಾಸನಗಳಲ್ಲಿ ಇಂತಹ ರಚನೆಕಾರರ ಕಂಡರಣೆಕಾರರ ಹೆಸರುಗಳು ಪ್ರಸ್ತಾಪವಾಗುತ್ತವೆ. ಇದುವರೆಗೂ ಭಾರತದಲ್ಲಿ ಅನೇಕ ಭಾಷೆ, ಲಿಪಿಗಳನ್ನು ಒಳಗೊಂಡ ಸಾವಿರಾರು ಶಾಸನಗಳು ದೇಶಾದ್ಯಂತ ಕಂಡುಬಂದಿವೆ, ಕಂಡುಬಂದ ಎಲ್ಲಾ ಶಾಸನಗಳಲ್ಲಿ ಶಾಸನ ಕವಿ ಅಥವಾ ಕಂಡರಣೆಕಾರರ ಹೆಸರುಗಳು ಪ್ರಾಪ್ತವಾಗುವುದಿಲ್ಲ. ಎಲ್ಲೋ ಕೆಲವು ಶಾಸನಗಳಲ್ಲಿ ಕವಿಗಳ ಮತ್ತು ಕಂಡರಣೆಕಾರರ ಹೆಸರುಗಳು ಕಂಡುಬರುತ್ತವೆ.

ಮೌರ್ಯದೊರೆ ಅಶೋಕನ ಶಾಸನದಲ್ಲಿ ಶಾಸನ ಲಿಪಿಕಾರ ಚಪಡನ ಉಲ್ಲೇಖ ಕಂಡು ಬರುತ್ತದೆ. ಸಮುದ್ರ ಗುಪ್ತನ ಅಲಹಾಬಾದ್ ಸ್ತಂಭ ಶಾಸನವನ್ನು ಆತನ ಮಂತ್ರಿ ಸಂಸ್ಕೃತ ವಿದ್ವಾಂಸ ಹರಿಶೇಣ ರಚಿಸಿದನು, ಈತನೇ ಈ ಶಾಸನದ ಕವಿ. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯ ೨ನೇ ಪುಲಿಕೇಶಿಯ ಐಹೊಳೆ ಶಾಸನವನ್ನು ಈತನ ಮಂತ್ರಿ ದಂಡನಾಯಕ ಕವಿ ರವಿಕೀರ್ತಿ ರಚಿಸಿದನು. ಈ ಮೂಲಕ ಶಾಸನ ಕವಿಗಳು ರಾಜರ ಆಸ್ಥಾನದಲ್ಲಿ ವಿಶೇಷ ಸ್ಥಾನಮಾನ, ಹುದ್ದೆ, ಗೌರವ ಮಾರ್ಯದೆಗಳನ್ನು ಹೊಂದಿದ್ದರೆಂಬುದು ಗೊತ್ತಾಗುತ್ತದೆ.

ಇದೇ ಪರಂಪರೆಯಲ್ಲಿ ವಿಜಯನಗರದ ಅರಸರು ನಂತರ ಹರಪನಹಳ್ಳಿ ಪಾಳೆಯಗಾರರ ಕಾಲದ ಶಾಸನ ಕವಿಗಳು ಮತ್ತು ಕಂಡರಣೆಕಾರರು ಸಾಗಿ ಬಂದಿರುವುದನ್ನು ಗುರ್ತಿಸಬಹುದು. ಈ ಪಾಳೆಯಗಾರರ ಕಾಲದಲ್ಲಿ ಶಾಸನಗಳ ಸಂಖ್ಯೆ ಕಡಿಮೆಯಾಗಿದ್ದರೂ ಲಭ್ಯವಾದ ಶಾಸನಗಳಲ್ಲಿಯೇ ಕವಿಗಳ ಮತ್ತು ಕಂಡರಣೆಕಾರರ ಹೆಸರುಗಳು ಈ ಪರಂಪರೆಯನ್ನು ಗುರ್ತಿಸಲು ಸಹಕಾರಿಯಾಗಿವೆ. ಪಟ್ಟಿ ನೀಡಲಾಗಿದೆ.

**ಹರಪನಹಳ್ಳಿ ಪಾಳೆಯಗಾರರ ಕಾಲ ಕ್ರಿ.ಶ. ೧೫೦೦–೧೮೦೦ ಅವಧಿಯ ಶಾಸನ ಕವಿಗಳು ಮತ್ತು ಕಂಡರಣೆಕಾರರು**

೧. ಸೇನ ಬೋವ ಗೊಬಳಿಯ ಬಾವಿಯ ದೇಮರಸನ ಮಗ

೨. ಸಿರಿಯಣ

೩. ಶಿಲ್ಪಿ ಮುತ್ತಿಗೆಯ ಕಾಣಾಚಿಯ ಬಡಗಿ ಪೋಚೋಜನ ಮಗ ದೇವೋಜ

೪. ರಾಚೋಜನ ಸೀಫ್ರ ಲಿಖಿತ

೫. ಅಕ್ಕಸಾಲಿ ಮುದಿಯಪ್ಪನ ಮಗ ಕಲಿಯಪ್ಪ

೬. ಕುರುಡಿಯ ಬಡಗಿ ಮಲ್ಲೋಜ

೭. ಮುತ್ತಿಗೆಯ ಬಡಗಿ ದೇವೋಜ

೮. ಅಕ್ಕಸಾಲಿ ಕರಿಯಪ್ಪ

೯. ಕರಿಯ ತಿಪೋಜಿ

೧೦. ಭಾಗವತ ನಾಗೈಯ

೧೧. ಹಿರಿಯೂರು ಮಾಯಾಚಾರಿ ರುದ್ರಪ್ಪ

## ಅಡಿಟಿಪ್ಪಣಿಗಳು

೧. ಆರ್.ಕೆ. ಪಂಚಮುಖಿ, ಕರ್ನಾಟಕದ ಶಾಸನಗಳು, ಪುಟ ೧೦.

೨. ಅದೇ. ಪುಟ ೧೫.

೩. ತಿಪ್ಪೇರುದ್ರಸ್ವಾಮಿ ಎಚ್, ೨೦೦೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ-೨೩೯.

೪. ಅದೇ ಪುಟ-೨೩೯.

೫. ಅದೇ ಪುಟ-೨೩೭.

೬. (ಹಗರಿಬೊಮ್ಮನಹಳ್ಳಿ ತಾಲ್ಲೂಕು) ತಂಬ್ರಹಳ್ಳಿ, ಸಂ-೩೩, ಪುಟ-೨೯೫.

೭. (ಹೊಸಪೇಟೆ ತಾಲ್ಲೂಕು) ಹೊಸೂರು ಸಂ-೧೮, ಪುಟ-೧೫೨.

೮. ಅದೇ ಮೇಟ್ರಿ, ಸಂ-೪೯, ಪುಟ-೧೮೨.

೯. (ಹರಪನಹಳ್ಳಿ ತಾಲ್ಲೂಕು) ಬಾಗುಳಿ, ಸಂ-೧೨೦, ಕ್ರಿ.ಶ.೧೫೫೦, ಪುಟ-೫೮೪, (೨೪ ಸಾಲಿನ ಶಾಸನ)

೧೦. (ಹರಪನಹಳ್ಳಿ ತಾಲ್ಲೂಕು) ಉಚ್ಚಂಗಿದುರ್ಗ, ಸಂ-೨೧, ೧೭ನೇಯ ಶತಮಾನ, ಪುಟ-೪೭೫.

೧೧. ಉಚ್ಚಂಗಿದುರ್ಗ (ಹರಪನಹಳ್ಳಿ ತಾಲ್ಲೂಕು) ಶಾ.ಸಂ-೧೮, ಪುಟ-೪೭೪, ಕ್ರಿ.ಶ. ೨೪.೧೦.೧೬೫೩.

೧೨. ದೇವರಕೊಂಡಾರೆಡ್ಡಿ (ಸಂ), ಇತರರು, ಕ.ವಿ.ಶಾಸನ ಸಂ-೧, ಬಳ್ಳಾರಿ ಜಿಲ್ಲೆ, ೧೯೯೮, ಪ್ರಸಾರಾಂಗ ಕ.ವಿ.ವಿ. ಹಂಪಿ, ಅದೇ (ಹರಪನಹಳ್ಳಿ ತಾಲ್ಲೂಕು) ಶಾಸನಸಂಖ್ಯೆ-೧೯, ಪುಟ-೪೭೪, ಕ್ರಿ.ಶ.೧೭೦೮/೯.

೧೩. ಈ ಶಾಸನ ಸಂಪುಟದಲ್ಲಿ ಪ್ರಕಟವಾಗಿಲ್ಲ. ಕ್ರಿ.ಶ.೧೭೬೧, ಕುಂ.ಬಾ.ಸ. ಹರಪನಹಳ್ಳಿ ಪಾಳೆಯಗಾರರು, ಪುಟ-೯೨.

೧೪. ಕೊಟ್ರೇಶ್ ಎಂ., ೨೦೧೦, ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ, ಪುಟ-೨೧.

೧೫. ದೇವರಕೊಂಡಾರೆಡ್ಡಿ (ಸಂ), ಇತರರು, ಪೂರ್ವೋಕ್ತ, ಪುಟ-೪೭೩, ಶಾ.ಸಂ-೧೮, ಕ್ರಿ.ಶ.೧೪.೦೧.೧೭೨೯

೧೬. ಅದೇ ಪುಟ-೨೨೯, ಶಾ.ಸಂ-೪, ಕೂಡ್ಲಿಗಿ (ತಾ), ಕ್ರಿ.ಶ.೨೭.೦೭.೧೭೧೨.

೧೭. ಕ್ರಿ.ಶ.೧೭೧೮, ಹರಪನಹಳ್ಳಿ ತಾಲ್ಲೂಕು ಕುಂಬಾ.ಸದಾಶಿವಪ್ಪ, ಹರಪನಹಳ್ಳಿ ಪಾಳೆಯಗಾರರು, ಪುಟ-೧೦೮.

೧೮. ಸದಾಶಿವಪ್ಪ ಕುಂ.ಬಾ., ೧೯೯೬, ಪೂರ್ವೋಕ್ತ, ಪುಟ-೧೦೬, ೧೦೭.

೧೯. ಅದೇ ಪುಟ-೧೦೭/೦೮.

೨೦. ತಿಪ್ಪೇಸ್ವಾಮಿ ಡಿ, ೨೦೧೨, ಕೋಗಳಿನಾಡಿನ ಶಾಸನಗಳ ಅಧ್ಯಯನ, ಕ.ವಿ.ವಿ. ಹಂಪಿ, (ಅಪ್ರಕಟಿತ ಸಂಶೋಧನಾ ಪ್ರಬಂಧ).

೨೧. ಕ.ವಿ.ವಿ. ಸಂ-೧, ಸಂ-೨೧೨, ಪುಟ-೬೬೩, ಕ್ರಿ.ಶ.೦೩.೦೨.೧೬೬೦.

೨೨. ಅದೇ ಅರಸೀಕೆರೆ-ಸಂಖ್ಯೆ-೨೧೫, ಪುಟ-೬೬೬, ಕ್ರಿ.ಶ.೧೬.೧೧.೧೬೬೧.

೨೩. ಸದಾಶಿವಪ್ಪ ಕುಂ.ಬಾ, ೧೯೯೬ , ಪುಟ-೯೪.

೨೪. ಚಿಕ್ಕೇರೂರು ಗೋವಿಂದಚಾರ್ಯ ಜಿ, ಪುಟ-೧೧೩, ಮತ್ತು ಶೃಂಗೇರಿ ಮಠದೊಂದಿಗೆ ಹರಪನಹಳ್ಳಿ ಅರಸರುಗಳ ಸಂಬಂಧ, ಇತಿಹಾಸದರ್ಶನ, ಸಂಚಿಕೆ-೧೫, ಪುಟ-೧೭೪.

೨೫. ಸದಾಶಿವಪ್ಪ ಕುಂ.ಬಾ, ಹರಪನಹಳ್ಳಿ ಪಾಳೆಯಗಾರರು, ಪುಟ-೧೦೫, ಮತ್ತು ಗೋವಿಂದಚಾರ್ಯ ಜಿ, ಪುಟ-೧೨೩, ಕ್ರಿ.ಶ.೧೭೦೨ರ ದಾನಶಾಸನ.

೨೬. ಶಾಸನ ಸಂ-೧, ಶಾಸಂ-೨೩, ಹರಗರಿಬೊಮ್ಮನಹಳ್ಳಿ (ತಾ) ಬನ್ನಿಕಲ್ಲು.

೨೭. ಸದಾಶಿವಪ್ಪ ಕುಂ.ಬಾ, ಪೂರ್ವೋಕ್ತ, ಪುಟ-೯೩, ಗೋವಿಂದಚಾರ್ಯ ಜಿ, ಪುಟ-೧೨೩.

೨೮. ಗೋವಿಂದಚಾರ್ಯ ಜಿ, ಪುಟ-೧೦೯, ಕ್ರಿ.ಶ.೧೭೧೦.

೨೯. ಅದೇ ಪುಟ-೧೦೪ , ಕ್ರಿ.ಶ.೧೭೧೧.

೩೦. ಹ್ಯಾರಡ, ಶಾ.ಸಂ-೪೩, ಪುಟ-೩೫೧, ಈ ಶಾಸನ ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದಲ್ಲಿದೆ. (ನನ್ನ ಶೋಧಿತ ಹಳ್ಳಿಕೇರಿ ಶಾಸನದಲ್ಲಿ 'ಸೋಗೆ'ಯ ಉಲ್ಲೇಖವಿದೆ.

೩೧. ಸದಾಶಿವಪ್ಪ ಕುಂ.ಬಾ, ಪೂರ್ವೋಕ್ತ, ಪುಟ-೧೦೯, ಹಗರಿಗಜಾಪುರ ಶಾಸನ, ಕೂಡ್ಲಿಗಿ (ತಾ).

೩೨. ಅದೇ ಪುಟ-೧೦೪ , ಕ್ರಿ.ಶ.೧೭೨೧, ಮತ್ತು ಗೋವಿಂದಚಾರ್ಯ ಜಿ, ಪುಟ-೧೧೭.

೩೩. ಶಾಸನ ಸಂ-೧೨೦, ಕ್ರಿ.ಶ.೬೬೪.

೩೪. ಚಿಕ್ಕೇರೂರು ಗೋವಿಂದಚಾರ್ಯ ಜಿ, ಪುಟ-೧೧೮, ಕ್ರಿ.ಶ.೧೭೩೪.

೩೫. ಅದೇ ಪುಟ-೧೨೦ , ಕ್ರಿ.ಶ.೧೭೩೯.

೩೬. ಚಿಕ್ಕೇರೂರು ಗೋವಿಂದಚಾರ್ಯ ಜಿ, ಪುಟ-೧೧೨.

೩೭. ಸದಾಶಿವಪ್ಪ ಕುಂ.ಬಾ, ಪೂರ್ವೋಕ್ತ, ಪುಟ-೧೦೦/೧೦೧.

೩೮. ಚಿಕ್ಕೇರೂರು ಗೋವಿಂದಚಾರ್ಯ ಜಿ, ಪುಟ-೧೩೯.

೩೯. ಅದೇ ಪುಟ-೧೩೩ , ಸದಾಶಿವಪ್ಪ ಕುಂ.ಬಾ, ಪುಟ-೯೭

೪೦. ಹೂವಿನಹಡಗಲಿ, ಹ್ಯಾರಡ-ಸಂ-೪೪.

೪೧. ದೇವರಕೊಂಡಾರೆಡ್ಡಿ (ಸಂ), ಇತರರು, ಪೂರ್ವೋಕ್ತ, ಪುಟ-೫೮೫, ಶಾ.ಸಂ-೧೨೧.

೪೨. ಅದೇ ಪುಟ-೨೩೦, ಕೊಟ್ಟೂರು ಶಾಸನ, ಸೋ-೧೦ . S.I.I.IX. ೬೮೫.

೪೩. ಶೇಠೆ ಬಿ.ಎಸ್., ೧೯೯೧, ಕರ್ನಾಟಕದಲ್ಲಿ ಸತಿಪದ್ಧತಿ, (ಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ) ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ಪುಟ-೬೫.

೪೪. ಪಂಚಮುಖಿ ಆರ್.ಎಸ್., ಆರ್ಕಿಯಾಲಾಜಿ ಆಫ್ ಕರ್ನಾಟಕ, ಪುಟ-೭೦-೭೧.

45. ನಾರಾಯಣಬಾಬು ಪಿ., A rare passage grave in north Karnataka, S.I.H.C. Ed srinivasa ritti & B.R.Gopal.

೪೬. Willium Croove & Enthoven, Religion and Falklore of northern India p.p.೩೨೦

೪೭. Edgar thurton, Carter and triber of south India, Vol-೧, page-೩೦೮-೯

೪೮. Willium Croove & Enthoven, Religion and folklore pf northern India P.P. ೩೨೦.

೪೯. Verier Elwini, The maria murder and suicide, page-೩೨-೩೩.

೫೦. ಅದೇ ಪುಟ-೩೨.

೫೧. Panchamukhi R.S., Archacalogical Report on kannada research in Bombay proince for the year ೧೯೩೯-೪೦, P.P. ೨೪.

೫೨. Edgar Thurston, ಪೂರ್ವೋಕ್ತ, ಪುಟ-೧೫೨-೫೩.

೫೩. ಶೇಷಶಾಸ್ತ್ರಿ ಆರ್., ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಪುಟ-೨೧.

೫೪. White Head H., The villager Gods of south India page-೨೬.

೫೫. Indian Antiquary Vol-XV (೧೮೮೬) page-೧೧೭.

೫೬. Turner R.L., (Ed), A Comparative Dictionary of Indo-Argan Languagr.

೫೭. ಶೇಷಶಾಸ್ತ್ರಿ ಆರ್. ಪೂರ್ವೋಕ್ತ, ಪುಟ-೨೬.

೫೮. ಕೃಷ್ಣಮೂರ್ತಿ ಎಂ.ಎಸ್., ವಚನ ಸಾಹಿತ್ಯದಲ್ಲಿ ವೀರರಸ, ಪ್ರಬುದ್ಧ ಕರ್ನಾಟಕ ಸಂ-೩, ಪುಟ-೧೩-೧೪.

೫೯. ಪಂಪನ ವಿಕ್ರಮಾರ್ಜುನ ವಿಜಯಂ, ಪುಟ-೧೨-೪೧

೬೦. ಚಿದಾನಂದಮೂರ್ತಿ ಎಂ., ಸಂಶೋಧನಾ ತರಂಗ, ಪುಟ-೧-೪.

೬೧. ಪಂಪನ ವಿಕ್ರಮಾರ್ಜುನ ವಿಜಯಂ, ಪುಟ-೨-೮೩.

೬೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೭೦.

೬೩. ಅದೇ ಪುಟ-೨೭೦.

೬೪. ರನ್ನನ ಸಾಹಸಭೀಮ ವಿಜಯಂ, ಪುಟ-೨-೨೪.

೬೫. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೫೫, ೨೬೭. ೬೮.

೬೬. EC.VII SK ೨೪೮ ಸು ೧೧೨೪.

೬೭. ಮಲ್ಲಿಕಾರ್ಜುನ, ಸೂಕ್ತಿ ಸುಧಾರ್ಣವಂ, ೬೮.

೬೮. ಗೋವಿಂದವೈದ್ಯ, ಕಂಠೀರವ ನರಸರಾಜ ವಿಜಯಂ, ೧೭-೩೧.

೬೯. ರನ್ನನ ಸಾಹಸಭೀಮ ವಿಜಯಂ, ಪುಟ-೪-೫೬.

# ಅಧ್ಯಾಯ – ೫

# ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪ

೫.೧ ದೇವಾಲಯಗಳು ಮತ್ತು ಮಠಗಳು

೫.೨ ಮೂರ್ತಿಶಿಲ್ಪ

೫.೩ ವೀರಗಲ್ಲುಗಳು

೫.೪ ಬಾವಿ, ಹೊಂಡ, ಪುಷ್ಕರಣಿಗಳು

## ಅಧ್ಯಾಯ – ೫

# ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪ

### ೫.೧ ದೇವಾಲಯಗಳು ಮತ್ತು ಮಠಗಳು

ಅಲೆಮಾರಿ ಜೀವನ ನಡೆಸುತ್ತಿದ್ದ ಮಾನವ ಒಂದೆಡೆ ನೆಲೆ ನಿಂತು ಜೀವಿಸಲು ಎಂದು ಪ್ರಾರಂಭಿಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದನು. ಈ ಹಂತವು ವಾಸ್ತುಶಿಲ್ಪದ ಪ್ರಥಮ ಹೆಜ್ಜೆಯಾಯಿತು. ಹಾಗೆಯೇ ಪ್ರಾಚೀನ ಕಾಲದ ಮಾನವ ಪ್ರಕೃತಿಯ ಆರಾಧಕನಾಗಿದ್ದು ಈ ಎಲ್ಲಾ ಸೃಷ್ಟಿಯ ಹಿನ್ನೆಲೆಯಾಗಿ ಯಾವುದೋ ಒಂದು ಅನಂತ ಅಥವಾ ಅಗೋಚರ ಶಕ್ತಿ ಇದೆ ಎಂಬ ಅರಿವುಂಟಾಗಿ ಆ ಶಕ್ತಿಗೆ ಒಂದು ರೂಪ ಕೊಡುವ ಸಲುವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲಾರಂಭಿಸಿದ್ದು ದೇವಾಲಯದ ರಚನೆಗೆ ನಾಂದಿಯಾಯಿತು. ಧಾರ್ಮಿಕ ಭಾವನೆ ಹಾಗೂ ಶ್ರದ್ಧೆ ಮಾನವನ ಜೀವನದ ಅವಿಭಾಜ್ಯ ಅಂಶವಾಗಿದ್ದು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳು ನಿರ್ಮಾಣವಾಗಿರುವುದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ಮೌರ್ಯರ ಕಾಲದಿಂದಲೇ ವಾಸ್ತು ಚಟುವಟಿಕೆಗಳು ನಡೆದರೂ ಆ ಕಾಲದ ಅವಶೇಷಗಳು ಇಂದು ಉಳಿದುಕೊಂಡು ಬಂದಿಲ್ಲ. ಹಾಗಾಗಿ ಕರ್ನಾಟಕದಲ್ಲಿ ದೇವಾಲಯಗಳ ವಾಸ್ತುಕಲೆಯ ಬೆಳವಣಿಗೆಯನ್ನು ಶಾತವಾಹನರ ಕಾಲದ ಬೌದ್ಧ ಸ್ತೂಪ ಚೈತ್ಯ ಹಾಗೂ ವಿಹಾರಗಳ ರಚನೆಯಿಂದ ಗುರುತಿಸಲಾಗಿದೆ.

ದೇವಾಲಯಗಳ ನಿರ್ಮಾಣ ಕಾರ್ಯ ಅತ್ಯಂತ ಹೆಚ್ಚು ಭರದಿಂದ ಸಾಗಿದ್ದು ಬಾದಾಮಿ ಚಾಲುಕ್ಯರ ಕಾಲದಿಂದ ಎನ್ನಬಹುದು. ಬಾದಾಮಿ, ಐಹೊಳೆ, ಪಟ್ಟದಕಲ್ಲು, ಮಹಾಕೂಟ ಇವರ ಪ್ರಧಾನ ವಾಸ್ತುಶಿಲ್ಪ ಕೇಂದ್ರಗಳು. ದೇವಾಲಯಗಳ ನಿರ್ಮಾಣದಲ್ಲಿ ಒಂದು ಪ್ರಯೋಗವೇ ನಡೆದು ಐಹೊಳೆಯು ದೇವಾಲಯಗಳ ತೊಟ್ಟಿಲು ಅಥವಾ ಪ್ರಯೋಗ ಶಾಲೆ ಎಂದು ಹೆಸರಾಗಿದೆ. ಬಾದಾಮಿ ಚಾಲುಕ್ಯರ ಶೈಲಿಯನ್ನು ರಾಷ್ಟ್ರಕೂಟ, ಹೊಯ್ಸಳ, ಗಂಗ, ನೊಳಂಬ, ವಿಜಯನಗರದ ಅರಸರ ಕಾಲದ ದೇವಾಲಯಗಳಲ್ಲೂ ಕಾಣಬಹುದಾಗಿದೆ. ಆದರೆ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ಕೆಲವು ವೈವಿಧ್ಯತೆಗಳಿವೆ.

ಬಾದಾಮಿ ಚಾಲುಕ್ಯರ ದೇವಾಲಯಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿ ಕೇಂದ್ರಿಕೃತಗೊಂಡರೆ ಎಲ್ಲೋರ, ಕುಕನೂರು, ರೋಣ ಮುಂತಾದೆಡೆಗಳಲ್ಲಿ ರಾಷ್ಟ್ರಕೂಟರ ದೇವಾಲಯಗಳ ಕುರುವತ್ತಿ, ಗದಗ, ಲಕ್ಕುಂಡಿಗಳಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳ, ಬೇಲೂರು, ಹಳೇಬೀಡು, ಸೋಮನಾಥಪುರ ಮುಂತಾದ ಪ್ರದೇಶಗಳಲ್ಲಿ ಹೊಯ್ಸಳರ ದೇವಾಲಯಗಳ

ಹಂಪೆಯಲ್ಲಿ ವಿಜಯನಗರ ಕಾಲದ ದೇವಾಲಯಗಳ ವಾಸ್ತುಶೈಲಿಯನ್ನು ಸ್ಪಷ್ಟವಾಗಿ ನಿಖರವಾಗಿ ಮತ್ತು ಪೂರ್ಣವಾಗಿ ಅರಿಯುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಮಧ್ಯಕಾಲೀನ ದಕ್ಷಿಣ ಭಾರತದಲ್ಲಿ ಅತ್ಯಂತ ವೈಭವೋಪೇತವಾಗಿ ಆಳ್ವಿಕೆ ಮಾಡಿದ ವಿಜಯನಗರ ಸಾಮ್ರಾಜ್ಯ ತನ್ನ ಕಲೆ ಮತ್ತು ವಾಸ್ತುಶಿಲ್ಪದ ವೈಶಿಷ್ಟ್ಯತೆಯಿಂದ ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಇವರು ದೇವಾಲಯಗಳ ನಿರ್ಮಾಣಕ್ಕೆ ಹೆಚ್ಚು ಆದ್ಯತೆ ಹಾಗೂ ಪ್ರೋತ್ಸಾಹ ನೀಡಿದ್ದು ಬೃಹತ್ ದೇವಾಲಯಗಳ ನಿರ್ಮಾಣಕ್ಕೆ ಕಾರಣೀಭೂತರಾಗಿದ್ದಾರೆ. ವಿಸ್ತಾರವಾದ ತಲವಿನ್ಯಾಸ, ಗರ್ಭಗೃಹ, ಪ್ರದಕ್ಷಿಣಾಪಥ, ಅರ್ಧ ಮಂಟಪ, ನವರಂಗ, ಮುಖಮಂಟಪ, ಪರಿವಾರ ದೇವತೆಗಳ ಮಂಟಪಗಳು ವಿಶಾಲವಾದ ಹಾಗೂ ಒಂದಕ್ಕಿಂತ ಹೆಚ್ಚು ಪ್ರಾಕಾರಗಳು, ಎತ್ತರವಾದ ಪ್ರಾಕಾರಗೋಡೆ, ಪ್ರವೇಶ, ಮಹಾದ್ವಾರ, ಗೋಪುರ, ಕಲ್ಯಾಣಮಂಟಪ, ಉತ್ಸವಮಂಟಪ, ರಂಗಮಂಟಪ, ನೃತ್ಯಮಂಟಪ, ವಸಂತಮಂಟಪ, ವಾಹನಮಂಟಪ, ಕನ್ನಡಿಮಂಟಪ, ಉಯ್ಯಾಲೆ ಮಂಟಪ ಮುಂತಾದವು ಇವರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳಾಗಿವೆ.

ಹೀಗೆ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೇ ದೇವಾಲಯಗಳ ರಚನಾಕಾರ್ಯ ಆರಂಭವಾಗಿದ್ದು ಕಾಲದಿಂದ ಕಾಲಕ್ಕೆ ರಚನಾತ್ಮಕವಾಗಿ ನಿರ್ದಿಷ್ಟಗೊಳ್ಳುತ್ತ ತನ್ನದೇ ಆದ ಶೈಲಿ, ಪ್ರಭೇದಗಳನ್ನು ಬಿಂಬಿಸುತ್ತ ಪ್ರತಿಯೊಂದು ಪ್ರದೇಶದ ದೇವಾಲಯಗಳು ಕರ್ನಾಟಕ ವಾಸ್ತುಶಿಲ್ಪಕ್ಕೆ ವೈಶಿಷ್ಟ್ಯಪೂರ್ಣ ಕೊಡುಗೆ ನೀಡಿವೆ. ಕಾಲಕಾಲಕ್ಕೆ ಈ ವೈಶಿಷ್ಟ್ಯತೆಯಲ್ಲಾದ ಮಾರ್ಪಾಡನ್ನರಿಯುವಲ್ಲಿ ದೇವಾಲಯದ ರೂಪುರೇಷೆ, ರಚನಾಕ್ರಮ, ಸಾಮಗ್ರಿಗಳು, ವಿವಿಧ ಅಂಗಗಳು, ಅವುಗಳ ಅಲಂಕಾರ, ಪ್ರಕಾರ ಮುಂತಾದವುಗಳನ್ನು ಗಮನಿಸಬೇಕಾಗುತ್ತದೆ. ಇವು ದೇವಾಲಯದ ಶೈಲಿಯನ್ನು ನಿರ್ಧರಿಸಲು ಸಹಾಯಕವಾಗುವುದರೊಂದಿಗೆ ಅಂಗಭಾಗಗಳು ಬೆಳೆದು ಬಂದ ರೀತಿಯನ್ನು ತಿಳಿಸುತ್ತವೆ. ಹಾಗೆಯೇ ಆಯಾ ರಾಜಮನೆತನಗಳ ಏಳು–ಬೀಳುಗಳ ಪ್ರಭಾವವು ಕಲಾಪ್ರಕಾರಗಳ ಮೇಲಾಗಿರುವುದನ್ನು ಗುರುತಿಸಲಾಗಿದೆ. ಕೆಲವರು ಖಾಸಗಿಯಾಗಿ ಕಲಾಪ್ರಕಾರಗಳಿಗೆ ಸಾಂಸ್ಕೃತಿಕ ಅಂಶಗಳಿಗೆ ನೆರವು ನೀಡಿದರೂ ಈ ಎಲ್ಲಾ ನೆರವು ಕಲಾವಿದರ ಕಲಾಕೃತಿಗಳ ಸಾಂಸ್ಕೃತಿಕ ಅಂಶಗಳ ಸಂಖ್ಯೆಯನ್ನು ಹೆಚ್ಚಿಸಿದೆಯೇ ಹೊರತು ಕಲಾ ಪ್ರಕಾರಗಳ ಒಲವುಗಳನ್ನು ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಈ ಒಂದು ದೃಷ್ಟಿಯಿಂದಲೇ ಭಾರತೀಯ ಅಥವಾ ಕರ್ನಾಟಕದ ವಾಸ್ತುಶಿಲ್ಪವನ್ನು ವಿಂಗಡಿಸುವಾಗ ರಾಜಮನೆತನಗಳನ್ನು ಗಮನದಲ್ಲಿಟ್ಟುಕೊಂಡು ನಂತರ ಅವುಗಳನ್ನು ಧರ್ಮದ ದೃಷ್ಟಿಯಿಂದ ವಿಂಗಡಿಸಲಾಗುತ್ತದೆ.

ಸಾಮಾನ್ಯವಾಗಿ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕುರಿತಂತೆ ವಿಜಯನಗರ ಕಾಲದವರೆಗೆ ಮಾತ್ರ ಹೆಚ್ಚು ಅಧ್ಯಯನಗಳು ನಡೆದು ಇಲ್ಲಿಂದ ಮುಂದೆ ಇದರ ಬೆಳವಣಿಗೆ ಆಗಿಲ್ಲವೆಂಬುದನ್ನು

ಹಿಂದಿನ ವರ್ಷಗಳಲ್ಲಿ ಕೆಲವು ತಿಳಿಯಲಾಗಿತ್ತು. ಆದರೆ ವಿಜಯನಗರೋತ್ತರ ಕಾಲದ ಪಾಳೆಯಗಾರರ ಕಾಲಾವಧಿಯಲ್ಲೂ ಇಂತಹ ವಾಸ್ತು ಚಟುವಟಿಕೆಗಳು ನಡೆದಿವೆ ಎಂಬುದು ಇತ್ತೀಚಿನ ದಿನಗಳಲ್ಲಿ ನಡೆದ ಕೆಲವು ಅಧ್ಯಯನಗಳಿಂದ ತಿಳಿದು ಬರುತ್ತದೆ. ವಿಜಯನಗರದ ಪತನಾ ನಂತರ ಅಧಿಕಾರಕ್ಕೆ ಬಂದ ಆಯಾಯ ಪ್ರಾಂತೀಯ ಪಾಳೆಯಗಾರರು ತಮಗೆ ದೊರೆತ ವಾಸ್ತು ಪರಂಪರೆಯನ್ನು ಮುಂದುವರೆಸಿ ಸಾಧಾರಣಮಟ್ಟದ ಕೆಲವು ದೇವಾಲಯಗಳನ್ನು ನಿರ್ಮಿಸಿರುವುದನ್ನು ಕೆಲವು ಅಧ್ಯಯನಗಳಿಂದ ಗುರುತಿಸಲಾಗಿದೆ. ಹರಪನಹಳ್ಳಿ ಪಾಳೆಯಗಾರರೂ ಸಹ ಇದಕ್ಕೆ ಹೊರತಾಗಿರಲಿಲ್ಲ. ಹೆಚ್ಚಿನ ಕಲಾತ್ಮಕ ದೇವಾಲಯಗಳೇನೂ ಇವರ ಕಾಲದಲ್ಲಿ ನಿರ್ಮಾಣವಾಗಿರುವುದು ಕಂಡು ಬರುವುದಿಲ್ಲ. ಇಲ್ಲಿ ಗಮನಿಸಬೇಕಾದ ಒಂದು ಪ್ರಮುಖ ಅಂಶವೆಂದರೆ ಇದು ನನ್ನ ಅಧ್ಯಯನದ ಒಂದು ಭಾಗವಾಗಿದೆಯೇ ವಿನಃ ಪ್ರಧಾನವಾದ ವಿಷಯವಾಗಿಲ್ಲದಿದ್ದರೂ ಸಹ ಈ ಕೆಳಗಿನಂತೆ ಕೆಲವೊಂದು ದೇವಾಲಯಗಳನ್ನು ವಿವರಿಸಲು ಇಷ್ಟಪಡುತ್ತೇನೆ.

ಹರಪನಹಳ್ಳಿ ಪಾಳೆಯಗಾರರು ವಿಜಯನಗರೋತ್ತರ ಕಾಲದ ವಾಸ್ತುಶಿಲ್ಪ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಪ್ರಧಾನವಾಗಿ ಕ್ಷೇತ್ರಕಾರ್ಯ ಕೈಗೊಂಡು ಕಂಡುಬರುವ ದೇವಾಲಯಗಳನ್ನು ಪರಿಶೀಲಿಸಿದಾಗ ಈ ಕಾಲದ ನಿರ್ಮಾಣಗಳು ಹರಪನಹಳ್ಳಿ, ಉಚ್ಚಂಗಿದುರ್ಗ, ಕೂಲಹಳ್ಳಿ, ಹಿರೇಮ್ಯಾಗಳಗೇರಿ, ಅರಸೀಕೆರೆ, ಕುಂಚೂರು, ದೇವರತಿಮ್ಮಲಾಪುರ, ಮೈದೂರು, ಕೊಟ್ಟೂರು, ನಿಚ್ಚವ್ವನಹಳ್ಳಿ, ಹಂಪಾಪಟ್ಟಣ, ನಾರಾಯಣ ದೇವರಕೆರೆ ಮುಂತಾದಡೆ ಕಂಡು ಬರುತ್ತವೆ. ಆದರೆ ಇವುಗಳಲ್ಲಿ ಕೇವಲ ಒಂದೆರಡನ್ನು ಹೊರತು ಪಡಿಸಿದರೆ ಉಳಿದವುಗಳನ್ನು ಗುರುತಿಸಲು ಯಾವುದೇ ನಿರ್ದಿಷ್ಟ ಆಧಾರಗಳು ದೊರೆಯುವುದಿಲ್ಲ. ಸ್ಥಳೀಯರ ಹೇಳಿಕೆ, ಪರಸ್ಪರ ಹೋಲಿಕೆಗಳಿಂದ ಗುರ್ತಿಸಬಹುದು. ಈ ಪ್ರಯತ್ನಕ್ಕೆ ಬರುವ ಇನ್ನೊಂದು ದೊಡ್ಡ ಸವಾಲೆಂದರೆ ಇವುಗಳಲ್ಲಿ ಶೇ. ೯೦% ರಷ್ಟು ಭಾಗಗಳು ಶಿಖರ, ಗೋಪುರಗಳು ಸಂಪೂರ್ಣ ಜೀರ್ಣೋದ್ಧಾರಗೊಂಡಿವೆ. ಆದಾಗ್ಯೂ ಸಹ ತುಲನಾತ್ಮಕ ಅಧ್ಯಯನದಿಂದ ಈ ಪಾಳೆಯಗಾರರ ದೇವಾಲಯಗಳನ್ನು ಅವುಗಳ ಲಕ್ಷಣಗಳನ್ನು ಗುರ್ತಿಸುವ ಪ್ರಯತ್ನ ಮಾಡಲಾಗಿದೆ. ಈ ನಿಟ್ಟಿನಲ್ಲಿ ಹರಪನಹಳ್ಳಿ ಕೋಟೆ ಪ್ರದೇಶದಲ್ಲಿರುವ ಕೋಟೆ ಆಂಜನೇಯ ದೇವಾಲಯ, ಕಾಳಿಕಾಂಬ ದೇವಾಲಯ, ಹಳೇ ಬಸ್ ನಿಲ್ದಾಣದಲ್ಲಿರುವ ಸಾರಿ ಬಯಲು ವೀರಭದ್ರೇಶ್ವರ ದೇವಾಲಯ, ಗುಡಿಕೇರಿ ಪ್ರಸನ್ನ ವೆಂಕಟರಮಣ ದೇವಸ್ಥಾನ, ದೇವರ ತಿಮ್ಮಲಾಪುರದ ಶ್ರೀ ಲಕ್ಷ್ಮೀ ವೆಂಕಟರಮಣ ದೇವಾಲಯ, ಮೈದೂರುನಲ್ಲಿರುವ ಕಡೆ ಆಂಜನೇಯ ದೇವಸ್ಥಾನ ಕೂಲಹಳ್ಳಿಯ ಶ್ರೀ ಗೋಣಿಬಸವೇಶ್ವರ, ಶ್ರೀ ಮದ್ದಾನೇಶ್ವರ ಮಠ, ಹಂಪಾ ಪಟ್ಟಣದ ಆಂಜನೇಯ ದೇವಾಲಯ, ಮುಂತಾದವುಗಳು ಪ್ರಮುಖವಾದವುಗಳಾಗಿವೆ. ಈ ಎಲ್ಲಾ ದೇವಾಲಯಗಳು ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಧಾನವಾಗಿ ಎರಡು ಅಥವಾ ಮೂರು ಭಾಗಗಳನ್ನು ಒಳಗೊಂಡಿವೆ.

ಹರಪನಹಳ್ಳಿ ಕೋಟೆ ಆಂಜನೇಯ ದೇವಾಲಯ ಗರ್ಭಗೃಹ, ಅಂತರಾಳ, ತೆರೆದ ಮಂಟಪ = ರಂಗ ಮಂಟಪ = ನವರಂಗ ಹೊಂದಿದೆ. ಬಹುತೇಕ ಅಲಂಕಾರ ರಹಿತ ೧೬ ಸರಳ ಸ್ತಂಭಗಳು ಕಂಡು ಬರುತ್ತವೆ. ಇದೇ ರೀತಿಯ ಲಕ್ಷಣಗಳನ್ನು ಮೈದೂರಿನ ಕಡೆ ಆಂಜನೇಯ ದೇವಾಲಯದಲ್ಲಿ ಗುರ್ತಿಸಬಹುದು. ಕೆಲವು ದೇವಾಲಯಗಳು ಕೇವಲ ಗರ್ಭಗೃಹ ಮತ್ತು ಮಂಟಪ ಎಂಬ ಎರಡು ಭಾಗಗಳನ್ನು ಹೊಂದಿವೆ. ಮಂಟಪಗಳು ತೆರೆದ ಪ್ರದೇಶವನ್ನು ಹೊಂದಿದ್ದು ಕಲಾತ್ಮಕವಾಗಿ ಹೆಚ್ಚಿನ ಪ್ರಾಮುಖ್ಯತೆ ಇಲ್ಲದ ಸ್ತಂಭಗಳನ್ನು ಹೊಂದಿವೆ. ಈ ವಿವರಣೆಯನ್ನು ಮುಂದುವರೆಸಿ ಕ್ಷೇತ್ರಕಾರ್ಯ ಅಧ್ಯಯನವನ್ನು ಆಧಾರವಾಗಿಟ್ಟುಕೊಂಡು ಹರಪನಹಳ್ಳಿ ಪಾಳೆಯಗಾರರ ಕಾಲದ ದೇವಾಲಯ ವಾಸ್ತುಶಿಲ್ಪ ಲಕ್ಷಣಗಳನ್ನು ಕೆಲ ದೇವಾಲಯಗಳ ವಿವರಣೆಗಳಿಂದ ತಿಳಿದುಕೊಳ್ಳಬಹುದು.

**ಶ್ರೀ ಲಕ್ಷ್ಮೀ ವೆಂಕಟರಮಣ ದೇವಸ್ಥಾನ, ದೇವರ ತಿಮ್ಮಲಾಪುರ**

| | |
|---|---|
| ದೇವಾಲಯದ ಹೆಸರು | : ಶ್ರೀ ಲಕ್ಷ್ಮೀವೆಂಕಟರಮಣ ದೇವಸ್ಥಾನ |
| ಸ್ಥಳ | : ದೇವರತಿಮ್ಮಲಾಪುರ, ಅಡವೀಹಳ್ಳಿ ಗ್ರಾ.ಪಂ. |
| ಕಾಲ | : ಕ್ರಿ.ಶ. ಸು. ೧೬ನೇ ಶತಮಾನ |
| ಶೈಲಿ | : ವಿಜಯನಗರ ದ್ರಾವಿಡ |
| ಅಭಿಮುಖ | : ಪೂರ್ವಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ |
| ಪಂಥ | : ಶ್ರೀವೈಷ್ಣವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ ಆರಾಧನೆ ಇದೆ |

ಹರಪನಹಳ್ಳಿ ತಾಲೂಕಿನ, ಅಡವೀಹಳ್ಳಿ ಗ್ರಾಮಪಂಚಾಯ್ತಿ ವ್ಯಾಪ್ತಿಯಲ್ಲಿ ದೇವರ ತಿಮ್ಮಲಾಪುರವೆಂಬ ಗ್ರಾಮದಲ್ಲಿ ಶ್ರೀ ಲಕ್ಷ್ಮೀವೆಂಕಟರಮಣ ದೇವಾಲಯವಿದೆ. ಹರಪನಹಳ್ಳಿ ಪಾಳೆಯಗಾರ ಸ್ಥಾಪಕ ದಾದೇನಾಯಕ ಈ ದೇವಾಲಯವನ್ನು ಕಟ್ಟಿಸಿದನೆಂದು ಕುಂಬಾ ಸದಾಶಿವಪ್ಪನವರು ಅಭಿಪ್ರಾಯ ಪಡುತ್ತಾರೆ. ಈ ದೇವಾಲಯ ಕುರಿತಂತೆ ಒಂದು ಐತಿಹ್ಯವೂ ಪ್ರಚಲಿತದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವನ್ನು ಕಣಶಿಲೆಯಿಂದ ನಿರ್ಮಿಸಲಾಗಿದೆ. ಗರ್ಭಗುಡಿ, ಅಂತರಾಳ, ಸಭಾಮಂಟಪ ಎಂಬ ಮೂರು ಭಾಗಗಳನ್ನು ಹೊಂದಿದೆ. ದೇವಾಲಯದ ಸುತ್ತ ದೊಡ್ಡ ಗೋಪುರವನ್ನು ಒಳಗೊಂಡ ಪ್ರವೇಶ ದ್ವಾರವುಳ್ಳ ಪ್ರಕಾರವಿದೆ. ತೆರೆದ ಸಭಾಮಂಟಪವು ಸರಳ ಕೆತ್ತನೆಯ ೧೬ ಕಂಬಗಳನ್ನು ಹೊಂದಿದೆ. ಮೇಲ್ಛಾವಣಿ ಸಮತಟ್ಟಾದ ಶಿಲೆಗಳಿಂದ ಕೂಡಿದೆ. ಅಂತರಾಳವನ್ನು ಪ್ರವೇಶಿಸಲು ದ್ವಾರಪಾಲಕರನ್ನು ಹೊಂದಿದ ಹೆಬ್ಬಾಗಿಲು ಇದೆ.

ಮೇಲೆ ಗಜಲಕ್ಷ್ಮಿಯ ತೋರಣವಿದೆ. ಇಲ್ಲಿ ಶ್ರೀದೇವಿ ಸಮೇತ ವರಹಾಸ್ವಾಮಿಯ, ಶ್ರೀ ರಾಮಾನುಜಾಚಾರ್ಯರ, ಶ್ರೀ ಆಳ್ವಾರರ ದುಂಡು ಶಿಲ್ಪಗಳಿವೆ. ಗರ್ಭಗೃಹವು ಲೋಹದ ತೋರಣ ಹೊಂದಿದ ಕವಚದ ಬಾಗಿಲು ಹೊಂದಿದೆ. ಇಲ್ಲಿಯೂ ಸಹ ಗಜಲಕ್ಷ್ಮೀ ಹಾಗೂ ದ್ವಾರಪಾಲಕರಿರುವರು. ಗರ್ಭಗೃಹದ ಒಳಗಡೆಯ ಮೇಲ್ಭಾವಣಿ ಷಟ್‌ಕೋನಗಳಿಂದ ಕೂಡಿದ ಅಲಂಕಾರ ಹೊಂದಿದೆ. ಸುಮಾರು ಐದು ಅಡಿ ಎತ್ತರದ ವೆಂಕಟರಮಣಸ್ವಾಮಿಯ ದುಂಡುಶಿಲ್ಪ ಆಕರ್ಷಣೀಯವಾಗಿದೆ. ಎಡಭಾಗದಲ್ಲಿ ಶ್ರೀ ಲಕ್ಷ್ಮಿಯ ದುಂಡುಶಿಲ್ಪವಿದೆ. ದಿನನಿತ್ಯ ಲಕ್ಷ್ಮೀವೆಂಕಟರಮಣ ಸ್ವಾಮಿಯ ಅಲಂಕಾರ ಪೂಜೆ ವಿಜೃಂಭಣೆಯಿಂದ ಇರುತ್ತದೆ. ಗರ್ಭಗೃಹ ದ್ರಾವಿಡಶೈಲಿಯ ಸಣ್ಣ ಶಿಖರವನ್ನು ಹೊಂದಿದೆ.

ಪ್ರಾಕಾರವು ೧೦೦ ಅಡಿ ಅಗಲ ಮತ್ತು ೧೨೦ ಅಡಿ ಉದ್ದ ವಿಸ್ತೀರ್ಣಹೊಂದಿದೆ. ದಕ್ಷಿಣ ದಿಕ್ಕಿನಲ್ಲಿ ಸರಳ ಕಂಬಗಳನ್ನು ಹೊಂದಿದ ಸಾಲುಮಂಟಪವಿದೆ. ದೇವಾಲಯದ ಉತ್ತರಕ್ಕೆ ಗರ್ಭಗುಡಿ ಅಂತರಾಳಕ್ಕೆ ಹೊಂದಿಕೊಂಡಂತೆ ಕಣ್ಣುಕೊಟ್ಟಪ್ಪ ದೇವರ ಗುಡಿ ಇದೆ. ಉತ್ತರ ಈಶಾನ್ಯದಲ್ಲಿ ನಾಗದೇವತೆಗಳ ಶಿಲ್ಪಗಳಿವೆ. ದೇವಾಲಯದ ತೆರೆದ ಮಂಟಪಕ್ಕೆ ಎದುರಾಗಿ ಪಶ್ಚಿಮಾಭಿಮುಖವಾಗಿ ಪತ್ನಿ ಸಮೇತರಾಗಿ ಇರುವ ದಾದೇನಾಯಕ ಮತ್ತು ರಂಗಣ್ಣನಾಯಕರ ದುಂಡುಶಿಲ್ಪಗಳನ್ನು ಹೊಂದಿದ ಚಿಕ್ಕಗುಡಿಗಳಿವೆ. ಇವರಿಗೂ ನಿತ್ಯಪೂಜೆ ಇದೆ. ದೇವಾಲಯದ ಎದುರಿಗೆ ದೀಪಸ್ತಂಭ ಮತ್ತು ನಾಲ್ಕು ಕಂಬಗಳನ್ನು ಹೊಂದಿದ ಮಂಟಪವಿದೆ. ಸಂಪೂರ್ಣ ದೇವಾಲಯ, ಗೋಪುರ, ಮಂಟಪ, ಇತ್ಯಾದಿಯನ್ನು ಜೀರ್ಣೋದ್ಧಾರಗೊಳಿಸಿ, ಸುಣ್ಣ, ಬಣ್ಣಗಳಿಂದ ಅಲಂಕಾರಗೊಳಿಸಲಾಗಿದೆ.

ಶ್ರೀ ವೈಷ್ಣವ ಸಂಪ್ರದಾಯದ ಶ್ರೀ ರಾಮಾನುಜಾಚಾರ್ಯರ ಪರಂಪರೆಯ ಪೂಜೆ ಪುನಸ್ಕಾರಗಳು, ನಿತ್ಯಪೂಜೆ, ಅಭಿಷೇಕ, ವೈಕುಂಠ ಏಕಾದಶಿ, ಕೃಷ್ಣಾಷ್ಟಮಿ, ವಿಜಯದಶಮಿ, ವಾರ್ಷಿಕ ರಥೋತ್ಸವಗಳನ್ನು ಆಚರಿಸಲಾಗುತ್ತದೆ ಎಂದು ವಂಶಪಾರಂಪರಿಕವಾಗಿ ಶ್ರೀ ಸ್ವಾಮಿಯ ಪೂಜೆ ಕೈಂಕರ್ಯ ಮಾಡಿಕೊಂಡು ಬಂದಿರುವ ಪೂಜಾರ ಶ್ರೀನಿವಾಸರವರು ತಿಳಿಸುತ್ತಾರೆ. ಶ್ರೀ ಸ್ವಾಮಿಯ ಪೂಜೆಗೋಸ್ಕರವೇ ಇವರ ಪೂರ್ವಜರು ತಮಿಳುನಾಡಿನ ಗದ್ವಾಲ್ ಪ್ರದೇಶದಿಂದ ಬಂದವರಾಗಿದ್ದಾರಂತೆ. ಸದ್ಯ ಕರ್ನಾಟಕ ಸರ್ಕಾರದ ಮುಜರಾಯಿ ಆಡಳಿತ ವ್ಯಾಪ್ತಿಯಲ್ಲಿರುವ ಈ ದೇವಸ್ಥಾನ ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದೂ, ದಾದೇನಾಯಕನಿಂದ ನಿರ್ಮಾಣಗೊಂಡಿದೆಯೆಂದೂ ಇಲ್ಲಿಯ ಐತಿಹ್ಯ, ದಾದಯ್ಯ ಮತ್ತು ರಂಗಯ್ಯ ಗುಡಿಗಳು, ಪತ್ನೀ ಸಮೇತ ಕಂಡುಬರುವ ಶಿಲ್ಪಗಳು, ಸ್ಥಳೀಯರ ಹೇಳಿಕೆಗಳು ಮುಂತಾದವುಗಳ ಆಧಾರದ ಮೇಲೆ ಕಂಬಾ ಸದಾಶಿವಪ್ಪನವರು ಅಭಿಪ್ರಾಯ ಪಟ್ಟಂತೆ ನಿರ್ಧರಿಸಬಹುದು.

**ಸಾರೀಬಯಲು ಶ್ರೀವೀರಭದ್ರೇಶ್ವರ ದೇವಸ್ಥಾನ, ಹಳೇಬಸ್ ನಿಲ್ದಾಣ, ಹರಪನಹಳ್ಳಿ**

| | |
|---|---|
| ದೇವಾಲಯದ ಹೆಸರು | : ಸಾರೀಬಯಲು ಶ್ರೀವೀರಭದ್ರೇಶ್ವರ ದೇವಸ್ಥಾನ |
| ಸ್ಥಳ | : ಹರಪನಹಳ್ಳಿ |
| ಕಾಲ | : ಕ್ರಿ.ಶ. ಸು. ೧೬ನೇ ಶತಮಾನ |
| ಶೈಲಿ | : ವಿಜಯನಗರ ದ್ರಾವಿಡ |
| ಅಭಿಮುಖ | : ಉತ್ತರಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ |
| ಪಂಥ | : ಶೈವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ ಆರಾಧನೆ ಇದೆ |

ಹರಪನಹಳ್ಳಿ ಪಟ್ಟಣದ ಹಳೇ ಬಸ್‌ನಿಲ್ದಾಣ ಪ್ರದೇಶದಲ್ಲಿ ಉತ್ತರಾಭಿಮುಖವಾಗಿ ಸಾರೀಬಯಲು ಶ್ರೀವೀರಭದ್ರೇಶ್ವರ ದೇವಸ್ಥಾನವಿದೆ. ಸುಮಾರು ೨೦ ಅಡಿ ಅಗಲ ಹಾಗೂ ೫೦ ಅಡಿ ಉದ್ದವಿರುವ ಇದು ತೆರೆದ ಮಂಟಪ, ನೃತ್ಯ ಮಂಟಪ, ಅಂತರಾಳ ಮತ್ತು ಗರ್ಭಗೃಹ ಎಂಬ ನಾಲ್ಕು ಭಾಗಗಳನ್ನು ಹೊಂದಿದೆ. ತೆರೆದ ಮಂಟಪವು ನಾಲ್ಕು ಸರಳ ಕಂಬಗಳನ್ನು ಹೊಂದಿದೆ.೨ ಮೆಟ್ಟಿಲುಗಳನ್ನು ಹತ್ತಿ ನೃತ್ಯ ಮಂಟಪವನ್ನು ಪ್ರವೇಶಿಸಿದರೆ ಮಧ್ಯದಲ್ಲಿ ೪ ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಅಂತರಾಳವನ್ನು ಪೂಜಾ ವಸ್ತುಗಳನ್ನಿಡಲು ಬಳಸಲಾಗುತ್ತದೆ. ಗರ್ಭಗೃಹವು ಕಂಚಿನ ಲೋಹಕವಚದ ಬಾಗಿಲು ಹೊಂದಿದೆ ಮೇಲ್ಭಾಗದಲ್ಲಿ ಗಜಲಕ್ಷ್ಮಿ, ಬಾಗಿಲ ಎಡ ಬಲ ಭಾಗದಲ್ಲಿ ದೀಪವನ್ನು ಕೈಯಲ್ಲಿ ಹಿಡಿದಿರುವ ಸುಂದರಿಯರು ಇರುವರು. ಗರ್ಭಗೃಹದಲ್ಲಿ ಸುಮಾರು ೨ ಅಡಿ ಎತ್ತರದ ಶ್ರೀ ವೀರಭದ್ರೇಶ್ವರನ ಶಿಲ್ಪವನ್ನು ಎತ್ತರದ ಗದ್ದಿಗೆಯ ಮೇಲೆ ಸ್ಥಾಪಿಸಲಾಗಿದೆ. ಲೋಹದ ಆಲಂಕೃತ ಪ್ರಭಾವಳಿ ಇದೆ. ಪರಿಮಳ ಹೂ-ಪುಷ್ಪಗಳಿಂದ ನಿತ್ಯ ಅಲಂಕಾರಗೊಳಿಸಿ ಪೂಜಾ ಕೈಂಕರ್ಯವನ್ನು ನಡೆಸಲಾಗುತ್ತದೆ ಎಂದು ವಂಶಪಾರಂಪರ್ಯವಾಗಿ ಪೂಜಾ ಕಾರ್ಯ ನಡೆಸುವ ಪೂಜಾರ್ ಕಾಳಪ್ಪ, ಪೂಜಾರ್ ವಾಗೀಶ್‌ರವರು ತಿಳಿಸುತ್ತಾರೆ. ಇವರು ಪಂಚಮಸಾಲಿ ಲಿಂಗಾಯಿತ ಧರ್ಮದವರು ಪ್ರತಿದಿನ ಪೂಜೆ, ಪ್ರತಿ ಮಂಗಳವಾರ ಅಭಿಷೇಕ, ಗೌರಿ ಹುಣ್ಣಿಮೆಯಂದು ರಥೋತ್ಸವ, ಓಕಳಿ, ಅಗ್ನಿಕುಂಡ, ಉತ್ಸವ ಮೂರ್ತಿಯ ಉತ್ಸವ ಮುಂತಾದ ಪೂಜಾ ಕಾರ್ಯಗಳನ್ನು ಸಾಂಗವಾಗಿ ನಡೆಸಿಕೊಂಡು ಬಂದಿರುತ್ತಾರೆ.

ದೇವಾಲಯವು ಸುತ್ತ ವಸತಿಗೃಹ, ಅಂಗಡಿ ಇತ್ಯಾದಿ ಹೊಂದಿದ ರಕ್ಷಣಾ ಗೋಡೆಯನ್ನು ಹೊಂದಿದೆ. ಮುಖ್ಯ ಮಹಾದ್ವಾರವು ಮತ್ತು ದೇವಸ್ಥಾನವು ಸುಣ್ಣ-ಬಣ್ಣಗಳಿಂದ ಶೃಂಗರಿಸಲ್ಪಟ್ಟಿದೆ. ಸ್ಥಳೀಯರ ಹಾಗೂ ಪೂಜಾರಿಗಳ ಹೇಳಿಕೆ, ಐತಿಹ್ಯ, ವಾಸ್ತು ಲಕ್ಷಣ ಇತ್ಯಾದಿಗಳನ್ನು ಗಮನಿಸಿ ಈ

ದೇವಸ್ಥಾನ ಪಾಳೆಯಗಾರ ಕಾಲದಲ್ಲಿ ನಿರ್ಮಾಣಗೊಂಡಿರುವ ನಾಲ್ಕು ಭಾಗಗಳನ್ನು ಹೊಂದಿದ ವಿಶಿಷ್ಟ ದೇವಾಲಯವಾಗಿದೆ.

**ಗುಡಿಕೇರಿ ಪ್ರಸನ್ನ ವೆಂಕಟರಮಣ ದೇವಸ್ಥಾನ, ಹರಪನಹಳ್ಳಿ**

| | |
|---|---|
| ದೇವಾಲಯದ ಹೆಸರು | : ಗುಡಿಕೇರಿ ಪ್ರಸನ್ನ ವೆಂಕಟರಮಣ ದೇವಸ್ಥಾನ |
| ಸ್ಥಳ | : ಹರಪನಹಳ್ಳಿ |
| ಕಾಲ | : ಕ್ರಿ.ಶ. ಸು. ೧೭ನೇ ಶತಮಾನ |
| ಶೈಲಿ | : ದ್ರಾವಿಡ |
| ಅಭಿಮುಖ | : ಪೂರ್ವಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ, ಗಾರೆ |
| ಪಂಥ | : ವೈಷ್ಣವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ, ಆರಾಧನೆ ಇದೆ |

ಹರಪನಹಳ್ಳಿ ಪಟ್ಟಣದ ಗುಡಿಕೇರಿ ಪ್ರದೇಶದಲ್ಲಿ ವೈಷ್ಣವ ಸಂಪ್ರದಾಯದ ಪ್ರಸನ್ನ ವೆಂಕಟರಮಣ ದೇವಸ್ಥಾನ ಇದೆ. ೨೫ ಅಡಿ ಅಗಲವಾಗಿದ್ದ ಸರಳ ಚೌಕಾಕಾರದ ೮ ಸ್ತಂಭಗಳು ಹಾಗೂ ಚಿಕ್ಕ ಗರ್ಭಗುಡಿಯನ್ನು ಹೊಂದಿದೆ. ಗರ್ಭಗುಡಿಯ ಬಾಗಿಲಿಗೆ ಕಂಚಿನ ಲೋಹದ ಹೊದಿಕೆ ಇದೆ ಗರ್ಭಗೃಹದಲ್ಲಿ ಸುಮಾರು ೨ ಅಡಿ ಎತ್ತರದ ಆಲಂಕೃತ ವೆಂಕಟರಮಣ ದುಂಡುಶಿಲ್ಪ ಇದೆ. ಲೋಹದ ಆಲಂಕೃತ ಪ್ರಭಾವಳಿ ಇದೆ.

ದೇವಾಲಯದ ಸುತ್ತ ಪ್ರಕಾರವಿದೆ. ಸುತ್ತಲೂ ಯಾತ್ರಾತ್ರಿಗಳಿಗಾಗಿ ಸರಳ ಅಲಂಕಾರವಿಲ್ಲದ ಕಂಬಗಳಿಂದ ಕೂಡಿದ ಸಾಲು ಮಂಟಪವಿದೆ. ಈ ಮಂಟಪಕ್ಕೆ ಅಂಟಿಕೊಂಡು ದಕ್ಷಿಣ ದಿಕ್ಕಿನಲ್ಲಿ ಹರಪನಹಳ್ಳಿ ಪಾಳೆಯಗಾರರ ಶಾಸನವೊಂದು ಇದೆ. ಡಾ. ಎಂ. ಕೊಟ್ರೇಶ್‌ರವರು ಇದನ್ನು ಅಧ್ಯಯನ ನಡೆಸಿ ಪ್ರಕಟಿಸಿದ್ದಾರೆ. ಹರಪನಹಳ್ಳಿ ಪಾಳೆಯಗಾರರ ರಾಜಕೀಯ ಇತಿಹಾಸವನ್ನು ಗುರ್ತಿಸುವಲ್ಲಿ ಈ ಶಾಸನ ಪ್ರಮುಖಪಾತ್ರವಹಿಸುತ್ತದೆ ಎಂದು ಡಾ. ಕೊಟ್ರೇಶ್‌ರವರು ಅಭಿಪ್ರಾಯಪಟ್ಟಿದ್ದಾರೆ. ದೇವಾಲಯದ ಹೊರಗಡೆ ದೀಪಸ್ತಂಭವಿದೆ. ದೇವಾಲಯ ಸಂಪೂರ್ಣ ಜೀರ್ಣೋದ್ಧಾರಗೊಂಡಿದ್ದು ಸುಮಾರು ೩೦೦ ವರ್ಷಗಳಿಂದಲೂ ವಂಶಪಾರಂಪರ್ಯವಾಗಿ ಪೂಜಾಕಾರ್ಯ ನಡೆಸಿಕೊಂಡು ಬಂದಿರುವುದಾಗಿ ಇಲ್ಲಿಯ ಪೂಜಾರಿ ರಾಜು ಗುಡಿಯವರು ಹೇಳುತ್ತಾರೆ. ಹರಪನಹಳ್ಳಿ ಪಾಳೆಯಗಾರರ ದೇವಾಲಯಗಳಲ್ಲಿಯೇ ಸುಣ್ಣ ಬಣ್ಣಗಳಿಂದ ಕಂಗೊಳಿಸುವ ದೇವಾಲಯ ಇದಾಗಿದೆ. ಇದರ ಆಧಾರದ ಮೇಲೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ವೈಷ್ಣವ, ಶ್ರೀ ವೈಷ್ಣವ ಎರಡೂ ಪಂಥಗಳು ಆಚರಣೆಯಲ್ಲಿದ್ದವೆಂದು ಕಂಡು ಬರುತ್ತದೆ.

ಪಾಳೆಯಗಾರರ ಕಾಲದ ಕೊಂಡಿಯಂತಿರುವ ಹರಪನಹಳ್ಳಿ ಕವಿಯತ್ರಿ ಭೀಮವ್ವ ಇತಿಹಾಸಕಾರ ಚಿಕ್ಕೇರೂರು ಗೋವಿಂದಾಚಾರ್ಯ ಈ ಪಂಥದವರಾಗಿದ್ದಾರೆ. ನಿತ್ಯಪೂಜೆ, ಆರಾಧನೆಗಳು ಸಾಂಗವಾಗಿ ಇಂದೂ ನಡೆಯುತ್ತಿವೆ.

**ಕೋಟೆ ಆಂಜನೇಯ ದೇವಸ್ಥಾನ, ಹರಪನಹಳ್ಳಿ**

| | |
|---|---|
| ದೇವಾಲಯದ ಹೆಸರು | : ಕೋಟೆ ಆಂಜನೇಯ ದೇವಸ್ಥಾನ |
| ಸ್ಥಳ | : ಕೋಟೆ ಆವರಣ, ಹರಪನಹಳ್ಳಿ |
| ಕಾಲ | : ಕ್ರಿ.ಶ. ಸು. ೧೬ನೇ ಶತಮಾನ |
| ಶೈಲಿ | : ದ್ರಾವಿಡ |
| ಅಭಿಮುಖ | : ದಕ್ಷಿಣಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ, ಗಾರೆ |
| ಪಂಥ | : ವೈಷ್ಣವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ ಆರಾಧನೆ ಇದೆ |

ಹರಪನಹಳ್ಳಿ ಪಾಳೆಯಗಾರರ ಕೋಟೆ ಪ್ರದೇಶದಲ್ಲಿ ಕಂಡುಬರುವ ಆಂಜನೇಯ ದೇವಸ್ಥಾನ ಕೋಟೆ ಆಂಜನೇಯನೆಂದೇ ಪ್ರಸಿದ್ಧಿಯಾಗಿದ್ದು ಪಾಳೆಯಗಾರರ ಆರಾಧ್ಯ ದೈವವಾಗಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯದ ಸ್ಥಾಪನೆ ಕುರಿತಾದ ಐತಿಹ್ಯವೊಂದಿದೆ. ಪಾಳೆಯಗಾರರ ವಂಶದ ಸ್ಥಾಪಕ ದಾದೇನಾಯಕನು ಈ ದೇವಾಲಯವನ್ನು ಸ್ಥಾಪಿಸಿದನೆಂದು ಪ್ರತೀತಿ ಇದೆ. ನಾಲ್ಕು ಅಡಿ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿರುವ ದೇವಾಲಯ ಪೂರ್ವ-ಪಶ್ಚಿಮ ೨೦ ಅಡಿ ದಕ್ಷಿಣ-ಉತ್ತರವಾಗಿ ೬೦ ಅಡಿ ಉದ್ದವಾಗಿದೆ. ಸಾದಾ ಕೆತ್ತನೆಯ ೧೨ ಚೌಕಾಕಾರದ ಕಂಬಗಳನ್ನು ಹೊಂದಿರುವ ತೆರೆದ ಸಭಾಮಂಟಪ, ಸಾದಾ ಬೊದುಗೆಗಳು ಮತ್ತು ಮೇಲ್ಛಾವಣಿ ಇದೆ. ದೇವಾಲಯದ ಗರ್ಭಗೃಹದ ಪ್ರವೇಶದ್ವಾರಕ್ಕೆ ಲೋಹದ ಹೊದಿಕೆಯಿದೆ. ವೈಷ್ಣವ ದ್ವಾರಪಾಲಕರಿದ್ದಾರೆ. ಗರ್ಭಗುಡಿಯಲ್ಲಿ ೪ ಅಡಿ ಎತ್ತರದ ಆಂಜನೇಯ ಉಬ್ಬು ಶಿಲ್ಪವಿದೆ. ದೇವಾಲಯದ ಸುತ್ತಲೂ ಮಹದ್ವಾರ ಹೊಂದಿದ ಪ್ರಕಾರವಿದೆ, ಗೋಡೆಯು ೧೦ ಅಡಿ ಎತ್ತರವಾಗಿದ್ದು ಕಣಶಿಲೆ, ಗಾರೆಗಳಿಂದ ನಿರ್ಮಿತಗೊಂಡಿರುವ ದೇವಾಲಯವನ್ನು ಬಣ್ಣಗಳಿಂದ ಅಲಂಕಾರಗೊಳಿಸಲಾಗಿದೆ. ಪ್ರಾಕಾರದ ಪ್ರವೇಶಗೋಪುರ ೧೫ ಅಡಿ ಎತ್ತರವಾಗಿದೆ. ಪ್ರಾಕಾರದ ವಾಯುವ್ಯ ದಿಕ್ಕಿನಲ್ಲಿ ನಾಗಶಿಲ್ಪಗಳಿವೆ. ಹರಪನಹಳ್ಳಿ ಪಾಳೆಯಗಾರರ ಕೋಟೆಯ ಆವರಣದಲ್ಲಿದ್ದ ಅರಮನೆ ದೇವಸ್ಥಾನದ ಸನಿಹದಲ್ಲಿ ಇತ್ತೆಂದು ಸ್ಥಳೀಯರು ಹೇಳುತ್ತಾರೆ. ಇದರ ಆಧಾರದ ಮೇಲೆ ಇದು ಪಾಳೆಯಗಾರರ ವಂಶದ ವೈಯಕ್ತಿಕ ಪೂಜೆಗೊಳ್ಳುವ ದೇವಾಲಯವಾಗಿತ್ತೆಂದು ಹೇಳಬಹುದು. ಪಾರಂಪರಿಕವಾಗಿ ನಾಯಕ (ಬೇಡ) ಜನಾಂಗದವರೇ ಇಂದೂ ಪೂಜಾ ಕೈಂಕರ್ಯಗಳನ್ನು ನಡೆಸುತ್ತಾರೆಂದು ಟ್ರಸ್ಟ್ ಅಧ್ಯಕ್ಷ

ನಾಗರಾಜು ಅವರು ಹೇಳುತ್ತಾರೆ. ಇಂದು ಸರ್ವ ಜನಾಂಗದವರೂ ಪೂಜಿಸುತ್ತಾರೆ. ನಿತ್ಯಪೂಜೆ, ಅಮಾವಾಸ್ಯೆ ವಿಶೇಷ ಪೂಜೆ ದಾಸೋಹ, ವಾರ್ಷಿಕ ಹಂಪಿ ಹುಣ್ಣಿಮೆ ದಿನ ರಥೋತ್ಸವ ನಡೆಯುತ್ತದೆ. ಹಂಪಿಯಲ್ಲಿ ಹಂಪಿ ಉಣ್ಣಿಮೆ (ದವನದ ಹುಣ್ಣಿಮೆ) ದಿನದಂದು ನಡೆಯುವ ಹಂಪಿ ಶ್ರೀ ವಿರೂಪಾಕ್ಷೇಶ್ವರ ರಥೋತ್ಸವ ದಿನದಂದೇ ಈ ಕೋಟೆ ಆಂಜನೇಯ ರಥೋತ್ಸವವನ್ನು ಹರಪನಹಳ್ಳಿಯಲ್ಲಿ ನಡೆಸುವ ಪರಿಪಾಠವನ್ನು ಈ ಪಾಳೆಯಗಾರರು ಪ್ರಾರಂಭಿಸಿರುವುದು ಒಂದು ವಿಶಿಷ್ಟವಾಗಿದೆ. ಕೋಟೆ ಪ್ರದೇಶದಲ್ಲಿ ಇರುವುದರಿಂದ ಐತಿಹ್ಯವನ್ನಾಧರಿಸಿ ಇದರ ನಿರ್ಮಾಪಕರು ಹರಪನಹಳ್ಳಿ ಪಾಳೆಯಗಾರರೆಂದು ದೃಢವಾಗುತ್ತದೆ. ಐತಿಹ್ಯ ಆಧರಿಸಿ ಸ್ಥಾಪಕ ದಾದೇನಾಯಕ ಎಂದು ದೃಢವಾಗುತ್ತದೆ.

**ಕಡೆ ಆಂಜನೇಯ ದೇವಸ್ಥಾನ, ಮೈದೂರು**

| | |
|---|---|
| ದೇವಾಲಯದ ಹೆಸರು | : ಕಡೆ ಆಂಜನೇಯ ದೇವಸ್ಥಾನ |
| ಸ್ಥಳ | : ಮೈದೂರು, ಚಿಗಟೇರಿ ಗ್ರಾಮ ಪಂಚಾಯಿತಿ |
| ಕಾಲ | : ಕ್ರಿ.ಶ. ಸು. ೧೬ನೇ ಶತಮಾನ |
| ಶೈಲಿ | : ದ್ರಾವಿಡ |
| ಅಭಿಮುಖ | : ದಕ್ಷಿಣಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ, ಮರ, ಗಾರೆ |
| ಪಂಥ | : ವೈಷ್ಣವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ, ಆರಾಧನೆ ಇದೆ |

ಹರಪನಹಳ್ಳಿ ತಾಲೂಕು ಚಿಗಟೇರಿ ಸಮೀಪದ ಮೈದೂರು ಪಾಳೆಯಗಾರರ ಐತಿಹಾಸಿಕ ಸ್ಥಳ. ಇಲ್ಲಿ ಶಾಸನಗಳು ಸಹ ಕಂಡುಬಂದಿವೆ. ಇದರ ಸುತ್ತಮುತ್ತ ಚಿಗಟೇರಿ, ಮುತ್ತಗಿ, ಗಜಾಪುರ, ಮುಂತಾದ ಐತಿಹಾಸಿಕ ಸ್ಥಳಗಳು ಕಂಡುಬರುತ್ತವೆ. ಸ್ಥಳೀಯ ಹಿರಿಯರ ಹೇಳಿಕೆಯಂತೆ ಐದೂರು ಸೇರಿ ಮೈದೂರು ಆಯಿತಂತೆ. ಐತಿಹ್ಯದ ಪ್ರಕಾರ ಪಕ್ಕದ ಕೆಸರಳ್ಳಿಯವರು ಆಂಜನೇಯನ ಶಿಲ್ಪವನ್ನು ಪ್ರತಿಷ್ಠಾಪಿಸಲು ತಮ್ಮ ಊರಿಗೆ ಕೊಂಡೊಯ್ಯುವಾಗ ಈ ಊರಿನಲ್ಲಿ ನಿಲ್ಲಿಸಿದರಂತೆ ನಂತರ ಬಂಡಿಯು ಮುಂದೆ ಹೋಗಲಿಲ್ಲವಂತೆ. ಆದ್ದರಿಂದ ಇಲ್ಲಿಯೇ ಸ್ವಾಮಿಯನ್ನು ಪ್ರತಿಷ್ಠಾಪಿಸಿ ದೇವಾಲಯವನ್ನು ನಿರ್ಮಿಸಲಾಯಿತೆಂಬುದು ಇಲ್ಲಿಯವರ ಹೇಳಿಕೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯ ಕಣಶಿಲೆಗಳಿಂದ ನಿರ್ಮಿಸಲ್ಪಟ್ಟಿದೆ. ವಿಶಾಲ ಪ್ರವೇಶ ಮುಖ್ಯದ್ವಾರ ಹಾಗೂ ಸುತ್ತಲೂ ಕಣಶಿಲೆಯ ಗೋಡೆಗಳಿಂದ ಆವೃತವಾಗಿರುವ ಪ್ರಕಾರವಿದೆ. ಮಹಾದ್ವಾರ ಪ್ರವೇಶದ ಎಡ ಮತ್ತು ಬಲದಲ್ಲಿ ೨ ಅಡಿ ಎತ್ತರದ ಜಗುಲಿ ಇದೆ. ದೇವಸ್ಥಾನದ ಹಿಂಭಾಗದಲ್ಲಿ ಅಂದರೆ ಉತ್ತರಕ್ಕೆ ಎತ್ತರವಾದ ಮರದ ಸಾದಾ ಕೆತ್ತನೆಯ ಚೌಕಾಕಾರದ ೧೦ ಕಂಬಗಳ ಸಭಾಮಂಟಪ ಪ್ರಾಂಗಣವಿದೆ. ಮೇಲ್ಭಾಗದಲ್ಲಿ

ಗಾರೆಯಿಂದ ನಿರ್ಮಿಸಿದ ಶಿಲ್ಪಗಳಿಲ್ಲದ ಗೂಡುಗಳಿವೆ. ಪ್ರಾಂಗಣದ ಪೂರ್ವಾಗ್ನೇಯ ದಿಕ್ಕಿನಲ್ಲಿ ಓಕಳಿ ಗುಂಡಿ ಇದೆ.

ಮುಖ್ಯ ದೇವಾಲಯವು ೩ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ ಪೂರ್ವ ದಿಕ್ಕಿನ ಅಧಿಷ್ಠಾನದ ಮೇಲೆ ಸಿಂಹ ಮತ್ತು ನಾಗ ಉಬ್ಬುಶಿಲ್ಪ ಇವೆ. ಸುಮಾರು ೨೦ ಅಡಿ ಅಗಲ ಮತ್ತು ೩೦ ಅಡಿ ವಿಸ್ತೀರ್ಣವುಳ್ಳ ದೇವಾಲಯ ಸಭಾ ಮಂಟಪ ಮತ್ತು ಗರ್ಭಗೃಹ ಎಂಬ ಎರಡು ಸರಳ ಭಾಗಗಳನ್ನು ಹೊಂದಿದೆ. ಮುಖ್ಯ ಸಭಾ ಮಂಟಪವು ೧೬ ಅಂಕಣಗಳ ಸರಳ ಕೆತ್ತನೆಯ ಕಂಬಗಳನ್ನು, ಅಲಂಕಾರವಿಲ್ಲದ ಮೇಲ್ಛಾವಣಿಯನ್ನು ಹೊಂದಿದೆ. ಗರ್ಭಗೃಹದ ಪ್ರವೇಶದ್ವಾರದ ಬಾಗಿಲು ಕಂಚಿನ ಲೋಹದ ಹೊದಿಕೆಯನ್ನು ಹೊಂದಿದೆ ಎಡ-ಬಲದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಬಾಗಿಲ ಕವಚದ ಮೇಲ್ಭಾಗದಲ್ಲಿ ಗಣೇಶ ಹಾಗೂ ಪರ್ವತವನ್ನೆತ್ತಿಕೊಂಡಿರುವ ಆಂಜನೇಯ ಉಬ್ಬು ಶಿಲ್ಪಗಳಿವೆ. ಗರ್ಭಗೃಹದಲ್ಲಿ ೨ ಅಡಿ ಎತ್ತರದ ಬಲಗೈ ಮೇಲೆತ್ತಿರುವ ಆಂಜನೇಯನ ಉಬ್ಬುಶಿಲ್ಪವಿದೆ. ಶಿಲ್ಪದ ಸುತ್ತ ಕಂಚಿನ ಲೋಹನ ಪ್ರಭಾವಳಿ ಇದೆ. ಎಡ-ಬಲ ಪಾಲಕರಿರುವರು ನಿತ್ಯ ಪೂಜೆ-ಹೂ-ಪುಷ್ಪಗಳಿಂದ ಪೂಜಾಲಂಕಾರಗಳನ್ನು ಮಾಡಲಾಗುತ್ತದೆ. ಶನಿವಾರ ವಿಶೇಷ ಪೂಜೆ ಯುಗಾದಿಯ ನಂತರ ವಾರ್ಷಿಕ ರಥೋತ್ಸವ, ಮುಳ್ಳುಗದ್ದಿಗೆ ಆಚರಣೆಗಳು ಸಾಂಗವಾಗಿ ನಡೆಯುತ್ತವೆ ಎಂದು ಊರಿನ ಹಿರಿಯರು, ಪೂಜಾರಿಗಳು ಹೇಳುತ್ತಾರೆ. ದೇವಾಲಯದ ಎದುರು ರಸ್ತೆಯಲ್ಲಿ ಸುಮಾರು ೫೦-೬೦ ಅಡಿ ಎತ್ತರದ ದೀಪಸ್ತಂಭವಿದೆ.

ದೇವಾಲಯದ ನಿರ್ಮಾಣ, ಶಿಲೆ, ಇತರ ಸಾಮಗ್ರಿ, ಸೌಂದರ್ಯ, ಇತ್ಯಾದಿಗಳನ್ನು ಗಮನಿಸಿ ಪಕ್ಕದ ಚಿಗಟೇರಿಯಲ್ಲಿ ನಿರ್ಮಾಣವಾಗಿರುವ ಸುಂದರ ಪುಷ್ಕರಣಿ ಇತ್ಯಾದಿಗಳನ್ನು ತುಲನಾತ್ಮಕವಾಗಿ ನೋಡಿದಲ್ಲಿ ಚಿಗಟೇರಿ ಶಿವನಪ್ಪ ನಾಯಕನ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಅಂದಾಜಿಸಬಹುದು. ಕ್ರಿ.ಶ. ೧೬ಳಳರ ಕಾಲಮಾನವನ್ನು ಹೊಂದಿದ ಪಾಳೆಯಗಾರರ ಶಾಸನವೊಂದು ಇಲ್ಲಿ ದೊರೆತಿದೆ. ಇವೆಲ್ಲವುಗಳ ಆಧಾರದ ಮೇಲೆ ಈ ದೇವಾಲಯ ಹರಪನಹಳ್ಳಿ ಪಾಳೆಯಗಾರರ ಕಾಲದ ಪ್ರಮುಖ ನಿರ್ಮಾಣ ಎಂದು ತಿಳಿದುಬರುತ್ತದೆ.

**ಕರಡಿದುರ್ಗ ಆಂಜನೇಯ ದೇವಾಲಯ, ಕರಡಿದುರ್ಗ**

| | |
|---|---|
| ದೇವಾಲಯದ ಹೆಸರು | : ಕರಡಿದುರ್ಗ ಆಂಜನೇಯ ದೇವಾಲಯ |
| ಸ್ಥಳ | : ಕರಡಿದುರ್ಗ |
| ಕಾಲ | : ಕ್ರಿ.ಶ. ಸು. ೧೬ನೇ ಶತಮಾನ |
| ಶೈಲಿ | : ದ್ರಾವಿಡ |
| ಅಭಿಮುಖ | : ದಕ್ಷಿಣಾಭಿಮುಖ |

ವಸ್ತು / ಬಳಸಿದ ಶಿಲೆ : ಕಣ ಶಿಲೆ

ಪಂಥ : ವೈಷ್ಣವ

ಸದ್ಯದ ಸ್ಥಿತಿಗತಿ : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ, ವರ (ಅಪ್ಪಣೆ) ಕೇಳುವ ಕೊಡುವ ಪದ್ದತಿ ಇದೆ

ಹರಪನಹಳ್ಳಿಯಿಂದ ದಕ್ಷಿಣಕ್ಕೆ ೨೮ ಹಾಗೂ ಉಚ್ಚಂಗಿದುರ್ಗದಿಂದ ೨ ಕಿ.ಮಿ. ದೂರದಲ್ಲಿರುವ ಕರಡಿದುರ್ಗ ಉಚ್ಚಂಗಿದುರ್ಗಕ್ಕೆ ಅಂಟಿಕೊಂಡಿರುವ ಬೆಟ್ಟ ಶ್ರೇಣಿ ಎತ್ತರದಲ್ಲಿ ಉಚ್ಚಂಗಿದುರ್ಗಕ್ಕಿಂತ ಚಿಕ್ಕದು. ಇದೊಂದು ಹರಪನಹಳ್ಳಿ ಪಾಳೆಯಗಾರರ ಕಾಲದ ಕೋಟೆಯನ್ನು ಹೊಂದಿದ ಆಯಕಟ್ಟಿನ ರಕ್ಷಣಾಸ್ಥಳವಾಗಿತ್ತು. ಹರಪನಹಳ್ಳಿ ಪಾಳೆಯಗಾರರ ಪ್ರಸಿದ್ಧ ಕೋಟೆಗಳು ಉಚ್ಚಂಗಿದುರ್ಗ ಮತ್ತು ಕರಡಿದುರ್ಗದಲ್ಲಿ ಕಂಡುಬರುತ್ತವೆ. ಜೊತೆಗೆ ಇವರ ಕಾಲದ ದೇವಾಲಯಗಳು ಸಹ ಕೋಟೆಯ ಒಳಗಡೆ ಈ ಎರಡೂ ಸ್ಥಳದಲ್ಲಿ ಕಂಡುಬರುತ್ತವೆ. ಉಚ್ಚಂಗಿದುರ್ಗದಲ್ಲಿ ಉಚ್ಚಂಗೆಮ್ಮ ಹಾಗೂ ಕರಡಿದುರ್ಗದಲ್ಲಿ ಕುಲದೈವ ಆಂಜನೇಯ ದೇವಾಲಯಗಳಿವೆ. ಜೊತೆಗೆ ಈ ಎರಡೂ ಸ್ಥಳಗಳಲ್ಲಿ ಇವರ ಶಾಸನಗಳಿವೆ. ಚಿತ್ರದುರ್ಗದವರೊಂದಿಗೆ ಹೋರಾಡಲು ಇದನ್ನು ವಿಸ್ತರಿಸಿರಬೇಕು ಎಂದು ಡಾ. ಎಂ. ಕೊಟ್ರೇಶ್‌ರವರು ಅಭಿಪ್ರಾಯ ಪಡುತ್ತಾರೆ.

ಕರಡಿದುರ್ಗದ ಕೋಟೆಯ ಬಾಗಿಲನ್ನು ಪ್ರವೇಶಿಸಿದ ಕೂಡಲೇ ಸರಳ ವಾಸ್ತು ಲಕ್ಷಣಗಳನ್ನು ಹೊಂದಿರುವ ಆಂಜನೇಯ ದೇವಾಲಯವಿದೆ. ಇದರ ಎದುರು ೧೫ ಅಡಿ ಎತ್ತರದ ದೀಪಸ್ತಂಭವಿದೆ. ತೆರೆದ ಸಭಾಮಂಟಪ ಮತ್ತು ಗರ್ಭಗೃಹ ಹೊಂದಿರುವ ಈ ದೇವಾಲಯ ಆಧುನಿಕ ವಸ್ತುಗಳನ್ನು ಬಳಸಿ ಜೀರ್ಣೋದ್ಧಾರಗೊಳಿಸಲಾಗಿದೆ. ಸಭಾಮಂಟಪದಲ್ಲಿ ಪಾಳೆಯಗಾರ ಮುಮ್ಮಡಿ ಬಸಪ್ಪನಾಯಕನ ಶಾಸನ ಇದೆ. ಗರ್ಭಗೃಹ ದ್ವಾರಕ್ಕೆ ಕಂಚಿನ ಲೋಹದ ಹೊದಿಕೆ ಹೊದಿಸಲಾಗಿದೆ. ಗರ್ಭಗೃಹದಲ್ಲಿ ಬಲಗೈ ಮೇಲಕ್ಕೆ ಎತ್ತಿರುವ ಆಂಜನೇಯ ಉಬ್ಬುಶಿಲ್ಪ ಇದೆ. ಲೋಹದ ಪ್ರಭಾವಳಿ ಇದೆ. ನಿತ್ಯ ಹೂ-ಪುಷ್ಪಗಳಿಂದ ಪೂಜೆ ಅಲಂಕಾರಗಳು, ಸ್ವಾಮಿಯ ಅಪ್ಪಣೆ/ವರ ಕೇಳುವುದು ನಡೆಯುತ್ತದೆ. ಇಂದೂ ಸಹ ದೂರದೂರದ ಊರುಗಳಿಂದ ಬರುವ ಭಕ್ತಾದಿಗಳಿಗೆ ಬಹು ನಂಬುಗೆಯ ಸ್ಥಳವಾಗಿದೆ. ವಾರ್ಷಿಕ ಉತ್ಸವ ನಡೆಯುತ್ತದೆ. ಕರಡಿದುರ್ಗ ಹಾಳಾದ ನಂತರ ಜನವಸತಿ ಕೆಳಗಡೆ ಬಯಲು ಪ್ರದೇಶಕ್ಕೆ ಸ್ಥಳಾಂತರಗೊಂಡ ಗ್ರಾಮವಾಗಿದೆ ಇಲ್ಲಿಯೂ ಸಹ ಆಂಜನೇಯ ದೇವಾಲಯವನ್ನು ನಿರ್ಮಿಸಿದ್ದಾರೆ. ಪಾಳೆಯಗಾರರ ಕಾಲದ ಖಡ್ಗಗಳು ಇಲ್ಲಿ ಪೂಜೆಗೊಳ್ಳುತ್ತವೆ. ಪ್ರತಿವರ್ಷ ಯುಗಾದಿಯ ನಂತರ ಉತ್ಸವ ನಡೆಯುತ್ತದೆ. ಉಚ್ಚಂಗಿದುರ್ಗದ ಪೂಜಾರಿಗಳ ಮನೆತನದವರೇ ಇಲ್ಲಿಯ ಪೂಜಾ ಕೈಂಕರ್ಯ ನಡೆಸುತ್ತಾರೆ.

**ಶ್ರೀ ಆಂಜನೇಯ ದೇವಾಲಯ, ಹಂಪಾಪಟ್ಟಣ**

| | |
|---|---|
| ದೇವಾಲಯದ ಹೆಸರು | : ಶ್ರೀ ಆಂಜನೇಯ ದೇವಾಲಯ |
| ಸ್ಥಳ | : ಹಂಪಾಪಟ್ಟಣ ಹಗರಿಬೊಮ್ಮನಹಳ್ಳಿ ತಾಲೂಕು |
| ಕಾಲ | : ಕ್ರಿ.ಶ. ೧೭ನೇ ಶತಮಾನ |
| ಶೈಲಿ | : ದ್ರಾವಿಡ |
| ಅಭಿಮುಖ | : ದಕ್ಷಿಣಾಭಿಮುಖ |
| ವಸ್ತು / ಬಳಸಿದ ಶಿಲೆ | : ಕಣ ಶಿಲೆ |
| ಪಂಥ | : ವೈಷ್ಣವ |
| ಸದ್ಯದ ಸ್ಥಿತಿಗತಿ | : ಜೀರ್ಣೋದ್ಧಾರಗೊಂಡಿದೆ, ನಿತ್ಯಪೂಜೆ, ವಾರ್ಷಿಕ ಉತ್ಸವಗಳಿವೆ |

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹಂಪಾಪಟ್ಟಣ ಪಾಳೆಯಗಾರರ ಕಾಲದ ಪ್ರಮುಖ ಕೇಂದ್ರ, ಇವರ ಕಾಲದ ಕೋಟೆ ಇತ್ತು ಆದರೆ ಇಂದು ಸಂಪೂರ್ಣ ಹಾಳಾಗಿದ್ದು ಕೋಟೆ ಇದ್ದ ಪ್ರದೇಶವನ್ನು ಸ್ಥಳೀಯರು ತೋರಿಸುತ್ತಾರೆ. ಇದಕ್ಕೆ ಹೊಂದಿಕೊಂಡಂತೆ ಈ ಕಾಲದ ಶ್ರೀ ಆಂಜನೇಯ ದೇವಾಲಯವಿದ್ದು ಸಂಪೂರ್ಣ ಜೀರ್ಣೋದ್ಧಾರಗೊಂಡು ಸುಣ್ಣ-ಬಣ್ಣ ಅಲಂಕಾರಗಳಿಂದ ಕಂಗೊಳಿಸುತ್ತದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯ ಹರಪನಹಳ್ಳಿ ಪಾಳೆಯಗಾರರ ಪರಂಪರೆಯ ಸರಳ ಲಕ್ಷಣಗಳನ್ನು ಹೊಂದಿದೆ. ತೆರೆದ ಸಭಾಮಂಟಪ ಮತ್ತು ಗರ್ಭಗೃಹ ಎಂಬ ಎರಡು ಭಾಗಗಳನ್ನು ಹೊಂದಿದೆ. ಕೇವಲ ೬ ಸರಳ ಕಂಬಗಳನ್ನು ಹಾಗೂ ಅಲಂಕಾರ ಇಲ್ಲದ ಮೇಲ್ಛಾವಣಿಯನ್ನು ಹೊಂದಿದೆ. ಗರ್ಭಗೃಹದ ಬಾಗಿಲು ಲೋಹ ಕವಚದಿಂದ ಕೂಡಿದೆ ವೈಷ್ಣವ ದ್ವಾರಪಾಲಕರು ಹಾಗೂ ಗಜಲಕ್ಷ್ಮಿ ಇವೆ. ಗರ್ಭಗೃಹದಲ್ಲಿ ಆಂಜನೇಯ ಉಬ್ಬುಶಿಲ್ಪವಿದೆ. ದೇವಸ್ಥಾನಕ್ಕೆ ಪ್ರವೇಶದ್ವಾರ ಹೊಂದಿದ ಪ್ರಾಂಗಣವಿದೆ. ದೇವಾಲಯದ ಎದುರು ಗರಡುಗಂಬ (ದೀಪಸ್ತಂಭ) ಇದೆ. ಪ್ರಾಂಗಣದ ಪಶ್ಚಿಮದಲ್ಲಿ ಗ್ರಾಮದಲ್ಲಿ ದೊರೆತ ಕೆಲ ಶಿಲ್ಪಗಳನ್ನು ಇಟ್ಟಿದ್ದಾರೆ. ದೇವಾಲಯದ ಎದುರು ಓಕಳಿಗುಂಡಿ ಇದೆ. ಪಾಳೆಯಗಾರರ ಕಾಲದ ಪಳೆಯುಳಿಕೆಗಳು ಇಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಬಹು ವಿಶಿಷ್ಟವಾದುದೆಂದರೆ ಗ್ರಾಮದಲ್ಲಿ ಸಂಜೆಯ ನಂತರ ಸಾರ್ವಜನಿಕ ಬೀದಿ ದೀಪದ ವ್ಯವಸ್ಥೆಯನ್ನು ಮಾಡಿದ್ದರೆಂದು ತಿಳಿದು ಬರುವ ಕುರುಹುಗಳಿವೆ. ಗ್ರಾಮದ ರಸ್ತೆಗಳು ವಿಶಾಲವಾಗಿವೆ. ರಸ್ತೆಯ ಪಕ್ಕದಲ್ಲಿ ಬೆಳಕಿಗಾಗಿ ಸುಮಾರು ೪ ಅಡಿ ಎತ್ತರದ ಶಿಲೆಯ ಕಂಬವನ್ನು ನೆಟ್ಟು ಅದರ ಮೇಲೆ ಬೆಳಕಿಗಾಗಿ ಎಣ್ಣೆಯ ದೀಪಗಳನ್ನು ಉರಿಸಲು ಲಾಟೀನುಗಳನ್ನು ಜೋಡಿಸಿದ್ದರು. ಇಂತಹ ಎಣ್ಣೆಯ ದೀಪಗಳನ್ನು ಗ್ರಾಮದ ತುಂಬೆಲ್ಲ ಮಾಡಿದ್ದರೆಂದು ಹಿರಿಯರು ಹೇಳುತ್ತಾರೆ. ಅವೆಲ್ಲವೂ ಅಳಿದುಹೋಗಿ ಇಂದು ಕೇವಲ ಒಂದು ಮಾತ್ರ ಕೋಟೆಯ ಮಾರ್ಗದಲ್ಲಿ ಕಂಡುಬರುತ್ತದೆ. ಅದರ ಛಾಯಾಚಿತ್ರವನ್ನು ನೀಡಿದ್ದೇನೆ. ಈ

ಪರಂಪರೆಯ ಮುಂದುವರಿಕೆ ಎಂಬಂತೆ ನಮ್ಮ ಕಾಲದ ವಿದ್ಯುತ್ ದೀಪದ ಕಂಬವೂ ಸಹ ಇದರ ಪಕ್ಕದಲ್ಲಿದ್ದು ಇತಿಹಾಸದ ಕೊಂಡಿಗಳನ್ನು ಗುರ್ತಿಸಲು ಸಹಾಯಕವಾಗುತ್ತದೆ. ಇದಕ್ಕೆ ಪೂರಕ ಎಂಬಂತೆ ಪಕ್ಕದ ಹಗರಿಬೊಮ್ಮನಹಳ್ಳಿ ಆ ಕಾಲದ ಎಣ್ಣೆ ತಯಾರಿಕಾ ಕೇಂದ್ರವಾಗಿತ್ತು.

ಇದೇ ರೀತಿ ಹರಪನಹಳ್ಳಿ ಪಾಳೆಯಗಾರರ ಕಾಲದ ದೇವಾಲಯಗಳು ತಂಬ್ರಹಳ್ಳಿ, ನಾರಾಯಣದೇವರ ಕೆರೆ ಹೊಳಲು, ಕುಂಚೂರು, ಹಿರೇಮ್ಯಾಗಳಗೇರಿ, ಮಾಗಾನಹಳ್ಳಿ, ಅರಸೀಕೆರೆ, ಕೂಲಹಳ್ಳಿ, ಚಿಕ್ಕಮ್ಯಾಗಳಗೇರಿ, ಬಸವನಕೋಟೆ, ಗಡಿಗುಡಾಳ್, ಅಲಗಿಲವಾಡ, ಹೊಳಲು ಮುಂತಾದಡೆ ಕಂಡುಬರುತ್ತವೆ. ಪ್ರಮುಖವಾದವುಗಳ ವಿವರಣೆಯನ್ನು ನೀಡಲಾಗಿದೆ. ಬಹಳಷ್ಟು ಜೀರ್ಣೋದ್ಧಾರ ಗೊಂಡಿರುವುದರಿಂದ ಗುರ್ತಿಸುವುದು ಕಷ್ಟವಾಗಿದೆ. ಸಾಂದರ್ಭಿಕ ಇತರ ಆಧಾರಗಳ ಸಹಾಯದಿಂದ ಗುರ್ತಿಸಬಹುದಾಗಿದೆ. ಹರಪನಹಳ್ಳಿಯಲ್ಲಿಯೇ ನೂರಾರು ದೇವಾಲಯಗಳಿದ್ದವಂತೆ ಇಂದು ಬಹಳಷ್ಟು ನಶಿಸಿ ಹೋಗಿವೆ. ಕುಂಬಾ ಸದಾಶಿವಪ್ಪನವರು ಹೇಳುವಂತೆ ಹರಪನಹಳ್ಳಿಯ ಸುತ್ತ ೧೨ ದಿಕ್ಕಿಗೆ ೧೨ ಉಕ್ಕಡಗಳೂ, ಪ್ರತಿ ಉಕ್ಕಡಕ್ಕೂ ಒಂದೊಂದು ಆಂಜನೇಯ ದೇವಾಲಯ ಹಾಗೂ ಗರಡಿ ಮನೆಗಳು ಕಂಡುಬರುತ್ತವೆ. ಇವು ಸಹ ಆಧುನೀಕರಣ ಹೊಂದಿವೆ. ಕ್ಷೇತ್ರಕಾರ್ಯ ಕಾಲದಲ್ಲಿ ಪಾಳೆಯಗಾರರ ಪ್ರದೇಶದಾದ್ಯಂತ ಶ್ರೀ ಆಂಜನೇಯ ದೇವಾಲಯಗಳು ಇರುವುದು ಕಂಡುಬರುತ್ತದೆ.

ಹರಪನಹಳ್ಳಿಯಲ್ಲಿ ಹಂಪಿ ಶ್ರೀ ವಿರೂಪಾಕ್ಷೇಶ್ವರ ದೇವಾಲಯ, ಶ್ರೀ ಶೃಂಗೇರಿ ಶಂಕರಮಠ ಕಂಡು ಬರುತ್ತವೆ. ಇವು ಪಾಳೆಯಗಾರರ ವಾಸ್ತುಶೈಲಿಯಲ್ಲಿವೆ. ಪಾಳೆಯಗಾರರು ಶೃಂಗೇರಿ ಮಠದೊಂದಿಗೆ ಹಾಗೂ ಶ್ರೀ ಕ್ಷೇತ್ರ ಹಂಪಿಯೊಂದಿಗೆ ಹೊಂದಿದ ಸಂಬಂಧ-ಸಂಪರ್ಕಗಳನ್ನು ಇದರಿಂದ ಗುರ್ತಿಸಬಹುದು. ನಾರಾಯಣಾದೇವರಕೆರೆಯಲ್ಲಿದ್ದ ಪಾಳೆಯಗಾರರ ಕಾಲದ ಅರಮನೆ, ಪುಷ್ಕರಣಿ, ದೇವಾಲಯಗಳು ಇತರ ಸ್ಮಾರಕಗಳು ತುಂಗಭದ್ರಾ ಅಣೆಕಟ್ಟೆಯ ಹಿನ್ನೀರಿಯಲ್ಲಿ ಮುಳುಗಡೆಯಾಗಿವೆ. ಬೇಸಿಗೆ ಕಾಲದಲ್ಲಿ ಅಲ್ಲಲ್ಲಿ ಅವಶೇಷಗಳು ಗೋಚರಿಸುತ್ತವೆ. ಹಿರೇಮ್ಯಾಗಳಗೇರಿಯ ಶ್ರೀ ಆಂಜನೇಯ ದೇವಾಲಯವನ್ನು ಕೆಡವಿ ಹೊಸದಾಗಿ ನಿರ್ಮಾಣ ಮಾಡುತ್ತಿದ್ದಾರೆ. ಆದರೆ ಸ್ವಾಮಿಯ ವಾರ್ಷಿಕ ಉತ್ಸವದಲ್ಲಿ ಉಯ್ಯಾಲೆ ಆಡಿಸುವ ಉಯ್ಯಾಲೆ ಕಂಬ ಚಿತ್ರದುರ್ಗದ ಉಯ್ಯಾಲೆ ಕಂಬದ ಮಾದರಿಯಲ್ಲಿದ್ದು ಹರಪನಹಳ್ಳಿ ಪಾಳೆಯಗಾರರ ವಾಸ್ತುಶಿಲ್ಪ ನಿರ್ಮಾಣಕ್ಕೆ ಅತ್ಯುತ್ತಮ ಸಾಕ್ಷಿಯಾಗಿದೆ. ಹರಪನಹಳ್ಳಿ ತಾಲೂಕು ಅರಸೀಕೆರೆ ಸಮೀಪದ ನಿಚ್ಚವ್ವನಹಳ್ಳಿ ಗ್ರಾಮ ಪಾಳೆಯಗಾರರ ಪ್ರಮುಖಕೇಂದ್ರ ಇಲ್ಲಿಯ ಆಂಜನೇಯ ದೇವಾಲಯದಲ್ಲಿ ಇವರ ಶಾಸನ ಈಗಲೂ ಸುಸ್ಥಿತಿಯಲ್ಲಿದೆ. ದೇವಾಲಯ ವಾಸ್ತುಶಿಲ್ಪ ದೃಷ್ಟಿಯಿಂದ ಸರಳವಾಗಿದ್ದು ಸಭಾಮಂಟಪ ಮತ್ತು ಗರ್ಭಗೃಹ ಹೊಂದಿದೆ. ಇಲ್ಲಿದ್ದ ಕೋಟೆ ಸಂಪೂರ್ಣ ನೆಲಸಮವಾಗಿದ್ದು ಪ್ರದೇಶ ಮಾತ್ರ ಪಳೆಯುಳಿಕೆಗಳಿಂದ ಗೋಚರಿಸುತ್ತದೆ. ಹರಪನಹಳ್ಳಿ ಪಾಳೆಯಗಾರರ ಪ್ರಮುಖ ರಾಜಧಾನಿ ಎಂದೇ

ಗುರ್ತಿಸಿಕೊಂಡಿದ್ದ ಉಚ್ಚಂಗಿದುರ್ಗದ ಉಚ್ಚಂಗೆಮ್ಮ ದೇವಾಲಯ ಇವರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ ಇಲ್ಲಿ ಇವರ ಗಂಟೆ ಶಾಸನ ದೊರೆತಿದೆ.

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಹರಪನಹಳ್ಳಿ ಪಾಳೆಯಗಾರರ ದೇವಾಲಯ ವಾಸ್ತುಶಿಲ್ಪದ ಲಕ್ಷಣಗಳನ್ನು ಈ ಕೆಳಗಿನಂತೆ ವರ್ಗೀಕರಿಸಬಹುದು.

**ಹರಪನಹಳ್ಳಿ ಪಾಳೆಯಗಾರರ ದೇವಾಲಯಗಳ ಲಕ್ಷಣಗಳು**

೧. ಮೂಲ ದೇವಾಲಯಗಳು ಕಣ ಶಿಲೆಯ ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿವೆ.

೨. ಬಹುತೇಕ ದೇವಾಲಯಗಳು ಗರ್ಭಗೃಹ ಮತ್ತು ತೆರೆದ ಮಂಟಪ (ನವರಂಗ=ಸಭಾ ಮಂಟಪ=ರಂಗಮಂಟಪ) ಎಂಬ ಎರಡು ಭಾಗಗಳನ್ನು ಮಾತ್ರ ಹೊಂದಿವೆ ಇನ್ನು ಕೆಲವು ಅಂತರಾಳ ಎಂಬ ಚಿಕ್ಕ ಭಾಗವನ್ನು ಹೊಂದಿವೆ. ಪೂಜಾ ಸಾಮಗ್ರಿಗಳನ್ನು ಇಡಲು ಉಪಯೋಗವಾಗಿವೆ.

೩. ದೇವಾಲಯದ ಸುತ್ತ ಹೊರ ರಕ್ಷಣಾ ಗೋಡೆ (ಪ್ರಾಂಗಣ) ಜೀರ್ಣೋದ್ಧಾರಗೊಂಡ ನೂತನ ಗೋಪುರ (ವಿಜಯನಗರೋತ್ತರ ದ್ರಾವಿಡ ಶೈಲಿ) ಕಂಡು ಬರುತ್ತವೆ.

೪. ದೇವರ ತಿಮ್ಮಲಾಪುರರದ ಶ್ರೀಲಕ್ಷ್ಮೀವೆಂಕಟರಮಣ ದೇವಾಲಯ, ಮೈದೂರುನ ಕಡೇ ಆಂಜನೇಯ ದೇವಾಲಯದಲ್ಲಿ ಸರಳ ಅಲಂಕಾರದ ಭಕ್ತಾಧಿಗಳಿಗಾಗಿ ನಿರ್ಮಿಸಿದ ಪ್ರಾಕಾರ ಮಂಟಪಗಳು ಕಂಡುಬರುತ್ತದೆ. ಇಲ್ಲಿ ಕಟ್ಟಿಗೆ ಬಳಸಲಾಗಿದೆ.

೫. ಪಾಳೆಯಗಾರರ ಕೋಟೆಗಳು ಕಂಡುಬರುವ ಎಲ್ಲಾ ಪ್ರದೇಶಗಳಲ್ಲಿ ಕೋಟೆ ಬಾಗಿಲಿಗೆ ಹೊಂದಿಕೊಂಡಂತೆ ಆಂಜನೇಯ ದೇವಾಲಯಗಳು ಕಂಡುಬರುತ್ತವೆ. ವಾಸ್ತುಶಿಲ್ಪ ಮತ್ತು ಕಲಾತ್ಮಕ ಅಲಂಕಾರ ದೃಷ್ಟಿಯಿಂದ ಅಂತಹ ಮಹತ್ವದವುಗಳು ಎನಿಸುವುದಿಲ್ಲ.

೬. ಕೆಲವು ದೇವಾಲಯಗಳ ಸಾದಾ ಭಿತ್ತಿಯ ಹೊರಭಾಗದಲ್ಲಿ ನಾಗಶಿಲ್ಪ ಮತ್ತು ಇತರ ಉಬ್ಬು ಶಿಲ್ಪಗಳು ಕಂಡುಬರುತ್ತವೆ.

೭. ದೇವಾಲಯಗಳ ಹಜಾರ ಅಥವಾ ಸಭಾ ಮಂಟಪಗಳು ನಾಲ್ಕು ಅಥವಾ ಎಂಟು, ಹದಿನಾರು ಸಾದಾ ಕಂಬಗಳನ್ನು ಹೊಂದಿವೆ ಮೇಲ್ಛಾವಣಿಗಳು ಸರಳವಾಗಿವೆ.

೮. ಶಿಖರಗಳು ಸಂಪೂರ್ಣ ಜೀರ್ಣೋದ್ಧಾರಗೊಂಡಿವೆ. ಮೂಲಸ್ಥಿತಿಯಲ್ಲಿ ಇರುವುದಿಲ್ಲ. ನಾಶಗೊಂಡಿರುವ ದೇವಾಲಯಗಳನ್ನು ಹೊರತುಪಡಿಸಿದರೆ ಹೆಚ್ಚಿನ ದೇವಾಲಯಗಳಲ್ಲಿ ಇಂದಿಗೂ ಸಹ ಪೂಜೆ–ಪುನಸ್ಕಾರಗಳು, ಧಾರ್ಮಿಕ ಕಾರ್ಯಗಳು ನಡೆಯುತ್ತವೆ.

೯. ದೇವರ ತಿಮ್ಮಲಾಪುರ, ನಾರಾಯಣದೇವರ ಕೆರೆ ದೇವಾಲಯಗಳ ಮುಂಭಾಗದಲ್ಲಿ ಪುಷ್ಕರಣಿಗಳು ಕಂಡುಬರುತ್ತವೆ.

೧೦. ಇದನ್ನು ಗಮನಿಸಿ ಹರಪನಹಳ್ಳಿ ಪಾಳೆಯಗಾರರು ತಮ್ಮದೇ ಆದ ವಿಶಿಷ್ಟ ಹಾಗೂ ಪ್ರಾದೇಶಿಕ ದೇವಾಲಯ ನಿರ್ಮಾಣ ಶೈಲಿಯನ್ನು ಆರಂಭಿಸಿದರು ಎಂದು ಹೇಳಬಹುದು. ಬಹುತೇಕ ಇಂದಿಗೂ ಗ್ರಾಮಾಂತರ ಪರಿಸರದಲ್ಲಿ ನಿರ್ಮಾಣಗೊಳ್ಳುವ ದೇವಾಲಯಗಳು ಇದೇ ಮಾದರಿ ಲಕ್ಷಣಗಳನ್ನು ಬಿಂಬಿಸುತ್ತವೆ. ಆದ್ದರಿಂದ ಈ ಶೈಲಿಯನ್ನು ಹರಪನಹಳ್ಳಿ ಪಾಳೆಯಗಾರರ ಶೈಲಿ ಎಂದು ಹೇಳಬಹುದಾಗಿದೆ.

ಮುಂದುವರೆದು ನೋಡಲಾಗಿ ದೇವಾಲಯಗಳಿಗೆ ಸಂಬಂಧಿಸಿದಂತೆ ಇತರ ಮಾಹಿತಿ ಈ ರೀತಿ ಕಂಡುಬರುತ್ತದೆ. ಒಮ್ಮೆ ಮೈಲಾರದ ದೇವರ ಧರ್ಮದರ್ಶಿಗಳಾದ ಒಡೆಯರು ಹರಪನಹಳ್ಳಿಯ ಪಾಳೆಯಗಾರರನ್ನು ಸರಿಯಾಗಿ ಉಪಚರಿಸಲಿಲ್ಲವೆಂದು ಕುಪಿತರಾದ ಅರಸ ದಾದೇನಾಯಕ ಹರಪನಹಳ್ಳಿಯ ಪಶ್ಚಿಮಕ್ಕೆ ಒಂದು ಕಿ.ಮೀ. ದೂರದಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ಶ್ರೀ ದೊಡ್ಡ ಮೈಲಾರಲಿಂಗಸ್ವಾಮಿ ಮೂರ್ತಿಯನ್ನು ಸ್ಥಾಪಿಸಿದರು. ಪ್ರತಿ ವರ್ಷ ಭರತ ಹುಣ್ಣಿಮೆಯಲ್ಲಿ ಗೊರವನು ಬಿಲ್ಲು ಏರಿ ಕಾರಣಿಕ ಹೇಳುವುದರೊಂದಿಗೆ ವಿಜೃಂಭಣೆಯಿಂದ ಜಾತ್ರೆ ನಡೆಯುತ್ತದೆ. ಹಾಗೆಯೇ ದಿವಾನ ಹಂಪರಪ್ಪನು ವೀರಭದ್ರದೇವಾಲಯವನ್ನು ನಿರ್ಮಿಸಿದನು. ಅಂದರೆ ದಾದೇನಾಯಕ ವೆಂಕಟೇಶ್ವರ ಮೂರ್ತಿಯನ್ನು ಸ್ಥಾಪಿಸಲು ಕಟ್ಟಿದ್ದ ಖಾಲಿ ಕಟ್ಟಡದಲ್ಲಿ ವೀರಭದ್ರದೇವರ ಮೂರ್ತಿಯನ್ನು ಸ್ಥಾಪಿಸಿದನು. ಪ್ರತಿ ವರ್ಷ ಗೌರಿ ಹುಣ್ಣಿಮೆಯಲ್ಲಿ ರಥೋತ್ಸವ ಅಗ್ನಿಗಳಿಂದ ಈ ದೇವರ ಜಾತ್ರೆ ನಡೆಯುತ್ತದೆ. ಅರಸರು ನೇಮಿಸಿದ ಕೆಲವು ಮಠಗಳ ಸ್ವಾಮಿಗಳು ಈಗಲೂ ಒಂದೊಂದು ಕಾರ್ಯವನ್ನು ನೆರವೇರಿಸುತ್ತಾರೆ. ಸರ್ಕಾರಿ ಲೆಕ್ಕಪತ್ರಗಳಲ್ಲಿ ಈ ದೇವರನ್ನು ಸಬರದ ಶ್ರೀವೀರಭದ್ರೇಶ್ವರನೆಂದು ಉಲ್ಲೇಖವಿದೆ. ದೇವಾಲಯದ ಸುತ್ತಮುತ್ತಲಿನ ಪ್ರದೇಶವನ್ನು ಸಬರದ ಕೇರಿ ಎಂದು ಕರೆಯುತ್ತಾರೆ. ಕ್ರಿ.ಶ.೧೯೭೩ರಲ್ಲಿ ಹೊಸ ಮೂರ್ತಿಯನ್ನು ಪ್ರತಿಷ್ಠಾಪಿಸಿ ಹಳೆಯ ಮೂರ್ತಿಯನ್ನು ಅದರ ತಳದಲ್ಲಿ ಹಾಕಿದ್ದಾರೆ. ಹಂಪರಸಪ್ಪ ಬ್ರಾಹ್ಮಣ (ಬ್ರಾಹ್ಮಣರು ವೀರಭದ್ರಸ್ವಾಮಿಯನ್ನು ಪೂಜಿಸುವುದು ಅಪರೂಪ) ಈ ವಂಶದ ಬ್ರಾಹ್ಮಣರು ಇಂದಿಗೂ ವೀರಭದ್ರದೇವರ ಭಕ್ತರಾಗಿದ್ದಾರೆ. ಇದೊಂದು ವಿಶೇಷವಾಗಿದೆ.

ಹರಪನಹಳ್ಳಿ ಪಾಳೆಯಗಾರರ ಮನೆ ದೇವರು ಉಚ್ಚಂಗೆಮ್ಮನ ಚಿಕ್ಕ ದೇವಾಲಯವನ್ನು ದಾದೇನಾಯಕ ಹರಪನಹಳ್ಳಿಯ ವಾಯುವ್ಯ ದಿಕ್ಕಿನಲ್ಲಿರುವ ಪರ್ವತದ ಮೇಲೆ ನಿರ್ಮಿಸಿದ್ದಾನೆ. ಇದಕ್ಕೆ ಮುಖ್ಯ ಕಾರಣವೆಂದರೆ ತನ್ನ ಪತ್ನಿ ಹೊನ್ನೇನಾಗತಿ ನಿಧನಳಾದಾಗ ಈ ದುಃಖದಲ್ಲಿ ನಾಯಕ ಉಚ್ಚಂಗಿದುರ್ಗಕ್ಕೆ ಹೋಗಲು ಸಾಧ್ಯವಾಗದಿದ್ದರಿಂದ ಇಲ್ಲಿಯೇ ದೇವಾಲಯ ಸ್ಥಾಪಿಸಿದನು. ಇದರಿಂದ ಹರಪನಹಳ್ಳಿ ಮತ್ತು ಅದರ ಸುತ್ತಮುತ್ತಲಿನ ಪರಿಸರದ ಭಕ್ತರಿಗೆ ದೂರ ಪ್ರಯಾಣ ಮಾಡುವ ತೊಂದರೆ ತಪ್ಪಿದಂತಾಯಿತು.

ಮೊದಲ ಬಸವಂತನಾಯಕನು ಹೊಳಲು ಕೋಟೆಗೆ ಸಾಮಂತ ಅರಸನೆಂದು ನೇಮಕ ಮಾಡಿದ ಕುಂಚೂರು ಬಸವನಾಯಕನ ಮೇಲೆ ಹೊಳಲು ಗ್ರಾಮದ ಬ್ರಾಹ್ಮಣರು ಪಿತೂರಿ ಮಾಡಿ ರಾಣಿಗೆ ದೂರು ಕೊಟ್ಟಾಗ ರಾಣಿ ಹರಪನಹಳ್ಳಿಗೆ ಬರುವಂತೆ ಆದೇಶಿಸಿದಳು. ಆದರೆ ಸಂದೇಶ ತೆಗೆದುಕೊಂಡು ಹೋದ ಆಳು ಬಸವನಾಯಕನಿಗೆ ನೀಡದೇ ಇದ್ದುದರಿಂದ ಅವನು ಬರಲಿಲ್ಲ. ಆಗ ರಾಣಿಯೇ ಖುದ್ದಾಗಿ ಸೈನ್ಯದೊಂದಿಗೆ ಬಂದು ಬಸವನಾಯಕನನ್ನು ಸಂಹರಿಸಿ ದೇಹವನ್ನು ತಂದು ಕುಂಚೂರು ಕೋಟೆಯ ಬಳಿ ಸಮಾಧಿ ಮಾಡಿ ಅದಕ್ಕೆ ಒಂದು ಕಟ್ಟೆ ಕಟ್ಟಿಸಿ ಅದರ ಮೇಲೆ ಒಂದು ಬಸವಣ್ಣನ ವಿಗ್ರಹವನ್ನು ಸ್ಥಾಪಿಸಿ ದೇವಾಲಯವನ್ನು ನಿರ್ಮಿಸಿದಳು. ಈಗಲೂ ಕುಂಚೂರು ಗ್ರಾಮದ ಪೇಟೆಯೊಳಗೆ ಈ ದೇವಾಲಯವನ್ನು ಕಾಣಬಹುದು. ಇದಕ್ಕೆ 'ಪೇಟೆ ಬಸವಣ್ಣ'ನೆಂದು ಕರೆಯುತ್ತಾರೆ.

ಹಾಗೆಯೇ ಮತ್ತೊಬ್ಬ ಸಾಮಂತ ಅರಸ ತಂಬ್ರಹಳ್ಳಿ ಓಬರನಾಯಕ ತಂಬ್ರಹಳ್ಳಿಯಿಂದ ೪ ಕಿ.ಮೀ. ದೂರದಲ್ಲಿ ರಂಗನಾಥ ದೇವಾಲಯವನ್ನು ನಿರ್ಮಿಸಿದನೆಂದು ಹೇಳಲಾಗಿದೆ. ಈ ದೇವರು ಉದ್ಭವ ಮೂರ್ತಿಯೆಂದು ಕರೆಯುವರು. ನಾರಾಯಣ/ರಂಗನಾಥ ಶಿಲ್ಪವು ಸರ್ಪದ ಮೇಲೆ ಮಲಗಿದಂತಿದೆ. ಇಲ್ಲಿಯೇ ಶಿವಲಿಂಗವೂ ಇದೆ. ಈ ದೇವಾಲಯಕ್ಕೆ ಹೊಂದಿಕೊಂಡಂತೆ ಪಾವಟಿಗೆಗಳ ಒಂದು ಬಾವಿಯಿದ್ದು ಇದನ್ನು ಓಬರನಾಯಕನೇ ನಿರ್ಮಿಸಿದನೆಂದು ಹೇಳಲಾಗಿದೆ. ಪ್ರತಿ ವರ್ಷ ಮಾರ್ಚ್ ತಿಂಗಳಲ್ಲಿ ರಥೋತ್ಸವ ನಡೆಯುತ್ತದೆ. ಕುರೇದಗಡ್ಡಿ ಭರಮನಗೌಡ ಮತ್ತೊಬ್ಬ ಸಾಮಂತ ದೊರೆಯಾಗಿದ್ದು ದೊರೆ ಸೋಮಶೇಖರ ನಾಯಕನಿಂದ ಪಡೆದ ಮೀರಾಕೊರನಹಳ್ಳಿ (ಹೂವಿನಹಡಗಲಿ ತಾಲ್ಲೂಕು) ಗ್ರಾಮದಲ್ಲಿ ಭರಮ ದೇವರ ದೇವಾಲಯ ನಿರ್ಮಿಸಿದ್ದಾನೆ.

ಬಾಗಳಿ ಪಾಳೆಯಗಾರರ ಸಾಮಂತನಾಗಿದ್ದ ರಂಗಣ್ಣನಾಯಕನಿಗೆ ಸೇರಿದ್ದ ಕೋಲಹಳ್ಳಿಯ ಅರಮನೆ ಇಂದು ಪವಾಡ ಪುರುಷ, ವೀರಶೈವ ಶಿವಯೋಗಿ ಮದ್ದಾನೇಶ್ವರರ ಮಠ (ದೇವಾಲಯ)ವಾಗಿದೆ. ಇಲ್ಲಿಯೇ ಅವರ ಮಗ ಪವಾಡಪುರುಷ ಗೋಣಿ ಬಸವೇಶ್ವರರ ಗದ್ದುಗೆ ಹೊರಭಾಗದಲ್ಲಿದ್ದು ಅದಕ್ಕೆ ದೇವಾಲಯ ನಿರ್ಮಿಸಿದ್ದಾರೆ. ಮದ್ದಾನೇಶ್ವರ ದೇವಾಲಯದ ಪ್ರವೇಶದ್ವಾರವನ್ನು ದಾಟಿ ಒಳ ಆವರಣಕ್ಕೆ ಬಂದರೆ ಮೂರು ಹಂತದ ಮಹಾದ್ವಾರವಿದ್ದು ಚಿತ್ರದುರ್ಗದ ಶ್ರೀಮುರುಘರಾಜೇಂದ್ರ ಜಗದ್ಗುರುಗಳ ಬೃಹನ್ಮಠದ ಆನೆ ಬಾಗಿಲಿನಂತೆಯೇ ಇದೆ. ಬಾಗಿಲ ಮುಂದೆ ಮೆಟ್ಟಿಲಿನ ಇಕ್ಕೆಲಗಳಲ್ಲಿ ಸಿಂಹ ಕೈಪಿಡಿಗಳಿವೆ. ಮಹಾದ್ವಾರದಲ್ಲಿ ಕೊಠಡಿಗಳು ಹಾಗೂ ಉಪ್ಪರಿಗೆಗೆ ಪಾವಟಿಗೆಗಳಿವೆ. ವಿಜಯನಗರದ ಅರಸರ ನಂತರ ಸುಮಾರು ೧೬ನೇ ಶತಮಾನದಲ್ಲಿ ನಿರ್ಮಿತವಾದಂತಿದೆ.

ಕೊಟ್ಟೂರಿನ ಈಗಿನ ಹಿರೇಮಠ ಹಿಂದೆ ಶ್ರೀವೀರಭದ್ರೇಶ್ವರ ದೇವಾಲಯವಾಗಿತ್ತು. ಈಗ ಕೊಟ್ಟೂರು ಬಸವೇಶ್ವರರ ಗದ್ದುಗೆಯ ಮೇಲಿನ ಮೂರ್ತಿಯ ಸ್ಥಳದಲ್ಲಿ ಒಂದೊಂದು ಗರ್ಭಗುಡಿ

ಇದೆ. ಈ ಗರ್ಭಗುಡಿಯ ಮೂಲೆಯಲ್ಲಿ ಸುಮಾರು ಮೂರೂವರೆ ಅಡಿ ಎತ್ತರದ ಗಟ್ಟಿಶಿಲೆಯ ಶ್ರೀವೀರಭದ್ರನ ಮೂರ್ತಿಯಿದ್ದು ಕೊಟ್ಟೂರು ಬಸವೇಶ್ವರ ಈ ದೇವಾಲಯದಲ್ಲಿ ನೆಲೆಸಿದ ನಂತರ ಈ ದೇವಾಲಯ ಹಿರೇಮಠವಾಗಿ ಪರಿವರ್ತನೆಗೊಂಡು ವೀರಭದ್ರೇಶ್ವರ ಮೂರ್ತಿ ಮೂಲೆಗುಂಪಾಗಿ ಕತ್ತಲೆ ಹೆಚ್ಚಾಗಿರುವುದರಿಂದ ಮೂರ್ತಿ ಸ್ಪಷ್ಟವಾಗಿ ಕಾಣುವುದಿಲ್ಲ. ಹಾಗಾಗಿ ಇಲ್ಲಿಗೆ ಹೆಚ್ಚಿನ ಪ್ರವೇಶವಿರುವುದಿಲ್ಲ. ಹಾಗೆಯೇ ಕೊಟ್ಟೂರಿನ ಮುಖ್ಯ ರಸ್ತೆಯ ಅಂಚಿನಲ್ಲಿರುವ ಶ್ರೀಸೋಮಲಿಂಗೇಶ್ವರ ದೇವಾಲಯ ಪುರಾತನವಾಗಿದ್ದು ಸಂಪೂರ್ಣ ಜೀರ್ಣಾವಸ್ಥೆಯಲ್ಲಿದೆ. ಇದು ಕೂಡ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಅದರ ಅಳಿದುಳಿದ ವಾಸ್ತು ರಚನೆಗಳಿಂದ ಹೇಳಬಹುದು ಯಾವುದೇ ಕೆತ್ತನೆಗಳಿಲ್ಲದ ಶಿಲಾ ದೇವಾಲಯದಲ್ಲಿ ಒಳಭಾಗ ಮಾತ್ರ ತಕ್ಕಮಟ್ಟಿಗೆ ಚೆನ್ನಾಗಿದ್ದು ಇದರ ಜೀರ್ಣೋದ್ಧಾರ ಕಾರ್ಯ ಪ್ರಯತ್ನಗಳೂ ನಡೆದಿವೆ. ಹರಪನಹಳ್ಳಿ ಪಾಳೆಯಗಾರರು ಇಂತಹ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿರುವುದು ಶಾಸನಗಳಿಂದ ಕಂಡು ಬರುತ್ತದೆ.

ಉಜ್ಜನಿಯ ಶ್ರೀಮರುಳಸಿದ್ಧೇಶ್ವರ ದೇವಾಲಯ ಸುಮಾರು ೧೨ನೆಯ ಶತಮಾನಕ್ಕಿಂತಲೂ ಹಿಂದಿನದ್ದೆಂದು ಹೇಳಿದರೂ ನಂತರದಲ್ಲಿ ಹೊಯ್ಸಳರು, ವಿಜಯನಗರದ ಅರಸರು ಹಾಗೂ ಪಾಳೆಯಗಾರರ ಕಾಲದಲ್ಲಿ ವಿವಿಧ ಭಾಗಗಳು ಸೇರಿಸಲ್ಪಟ್ಟು ವಿಸ್ತಾರವಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಇದೊಂದು ಪಂಚಕೂಟ ದೇವಾಲಯವಾಗಿದ್ದು ಐದು ಭಾಗಗಳಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ, ಗೋಪುರ, ವಿಶಾಲವಾದ ಪ್ರಾಕಾರಗಳಿಂದ ಕೂಡಿದೆ. ಆದರೆ ಈ ಕಲಾತ್ಮಕ ದೇವಾಲಯ ನಿರ್ದಿಷ್ಟವಾಗಿ ಯಾರ ಕಾಲದಲ್ಲಿ ಕಟ್ಟಲ್ಪಟ್ಟಿತ್ತೆಂದು ಹೇಳಲಾಗಿಲ್ಲ. ಮೊದಲಿಗೆ ಈ ದೇವಾಲಯ ಮಲ್ಲಿಕಾರ್ಜುನ ದೇವಾಲಯವಾಗಿತ್ತೆಂದು ಶಾಸನಗಳಲ್ಲಿ ಉಲ್ಲೇಖವಿದೆ.

ಹರಪನಹಳ್ಳಿ ಪಾಳೆಯಗಾರ ಮುಮ್ಮಡಿ ಬಸವಂತಪ್ಪನಾಯಕ ಕ್ರಿ.ಶ.೧೭೪೯ರಲ್ಲಿ ಉಚ್ಚಂಗೆಮ್ಮ ದೇವಿಗೆ ಗಂಟೆಯನ್ನು ಮಾಡಿಸಿ ಶಾಸನವನ್ನು ಹಾಕಿಸಿದ್ದಾನೆ. ಈ ಶಾಸನದಲ್ಲಿ (ದೇವಿಯ ಗುಡಿಯ ಬಲಭಾಗದ ಗಂಟೆ ಶಾಸನ) ರಂಗಣ್ಣನಾಯಕನ ಉಲ್ಲೇಖವಿದೆ. ಹಾಗೆಯೇ ಕ್ರಿ.ಶ.೨೭.೦೭.೧೭೧೨ರಲ್ಲಿ ಉಜ್ಜನಿ ಸಿದ್ಧೇಶ್ವರ ದೇವರಿಗೆ ಒಂದು ದೊಡ್ಡ ಘಂಟೆಯನ್ನು ಮಾಡಿಸಿ ಅದರ ಮೇಲೆ ಶಾಸನ ಹಾಕಿಸಿದ್ದಾನೆ. ಇದು ಒಂದು ಅಡಿ ಎತ್ತರ, ೩೦ ಇಂಚು ಸುತ್ತಳತೆ, ೩೦ ಕೆ.ಜಿ.ತೂಕವಿದೆ. ಇದು ಸಿದ್ಧೇಶ್ವರ ದೇವಾಲಯದ ಪಶ್ಚಿಮದ ದ್ವಾರದಲ್ಲಿದೆ.

ಹೀಗೆ ಕೆಲವು ದೇವಾಲಯಗಳ ನಿರ್ಮಾಣ ಕಾರ್ಯವನ್ನು ಕೈಗೊಂಡು ವಿಜಯನಗರೋತ್ತರ ಕಾಲದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ತಮ್ಮದೇ ಆದ ಪ್ರಾದೇಶಿಕ ಕೊಡುಗೆಯನ್ನು ನೀಡಿದ್ದಾರೆ. ಈ ವಾಸ್ತು ಲಕ್ಷಣಗಳು ಇಂದಿಗೂ ಮುಂದುವರೆದಿವೆ.

### ಮಠಗಳು

ಭಾರತದ ಧಾರ್ಮಿಕ ವ್ಯವಸ್ಥೆಯಲ್ಲಿ ಹಾಗೂ ವಾಸ್ತುಶಿಲ್ಪ ಪರಂಪರೆಯಲ್ಲಿ ಮಠಗಳು ಬಹುಮುಖ್ಯವಾಗಿವೆ. ಪ್ರಾಚೀನ ಕಾಲದಿಂದಲೂ ಅನೇಕ ರಾಜಮನೆತನಗಳು ತಮ್ಮ ಗುರುವರ್ಯರಿಗೆ ಮಠಗಳನ್ನು ಕಟ್ಟಿಸಿಕೊಟ್ಟು ಧರ್ಮದ ಬೆಳವಣಿಗೆಗೆ ಕಾರಣೀಭೂತರಾಗಿದ್ದಾರೆ. ಈ ಮಠಗಳು ಒಂದು ಕಾಲಕ್ಕೆ ರಾಜಕೀಯ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿ ಪ್ರಮುಖ ಪಾತ್ರವಹಿಸಿರುವುದನ್ನು ಕಾಣಬಹುದಾಗಿದೆ. ಇಂತಹ ಮಠಗಳಿಗೆ ಅನೇಕ ರಾಜ ಮಹಾರಾಜರು, ಸಾಮಂತ ಅರಸರು, ಅಧಿಕಾರಿಗಳು ಹಾಗೂ ಸಾಮಾನ್ಯ ಜನತೆ ದಾನದತ್ತಿಗಳನ್ನು ನೀಡಿರುವುದನ್ನು ಶಾಸನಗಳು ಹಾಗೂ ಸಾಹಿತ್ಯಿಕ ಗ್ರಂಥಗಳ ಮೂಲಕ ತಿಳಿಯಬಹುದಾಗಿದೆ. ಹಾಗೆಯೇ ವಾಸ್ತುಶಿಲ್ಪದ ದೃಷ್ಟಿಯಿಂದಲೂ ಪ್ರಮುಖ ಸ್ಥಾನ ಪಡೆದಿವೆ. ಅಂದಿನಿಂದ ಇಂದಿನವರೆಗೂ ಅನೇಕ ಮಠಗಳು ಸ್ಥಾಪನೆಯಾಗಿ ಮುಂದುವರೆದಿರುವುದನ್ನು ನೋಡಬಹುದಾಗಿದೆ.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿಯೂ ಕೆಲವು ಮಠಗಳು ಸ್ಥಾಪನೆಯಾಗಿ ಅವುಗಳಿಗೆ ದಾನದತ್ತಿ ನೀಡಿರುವುದನ್ನು ಶಾಸನಗಳಿಂದ ತಿಳಿಯಲಾಗಿದೆ. ಹರಪನಹಳ್ಳಿಯಲ್ಲಿ ೧೦೧ ಮಠಗಳಿದ್ದವೆಂದು ತಿಳಿದು ಬರುತ್ತದೆ. ಬಾಗಳಿಯಿಂದ ಉತ್ತರಕ್ಕೆ ೮ ಕಿ.ಮೀ. ದೂರದಲ್ಲಿರುವ ಕೂಲಹಳ್ಳಿಯಲ್ಲಿ ಗೋಣಿಬಸವೇಶ್ವರ ಮತ್ತು ಮದ್ದಾನೇಶ್ವರ ಎಂಬ ಎರಡು ಮಠಗಳಿದ್ದು ಹರಪನಹಳ್ಳಿ ಪಾಳೆಯಗಾರರ ಕಾಲದ ಮಠದ ಪರಂಪರೆಗೆ ಪ್ರಮುಖ ಉದಾಹರಣೆಗಳಾಗಿವೆ. ಇವುಗಳಲ್ಲಿ ಮದ್ದಾನೇಶ್ವರ ಮಠವು ಪ್ರಾಚೀನ ಕಾಲದ ಕಟ್ಟಡವಾಗಿದ್ದು ವಿಶಾಲವಾಗಿದೆ. ಪೂರ್ವ ಪಶ್ಚಿಮವಾಗಿ ಇನ್ನೂರ ಎಂಭತ್ತು ಅಡಿ ಅಗಲ, ಉತ್ತರ-ದಕ್ಷಿಣವಾಗಿ ಐನೂರ ಹನ್ನೊಂದು ಅಡಿಗಳ ಸುತ್ತಳತೆಯ ಪ್ರಾಂಗಣವನ್ನು ಹೊಂದಿದೆ. ಹೊರಗಡೆ ಸುತ್ತಲೂ ಎರಡು ಕಲ್ಲುಗೋಡೆಗಳಿದ್ದು ದಕ್ಷಿಣದ ಕೊನೆಯ ಆವರಣಗೋಡೆಯ ಹಿಂಭಾಗದಲ್ಲಿ ನಾಲ್ಕು ಗೋಡೆಗಳ ಸಾಲುಗಳಿವೆ. ಪೂರ್ವ-ಪಶ್ಚಿಮವಾಗಿ ನೂರತೊಂಭತ್ತೆಂಟು ಅಡಿಗಳು ಉತ್ತರ-ದಕ್ಷಿಣವಾಗಿ ನೂರರವತ್ತು ಅಡಿಗಳ ಖಾಲಿ ಸ್ಥಳವಿದೆ.

ಮದ್ದಾನೇಶ್ವರರ ಮಠಕ್ಕೆ ಮೂರು ದ್ವಾರಗಳಿದ್ದು ಎರಡನೆಯ ದ್ವಾರದ ಇಕ್ಕೆಲಗಳಲ್ಲಿ ಸೋಪಾನಗಳ ಬಲಭಾಗಕ್ಕೆ ಆನೆ, ಎಡಭಾಗದಲ್ಲಿ ಸಿಂಹದ ಶಿಲ್ಪಗಳ ಕೈಪಿಡಿಗಳಿವೆ. ಮೊದಲ ದ್ವಾರವು ಸರಳವಾಗಿವೆ. ಎರಡನೆಯ ದ್ವಾರದ ಮೇಲ್ಭಾಗದಲ್ಲಿ ಆಂಜನೇಯ ಶಿಲ್ಪವಿದ್ದು ಅಂತಸ್ತುಗಳನ್ನೊಳಗೊಂಡ ಮಂಟಪವಿದೆ. ಎರಡು ಮತ್ತು ಮೂರನೆಯ ದ್ವಾರಗಳ ನಡುವೆ ಕಟ್ಟೆ/ಕಟಾಂಜನಗಳಿವೆ. ಇವುಗಳಲ್ಲಿ ಕೆಲವು ಉಬ್ಬುಶಿಲ್ಪಗಳು ಕಂಡು ಬರುತ್ತವೆ. ನಂತರ ಮಠವನ್ನು ಪ್ರವೇಶಿಸಿದರೆ ಎಡ ಮತ್ತು ಬಲ ಭಾಗಕ್ಕೆ ಎರಡು ವಿಶಾಲ ಪಡಶಾಲೆಗಳಿವೆ. ಗರ್ಭಗೃಹದಲ್ಲಿ ಪೀಠದ ಮೇಲೆ ಮದ್ದಾನೇಶ್ವರರ ಮೂರ್ತಿಯಿದೆ. ಈ ಮಠದಲ್ಲಿ ನಾಲ್ಕು ಗುಹೆಗಳಿದ್ದು ಕೆಲವುಗಳಲ್ಲಿ ವಾಡೇವುಗಳು ಅವುಗಳ ಭಿತ್ತಿಯ ಮೇಲೆ ಸುಂದರ ಆಂಜನೇಯ, ನಾಗ ಮುಂತಾದ ಉಬ್ಬುಶಿಲ್ಪಗಳು

ಕಂಡು ಬರುತ್ತವೆ. ಕೆಲವು ಗುಹೆಗಳಲ್ಲಿ ಬಾವಿಗಳಿವೆ. ಮಠದ ಮೇಲ್ಭಾಗದಲ್ಲಿ ಒಂದು ಕಲ್ಲಿನಿಂದ ನಿರ್ಮಿಸಿದ ಹೂಡೇವು ಇದೆ.

ಪಂಚಗಣಾಧೀಶ್ವರರಲ್ಲಿ ಕೋಲಶಾಂತೇಶ್ವರಸ್ವಾಮಿ, ಕೆಂಪಯ್ಯಸ್ವಾಮಿ, ಕೊಟ್ಟೂರೇಶ್ವರ ಸ್ವಾಮಿ, ತಿಪ್ಪೇರುದ್ರಸ್ವಾಮಿ, ಮದ್ದಾನೇಶ್ವರಸ್ವಾಮಿ ಕೆಂಪಯ್ಯಸ್ವಾಮಿಗಳು ಉಳಿದ ನಾಲ್ಕು ಜನ ಗಣಾಧೀಶ್ವರರೊಂದಿಗೆ ದೇಶ ಸಂಚಾರ ಮಾಡುತ್ತಾ ವೀರಶೈವ/ಶೈವಧರ್ಮವನ್ನು ಪ್ರಚಾರ ಮಾಡುತ್ತಾ ಮಹಾಶಿವಶರಣರಾಗಿ, ಶಿವಶರಣರ ತತ್ವಗಳನ್ನು ನಾಡಿನಾದ್ಯಂತ ಪ್ರಸ್ತುತಗೊಳಿಸಿದರು. ಒಮ್ಮೆ ಕೆಂಪಯ್ಯಸ್ವಾಮಿಗಳು ರಾಯದುರ್ಗದಿಂದ ನಾಯಕನಹಟ್ಟಿ ಮೂಲಕ ಕೂಲಹಳ್ಳಿಗೆ ಬಂದು ಅಲ್ಲಿ ಮದ್ದಾನೇಶ್ವರರನ್ನು ಕಂಡು ಆಶೀರ್ವಾದ ಪಡೆದು ಬಾಗಳಿಯ ಕಲ್ಲೇಶ್ವರನ ದರ್ಶನ ಪಡೆದು ಹರಪನಹಳ್ಳಿಗೆ ಬಂದು ಇದೇ ನನ್ನ ಕಾರ್ಯಕ್ಕೆ ಸೂಕ್ತ ಸ್ಥಳವೆಂದು ನಿರ್ಧರಿಸಿ ಅಲ್ಲಿಯೇ ನೆಲೆ ನಿಂತರು. ಈ ವೇಳೆಗಾಗಲೇ ಲೋಕ ಪ್ರಸಿದ್ಧರಾಗಿದ್ದ ಶ್ರೀಗುರುಕೊಟ್ಟೂರೇಶ್ವರರ ಅಪ್ಪಣೆಯ ಮೇರೆಗೆ ಊರಿನ ಭಕ್ತರ ಹಾಗೂ ಪಾಳೆಯಗಾರರ ಸಹಕಾರದೊಂದಿಗೆ ಹರಪನಹಳ್ಳಿಯ ಮೇಗಳಪೇಟೆಯಲ್ಲಿ ಮಠ ಕಟ್ಟಿದರು. ಇದು ಕೆಂಪಯ್ಯಸ್ವಾಮಿಗಳ ಮಠವಾಯಿತು. ಮುಂದೆ ಇವರು ತಮ್ಮ ಧಾರ್ಮಿಕ ಚಿಂತನೆಗಳಿಂದ ಹರಪನಹಳ್ಳಿಯವರಿಗೆ ಆತ್ಮೀಯವಾಗಿ, ಆರಾಧ್ಯಗುರುಗಳೂ ಆದರು. ಇಲ್ಲಿಯೇ ಇವರು ಜೀವಂತ ಸಮಾಧಿ ಹೋಗುತ್ತಾರೆ. ಭಕ್ತರು ಇವರ ಸಮಾಧಿ ಸ್ಥಳದಲ್ಲಿ ಗದ್ದುಗೆ ಮಂಟಪ ನಿರ್ಮಿಸಿದ್ದಾರೆ. ಆದರೆ ಮೂಲ ಮಠ ಈಗ ಉಳಿದಿಲ್ಲ. ಯಾವುದೇ ಶಿಲ್ಪಕಲಾ ಕೆತ್ತನೆಗಳಿಲ್ಲದ ಕಲ್ಲುಕಂಬಗಳಿಂದ ಕೂಡಿದ ಮುಖಮಂಟಪ, ಜಗುಲಿ, ಜಗುಲಿಯ ಮೇಲೆ ಗರ್ಭಗುಡಿಯಲ್ಲಿ ಸ್ವಾಮಿಯ ಮೂರ್ತಿ ಇದೆ. ಪ್ರತಿವರ್ಷ ಶಿವರಾತ್ರಿ ಕಾರ್ತಿಕಮಾಸದಲ್ಲಿ ಕೆಂಪಯ್ಯಸ್ವಾಮಿಗಳ ಉತ್ಸವ ಆಚರಿಸುತ್ತಾರೆ. ಆಗ ಮೂಲ ಗದ್ದುಗೆಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಹಿಂದೆ ಪ್ರತಿ ವರ್ಷ ಕಾರಹುಣ್ಣಿಮೆಗೆ ಜಾತ್ರೆ ನಡೆಯುತ್ತಿತ್ತು. ಆರೆ ಎಂಭತ್ತು ವರ್ಷಗಳ ಹಿಂದೆ ಜಾತ್ರೆ ನಿಲ್ಲಿಸಿ ಬಿಟ್ಟಿದ್ದಾರೆಂದು ಹೇಳುತ್ತಾರೆ.

ಹರಪನಹಳ್ಳಿಯಲ್ಲಿ ಮೊದಲ ಸೋಮಶೇಖರನಾಯಕನ ಕಾಲದಲ್ಲಿ ಅರವತ್ತು ಮಠಗಳಿದ್ದವೆಂದು ತಿಳಿದು ಬಂದಿದೆ. ಇದರಲ್ಲಿ ಪ್ರಮುಖವಾದವುಗಳೆಂದರೆ ಗುರುಪಾದದೇವರಮಠ, ಕಲ್ಯಾಣಪ್ಪನವರಮಠ, ಹಲ್ಮರಿಮಠ, ಕಾಶಿಮಠ, ಚಾಕಿಮಠ, ಗದಿಗೆಮಠ, ಸುರಪಾಲ್ ಮಠ, ತೆಗ್ಗಿನಮಠ, ಕೆಂಪಯ್ಯಸ್ವಾಮಿಗಳ ಮಠ. ಈಗ ಇವುಗಳಲ್ಲಿ ತೆಗ್ಗಿನಮಠ ಮಾತ್ರ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಅತ್ಯಂತ ಪ್ರಖ್ಯಾತವಾಗಿದೆ. ಶ್ರೀ ಷ.ಬ್ರ. ಚಂದ್ರಮೌಳೇಶ್ವರ ಮಹಾಸ್ವಾಮಿಗಳವರು ಮಠವನ್ನು ತುಂಬಾ ಅಭಿವೃದ್ಧಿಗೊಳಿಸಿ ಸಂಪದ್ಭರಿತವನ್ನಾಗಿಸಿದ್ದಾರೆ. ವಿದ್ಯಾಕ್ಷೇತ್ರಕ್ಕೆ ಈ ಮಠ ಅಪಾರ ಸೇವೆಯನ್ನು ಸಲ್ಲಿಸುತ್ತಿದೆ.

ತ್ರಿಕಾಲ ಶಿವಪೂಜೆಗೆಂದು ಮದ್ದಾನೇಶ್ವರರು ಬಾಗಳಿಯ ಕೆರೆಯಂಚಿನ ಹೂದೋಟಗಳಿಗೆ ಹೂ ತರುವ ಕಾಯಕ ಮಾಡುತ್ತಿದ್ದಾಗ ಇವರ ಹಾಗೆ ಹೂ ತರಲು ಬರುತ್ತಿದ್ದ ಚಿಗಟೇರಿಯನ್ನಾಳುತ್ತಿದ್ದ ಶಿವನಪ್ಪ (ಪಾಳೆಯಗಾರರ ಸೋದರ ಸಂಬಂಧಿ)ನ ಸಂಬಂಧಿಕಳಾದ ಕನಕವ್ವ ನಾಗತಿಯನ್ನು ನೋಡಿ ಮನಸೋತು ವಿವಾಹವಾಗುತ್ತಾರೆ. ಆಗ ಪಾಳೆಯಗಾರರು ತಾವು ಹೆಚ್ಚಾಗಿ ಉಪಯೋಗಿಸುತ್ತಿದ್ದ ಕೂಲಹಳ್ಳಿಯಲ್ಲಿದ್ದ ದೊಡ್ಡ ಅರಮನೆಯನ್ನು ಕನಕವ್ವನಾಗತಿಗೆ ಬಳುವಳಿಯಾಗಿ ನೀಡಿದಾಗ ಕೊಟ್ಟೂರು ಬಸವೇಶ್ವರರ ಅಪ್ಪಣೆಯಂತೆ ಮದ್ದಾನೇಶ್ವರರು ಕೂಲಹಳ್ಳಿಯಲ್ಲೇ ನೆಲೆಸುತ್ತಾರೆ. ಕೂಲಹಳ್ಳಿ ಅರಮನೆ ನಂತರ ಮದ್ದಾನೇಶ್ವರರ ಮಠವಾಯಿತು. ಅಂದಿನ ಅರಮನೆ ಇಂದು ಮಠವಾಗಿ ಸುಮಾರು ನೂರಾರು ಎಕರೆಯ ವಿಸ್ತೀರ್ಣದಲ್ಲಿ ಆವರಿಸಿದೆ. ಮಠದ ಸುತ್ತ ಹಾಳಾಗಿರುವ ಕೋಟೆ ಗೋಡೆಯಿದೆ. ಚಾವಣಿಯಿಲ್ಲದ ವಿಶಾಲ ಒಳಾಂಗಣದಲ್ಲಿ ಕಣ್ಮನ ಸೆಳೆಯುವ ಸುಂದರ ಶಿಲ್ಪಗಳಿವೆ. ಒಳಗಡೆ ವಿಶಾಲವಾದ ಹಜಾರವಿದ್ದು ಸುಮಾರು ಅರವತ್ತು ಬೃಹತ್ ಶಿಲಾಸ್ತಂಭಗಳಿವೆ. ಇಕ್ಕೆಲಗಳಲ್ಲಿ ಜಗುಲಿಗಳಿದ್ದು ಇವೆಲ್ಲವೂ ಸುಭದ್ರವಾಗಿವೆ. ಈ ಮಠವನ್ನು ಹಿರೇಮಠವೆಂದು ಕರೆಯಲಾಗಿದೆ. ಮಹಾದ್ವಾರದಲ್ಲಿರುವ ಉಪ್ಪರಿಗೆಗೆ ಪಾವಟಿಗೆಗಳಿವೆ. ಈ ದ್ವಾರ ಸುಮಾರು ಐವತ್ತು ಅಡಿ ಎತ್ತರವಿದ್ದು ಪೂರ್ಣಗೊಂಡಿಲ್ಲ. ಒಟ್ಟಾರೆ ಈ ಮಠ ೩೦೧ ಕಂಬಗಳಿಂದ ಕೂಡಿದ್ದು ಬೃಹತ್ ಮಠವಾಗಿದ್ದು ಕಲ್ಲಿನಗೋಡೆ ಮೇಲೆ ಹನ್ನೊಂದು ಚಿಕ್ಕ ಗೂಡುಗೋಪುರಗಳು, ಚಾವಣಿಯ ಮೇಲೆ ದುಂಡಾಕೃತಿಯ ಬುರುಜು ಹೊಂದಿದ್ದು ಸಂಪೂರ್ಣ ಅದ್ಭುತ ತಂತ್ರಜ್ಞಾನ ಕುಶಲತೆ ಹೊಂದಿದೆ.

ಕೊಟ್ಟೂರಿನ ಕೊಟ್ಟೂರು ಬಸವೇಶ್ವರರ ಮಠವು ಈ ಪಾಳೆಯಗಾರರ ಒಂದು ಅದ್ಭುತ ನಿರ್ಮಾಣಗಳಲ್ಲಿ ಒಂದಾಗಿದೆ. ಈ ಮಠಕ್ಕೆ ಹಿರೇಮಠ ಹಾಗೂ ದರ್ಬಾರ್ ಮಠವೆಂದೂ ಕರೆಯಲಾಗಿದೆ. ಕೊಟ್ಟೂರಿನಲ್ಲಿ ಮೂರ್ಕಲ್ಲು ಮಠ, ತೊಟ್ಟಿಲುಮಠ, ಹಿರೇಮಠ ಹಾಗೂ ಗಚ್ಚಿನಮಠಗಳಿದ್ದು, ಹಿರೇಮಠ ಅತ್ಯಂತ ಪ್ರಸಿದ್ಧಿಯಾಗಿದೆ. ಶ್ರೀಗುರುಕೊಟ್ಟೂರು ಬಸವೇಶ್ವರರು ಪಂಚಗಣಾಧೀಶ್ವರರಲ್ಲಿ ಒಬ್ಬರಾಗಿದ್ದು ತಮ್ಮ ವಾಸದ ನೆಲೆಯನ್ನಾಗಿಸಿಕೊಂಡ ಸ್ಥಳವೇ 'ಹಿರೇಮಠ'. ಇದು ಕ್ರಿ.ಶ.೧೫-೧೬ನೆಯ ಶತಮಾನದಲ್ಲಿ ನಿರ್ಮಾಣವಾಗಿದ್ದು ಕೊಟ್ಟೂರು ಬಸವೇಶ್ವರರು ಇಲ್ಲಿ ನೆಲೆಸುವ ಮೊದಲು ಇದು ಶ್ರೀವೀರಭದ್ರೇಶ್ವರ ದೇವಾಲಯವಾಗಿತ್ತೆಂದು ತಿಳಿದು ಬರುತ್ತದೆ. ಈ ಮಠವನ್ನು ದರ್ಬಾರ್ ಮಠವೆಂದೂ ಕರೆಯಲಾಗಿದೆ. ಕಾರಣ ಹರಪನಹಳ್ಳಿ ಪಾಳೆಯಗಾರರು ಶ್ರೀಕೊಟ್ಟೂರು ಬಸವೇಶ್ವರರನ್ನು ತಮ್ಮ ಆರಾಧ್ಯ ದೇವರೆಂದು, ರಾಜಗುರುಗಳನ್ನಾಗಿಸಿಕೊಂಡು ಇವರಲ್ಲಿ ಇವರ ಪವಾಡಗಳಲ್ಲಿ ಅತ್ಯಂತ ಭಕ್ತಿ ಹಾಗೂ ನಂಬಿಕೆಗಳನ್ನು ಇಟ್ಟುಕೊಂಡಿದ್ದರು. ಹರಪನಹಳ್ಳಿ ಪಾಳೆಯಗಾರರು ಒಮ್ಮೆ ಕಷ್ಟಕಾಲ ಬಂದಾಗ ಸಂಸ್ಥಾನದ ಆಡಳಿತವನ್ನು ಸ್ವಲ್ಪಕಾಲ ನಡೆಸಿ ಕಾಪಾಡಬೇಕೆಂದು ಗುರುಗಳಲ್ಲಿ ಕೇಳಿಕೊಂಡಾಗ ಅದಕ್ಕೆ ಒಪ್ಪಿದ ಸ್ವಾಮಿಗಳು ತಮ್ಮ ಹಿರೇಮಠದಲ್ಲಿಯೇ 'ದರ್ಬಾರ್' ನಡೆಸಿ ರಾಜ್ಯದ ಎಲ್ಲಾ ಕಾರ್ಯಗಳನ್ನು ಧಾರ್ಮಿಕ ಚಟುವಟಿಕೆಗಳನ್ನು ದಕ್ಷತೆಯಿಂದ

ನಿರ್ವಹಿಸಿ ರಾಜಕಾರಣವನ್ನು ನಡೆಸಬಲ್ಲ ರಾಜಕೀಯ ಮುತ್ಸದ್ದಿಗಳೆಸಿಕೊಂಡರು. ಅಂದಿನಿಂದ ಈ ಮಠಕ್ಕೆ ದರ್ಬಾರ್ ಮಠವೆಂದೂ ಕರೆಯಲಾಗಿದೆ. ಅಲ್ಲದೆ ಅಂದಿನಿಂದ ಇಲ್ಲಿಯವರೆಗೂ ಕೊಟ್ಟೂರು ಮಠಗಳಿಗೆ ಸಂಬಂಧಿಸಿದ ಧಾರ್ಮಿಕ ಸಭೆಗಳು, ತೀರ್ಮಾನಗಳು ಈ ಮಠದಲ್ಲಿಯೇ ನಡೆಯುತ್ತವೆ.

ಹಿರೇಮಠ ವಿಜಯನಗರದ ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿದ್ದು ಮುಖಮಂಟಪ, ಪ್ರವೇಶದ್ವಾರ, ಸಭಾಮಂಟಪ, ಗರ್ಭಗುಡಿ, ಗೋಪುರಗಳನ್ನು ಹೊಂದಿದೆ. ಮುಖಮಂಟಪ ಐದು ಭಾಗಗಳನ್ನು ಹೊಂದಿದ್ದು ಎತ್ತರದ ಬೋದಿಗೇಯ ಮೇಲೆ ಸುಂದರ ಅಲಂಕರಣೆ ಒಂಭತ್ತು ಚಿಕ್ಕ-ಚಿಕ್ಕ ಗೂಡು ಮಂಟಪಗಳಲ್ಲಿ ವಿಘ್ನೇಶ್ವರ, ಗಜಲಕ್ಷ್ಮೀ ಮುಂತಾದ ದೇವತಾ ವಿಗ್ರಹಗಳಿದ್ದು ವಿವಿಧ ವರ್ಣಗಳಿಂದ ಅಲಂಕೃತಗೊಂಡಿವೆ. ಮೇಲೆ ಮನಮೋಹಕ ಗೋಪುರ ಅದರ ಮೇಲೆ ಕಳಸವಿದ್ದು ಹೊರನೋಟಕ್ಕೆ ಹಿರೇಮಠ ವರ್ಣರಂಜಿತವಾಗಿ ಕಂಗೊಳಿಸುತ್ತದೆ. ಈ ಗೋಪುರದ ಬಗ್ಗೆ ಕೊಟ್ಟೂರಿನ ಜನಪದರಲ್ಲಿ ಕೊಟ್ಟೂರು ಮುತ್ತಿಗೆ ಪದದಲ್ಲಿ ಒಂದು ಪ್ರಸಂಗವಿದೆ. ಮರಾಠಿಗರ ಸಿದ್ದೋಜಿ, ಚಿತ್ರದುರ್ಗದ ಮದಕರಿನಾಯಕ, ಹರಪನಹಳ್ಳಿ ಪಾಳೆಯಗಾರ ಸೋಮಶೇಖರನಾಯಕನ ಹಗೆತನದಿಂದ ಕೊಟ್ಟೂರು ಕೋಟೆಗೆ ಮುತ್ತಿಗೆ ಹಾಕಿದಾಗ ಸೋತ ಅವರಿಬ್ಬರು ಕೊಟ್ಟೂರೇಶ್ವರ ಸ್ವಾಮಿಗೆ ಕಪ್ಪಕಾಣಿಕೆ ಸಲ್ಲಿಸಿದರೆಂದು ತಿಳಿದು ಬರುತ್ತದೆ. ಕದನದ ಸಂದರ್ಭದಲ್ಲಿ ಕೋಟೆ ಪ್ರದೇಶದಲ್ಲಿದ್ದ ಶ್ರೀವೀರಭದ್ರೇಶ್ವರ ದೇವರ ಮೂರ್ತಿಗೆ ಗುಂಡುಗಳು ತಗುಲಿ ಮೂರ್ತಿ ಭಿನ್ನವಾದಾಗ ಜಯಶಾಲಿಯಾದ ಸೋಮಶೇಖರನಾಯಕನು ಈ ದೇವಾಲಯ ಮೇಲಿನ ಗೋಪುರಕ್ಕಿಂತ ದೊಡ್ಡದಾದ ಅದೇ ಮಾದರಿಯ ಸುಂದರವಾದ ಗೋಪುರವನ್ನು ಮಠದ ಮುಂಭಾಗದಲ್ಲಿ ಕಟ್ಟಿಸಿ ಗುರುಗಳ ಕೃಪೆಗೆ ಪಾತ್ರನಾದನು.

ಹಿರೇಮಠದ ಸಭಾಮಂಟಪ ೪೦ ಬೃಹತ್ ಕಂಬಗಳನ್ನು ಹೊಂದಿದ್ದು ಇವುಗಳಲ್ಲಿ ಸಿಂಹಸವಾರರು, ಶಿವಪಾರ್ವತಿ, ನರಸಿಂಹ, ನೃತ್ಯಾಂಗನೆಯರು, ಋಷಿಗಳು, ಸಿಂಹಗಳು ತಮ್ಮ ಮುಂಗಾಲುಗಳನ್ನೆತ್ತಿ ನೆಗೆಯುತ್ತಿರುವ ಉಬ್ಬುಶಿಲ್ಪಗಳು, ಕಣ್ಮನ ಸೆಳೆಯುತ್ತವೆ. ಗರ್ಭಗುಡಿಯಲ್ಲಿ ಎತ್ತರದ ಸುಂದರದ ಮಂಟಪದಲ್ಲಿ ಕೊಟ್ಟೂರು ಬಸವೇಶ್ವರರ ಸುಂದರ ಮೂರ್ತಿಯಿದೆ.

ಕೊಟ್ಟೂರಿನ ಮತ್ತೊಂದು ಮಹತ್ವದ ಮಠವೆಂದರೆ ಬಸವೇಶ್ವರರ ಯೋಗಭೂಮಿಯ ಪವಿತ್ರವಾದ ಗಚ್ಚಿನಮಠ. ಈ ಮಠದ ಎರಡು ವೈಶಿಷ್ಟ್ಯಗಳಂದರೆ ಕೊಟ್ಟೂರು ಬಸವೇಶ್ವರರು ಶಿವಸ್ವರೂಪಿಯಾಗಿ ಶಿವನಲ್ಲಿ ಲೀನವಾಗುವ ಸತ್‌ಸಿದ್ಧಿ ಸಂಕಲ್ಪದಿಂದ ಈ ಮಠದ ತಪೋಯೋಗ ಭೂಮಿಯಲ್ಲಿ ಜೀವಂತ ಸಮಾಧಿಯಾಗಿದ್ದು. ಎರಡನೆಯದಾಗಿ ಭಾವೈಕ್ಯದ ಸಂಕೇತವಾಗಿ ಅಕ್ಬರ್‌ನು ಗುರುಕೊಟ್ಟೂರೇಶ್ವರರಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದ 'ಮಣಿಮಂಚ' ಮಠದಲ್ಲಿದೆ. ಇದೂ ಕೂಡಾ ಹಿರೇಮಠದ ವಾಸ್ತುವಿನ್ಯಾಸವನ್ನು ಹೊಂದಿರುವುದರಿಂದ ಪಾಳೆಯಗಾರರ ಕಾಲದಲ್ಲಿ

ನಿರ್ಮಾಣವಾಗಿರ ಬಹುದೆಂದು ತಿಳಿಯಬಹುದಾಗಿದೆ. ಅಲ್ಲದೆ ಇದೊಂದು ಗದ್ದುಗೆಯ ಮಠವಾಗಿರುವುದರಿಂದ ಪಾಳೆಯಗಾರರು ಕೊಟ್ಟೂರೇಶ್ವರನ ಅನನ್ಯ ಭಕ್ತರು, ಅವರ ರಾಜಗುರುಗಳೂ ಆಗಿದ್ದರಿಂದ ಅವರ ಗದ್ದುಗೆಗೆ ಮಠವನ್ನು ಕಟ್ಟಿದರೆಂದು ಹೇಳಬಹುದಾಗಿದೆ. ಆದರೆ ಈ ವಿಷಯದ ಬಗ್ಗೆ ಜಿಜ್ಞಾಸೆಯಿದೆ. [ಕಟ್ಟಡಗಳ ಮೇಲೆ ನಾಗರಹಾವು, ಮೀನು, ಸಿಂಹಮುಖಗಳ ಚಿತ್ರಗಳಿರುವುದರಿಂದ ಅವರ ಕಾಲದಲ್ಲಿ ಕಟ್ಟಿರಬಹುದೆಂದು] ಈ ಮಠವು ಹಿರೇಮಠಕ್ಕಿಂತ ವಿಶಾಲವೂ, ಸುಂದರವೂ, ಕಲಾತ್ಮಕವೂ ಆಗಿದೆ.

ಹರಪನಹಳ್ಳಿ ಪಾಳೆಯಗಾರರ ಬಸವಂತನಾಯಕನ ಪತ್ನಿ ಬಾಗುಳಿ ಹರಿಯಮ್ಮಾಜಿ ಉದ್ಗಟ್ಟಿಯಲ್ಲಿ ಒಂದು ಮಠವನ್ನು ಕಟ್ಟಿಸಿದಳು. ವಾಸ್ತವವಾಗಿ ಇದು ಗಂಡನ ಕಾಲದಲ್ಲಿ ಪ್ರಾರಂಭವಾಗಿದ್ದುದು ಇವಳ ಕಾಲದಲ್ಲಿ ಪೂರ್ಣಗೊಂಡಿತ್ತು. ಆದರೆ ಅದರ ಪ್ರಾರಂಭೋತ್ಸವಕ್ಕೂ ಮೊದಲೇ ತೀರಿಕೊಂಡಳು.

[ರಂಗಣ್ಣನಾಯಕ ಕೊಟ್ಟೂರು ಬಸವೇಶ್ವರರಿಗೆ ಭಕ್ತಿಯನ್ನು ಸಮರ್ಪಿಸುವ ಉದ್ದೇಶದಿಂದ ಮಠದ ಮಧ್ಯ ಭಾಗವನ್ನು ಮತ್ತು ಮಹಾದ್ವಾರವನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ] ಮೊದಲ ವೀರಬಸಪ್ಪನಾಯಕ ಅಕಾಲ ಮರಣಕ್ಕೆ ತುತ್ತಾದಾಗ ಅರಸನ ಸಮಾಧಿಯನ್ನು ಹರಪನಹಳ್ಳಿ ಪಟ್ಟಣದ ಹಿರೇಕುರುಬರ ಕೇರಿಯಲ್ಲಿ ಮಾಡಿ, ಸಮಾಧಿಯ ಮೇಲೆ ಒಂದು ದೇವಾಲಯವನ್ನು ನಿರ್ಮಿಸಿರುವರು. ಇದಕ್ಕೆ ಅರಸು ಮಠವೆಂದು ಕರೆಯುತ್ತಾರೆ. ಮೊದಲ ಸೋಮಶೇಖರನಾಯಕ ಕೂಲಹಳ್ಳಿಯಲ್ಲಿ ಕೆಲವರ ಮಾತಿಗೆ ಕಟ್ಟುಬಿದ್ದು ಗೋಣಿಬಸಪ್ಪನ ಮಠವನ್ನು ಬಯಲಿನಲ್ಲಿ ನಿರ್ಮಿಸಿದನು. ಬಾಗಳಿಯಲ್ಲಿ ಪ್ರತಿ ವರ್ಷ ಗೋಣಿಬಸಪ್ಪನ ಜಾತ್ರೆ ನಡೆಯುತ್ತದೆ.

ಹರಪನಹಳ್ಳಿ ಪಾಳೆಯಗಾರರು ಮಠಗಳನ್ನು ನಿರ್ಮಿಸಿದಂತೆ ಕೆಲವು ಮಠಗಳಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಮೊದಲ ಬಸವಂತನಾಯಕನ ಕಾಲದಲ್ಲಿ ತಳವಾರನಾಗಿದ್ದ ಶಿವನಪ್ಪನು ಅರಸನಿಗೆ ಚಿಗಟೇರಿಗೌಡನೊಂದಿಗೆ ನಡೆದ ಜೂಜಾಟದಲ್ಲಿ ಜಯ ತಂದುಕೊಟ್ಟು ಅರಸರ ಮೆಚ್ಚುಗೆಗೆ ಪಾತ್ರನಾದನು. ಪ್ರತಿಫಲವಾಗಿ ಶಿವನಪ್ಪನನ್ನು ಚಿಗಟೇರಿ ಕೋಟೆಗೆ ಅರಸನೆಂದು ಸಾರಿ ದೊರೆ ಆಜ್ಞೆಯನ್ನು ಕಳುಹಿಸಿದನು. ಹೀಗೆ ಅರಸನಾದ ಶಿವನಪ್ಪನು ಹರಪನಹಳ್ಳಿ ಅರಸರಿಗೆ ವಿಧೇಯನಾಗಿದ್ದು ಆಳ್ವಿಕೆ ನಡೆಸುತ್ತಿದ್ದನು. ಇವನು ಶ್ರೀಕೂಡ್ಲಿ ಶಂಕರಭಾರತೀಸ್ವಾಮಿಗಳ ಉದ್ಗಟ್ಟ ಮಠಕ್ಕೆ ನಿಟ್ಟೂರು ಬಸಾಪುರ ಗ್ರಾಮವನ್ನು ಸರ್ವಮಾನ್ಯವಾಗಿ ದಾನ ನೀಡಿ ದತ್ತಿ ಬರೆಸಿದನು. ಬಾಗಳಿ ಮುಮ್ಮಡಿ ಬಸಪ್ಪನಾಯಕ ಕೊಟ್ಟೂರು ಬಸವೇಶ್ವರರ ಸನ್ನಿಧಿಯಲ್ಲಿ ನಡೆಯುವ ದಾಸೋಹಕ್ಕೆ ಕನಾಯಕನಕಟ್ಟೆ ಗ್ರಾಮವನ್ನು ಶಿವಾರ್ಪಿತವಾಗಿ ಕೊಟ್ಟು, ಈ ಧರ್ಮ ಮತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡು ಬರಲೆಂದು ಶಾಸನ ಹಾಕಿಸಿದ್ದಾನೆ. ಬಾಗುಳಿ ಬಸವಪ್ಪನಾಯಕ ಕೂಡ್ಲಿ ಮಠದ

ನರಸಿಂಹಭಾರತಿಸ್ವಾಮಿಗಳಿಗೆ ಕುರುವತ್ತಿ ಬಳಿಯ ಮಣಿಸೋಮಲಾಪುರ ಗ್ರಾಮವನ್ನು ಉಂಬಳಿಯಾಗಿ ಹಾಕಿಸಿದ್ದಾನೆ.

ಬಾಗಳಿ ಹರಿಯಮ್ಮಾಜಿಯು ಜೋಯಿಸ ಪ್ರಸನ್ನಭಟ್ಟರಿಗೆ ಶಂಕರಾಚಾರ್ಯವರ ಮಠ ಕಟ್ಟಿಸಿ ಸ್ವಾಮಿಗಳವರಿಗೆ ಮಠವನ್ನು ಕೊಟ್ಟ ಕಾರಣಕ್ಕಾಗಿ ಶ್ರೀವಿರೂಪಾಕ್ಷೇಶ್ವರನ ಅಮೃತಪಡಿಗೆ ಒಂದು ವಕ್ಕಳ ಗದ್ದೆಯನ್ನು ಬಾಗಳಿಯಲ್ಲಿ ನೀಡಿ ಬರೆಸಿದ ಸಂಗತಿ ಶಾಸನದಿಂದ ತಿಳಿದು ಬರುತ್ತದೆ. ಬಾಗಳಿ ಮುಮ್ಮಡಿ ಬಸಪ್ಪನಾಯಕ ಅಯ್ಯನವರು ಶೃಂಗೇರಿ ಸ್ವಾಮಿಗಳವರಿಗೆ ನೀಡಿದ ಭೂದಾನ ಶಾಸನದಲ್ಲಿ ಹರಪುರದ ಪ್ರಸನ್ನ ಶ್ರೀಸ್ವಾಮಿಯ ಅಮೃತಪಡಿಗೆ ಬಾಗಳಿ ಸ್ಥಳದಲ್ಲಿ ಬೀಜವರಿ ಒಂದು ವಕ್ಕಳದ ಗದ್ದೆಯನ್ನು ನೀಡಿದ ಉಲ್ಲೇಖವಿದೆ. ಹೀಗೆ ಹರಪನಹಳ್ಳಿ ಪಾಳೆಯಗಾರರು ಕೆಲವು ಮಠಗಳಿಗೆ ದಾನದತ್ತಿಗಳನ್ನು ನೀಡುವ ಮೂಲಕ ಅವುಗಳನ್ನು ಪೋಷಿಸಿಕೊಂಡು ಬಂದಿದ್ದರು.

ಮಠಗಳು ಪ್ರಾಚೀನ ಕಾಲದಿಂದಲೂ ತಮ್ಮದೇ ಆದ ಪ್ರಭಾವವನ್ನು ಎಲ್ಲಾ ಕ್ಷೇತ್ರಗಳಲ್ಲೂ ಬೀರುತ್ತಾ ಬಂದಿವೆ. ಆದರೆ ಪ್ರಸ್ತುತ ದಿನಗಳಲ್ಲಿ ಕೆಲವು ಮಠಗಳು ತಮ್ಮ ಮೌಲ್ಯಗಳನ್ನು ಕಳೆದುಕೊಂಡು ಅವುಗಳ ಮೇಲೆ ಜನತೆಯಲ್ಲಿದ್ದ ಗೌರವ, ಭಕ್ತಿ ಭಾವನೆಗಳು ಕುಸಿಯುತ್ತವೆ. ಆದರೂ ಇಂದಿಗೂ ಕೆಲವೊಂದು ಮಠಗಳು ಸಮಾಜದ ಒಳಿತಾಗಿ ಸಲ್ಲಿಸುತ್ತಿರುವ ಸೇವೆ ಅಪಾರವಾದುದು. ಒಟ್ಟಾರೆಯಾಗಿ ಮಠಗಳು ಪ್ರಮುಖ ಧಾರ್ಮಿಕ ಕೇಂದ್ರಗಳಾಗಿದ್ದವೆಂಬುದನ್ನು ಅಲ್ಲಗಳೆಯುವಂತಿಲ್ಲ.

**೫.೨ ಮೂರ್ತಿಶಿಲ್ಪ**

ಭಾರತದಲ್ಲಿ ದೇವತಾರಾಧನೆ ಹಾಗೂ ವ್ಯವಸ್ಥಿತ ದೇವಾಲಯಗಳ ನಿರ್ಮಾಣ ಕಾರ್ಯ ಪ್ರಾರಂಭವಾದಂದಿನಿಂದ ದೇವತಾಮೂರ್ತಿಗಳ ಪ್ರತಿಷ್ಠಾಪನೆ ಹಾಗೂ ಆರಾಧನೆ ಆರಂಭವಾಯಿತು. ಪ್ರತಿಯೊಂದು ಪಂಥದ ದೇವಾಲಯದಲ್ಲಿ ಆಯಾ ಪಂಥದ ದೇವತಾಮೂರ್ತಿ ಇದ್ದೇ ಇರುತ್ತದೆ. ಇಂತಹ ಮೂರ್ತಿಗಳನ್ನು ಕುರಿತ ಅಧ್ಯಯನವನ್ನು ಮೂರ್ತಿಶಿಲ್ಪಶಾಸ್ತ್ರ ಎಂದು ಕರೆಯಲಾಗಿದೆ. ಸಾಮಾನ್ಯವಾಗಿ 'ಮೂರ್ತಿ' ಎಂಬ ಶಬ್ದಗಳನ್ನೊಳಗೊಂಡು ಅದಕ್ಕೆ ಪರ್ಯಾಯವಾಗಿ ಬಳಸಿದ ಶಬ್ದಗಳಲ್ಲಿ 'ಮೂರ್ತಿ' ಎಂಬುದೊಂದು ಭೌತಿಕ ವಸ್ತು ಎಂದು ಪರಿಗಣಿಸಲಾಗುತ್ತದೆ. ಏಕೆಂದರೆ 'ದೇವತಾಮೂರ್ತಿ' ಎಂಬ ಶಬ್ದದಲ್ಲಿ ಮೂರ್ತಿಯೇ ದೇವತೆಯಲ್ಲ. ಮೂರ್ತಿ ದೇವತೆಯದು. ಈ ಕುರಿತು ಇರುವ 'ಪ್ರತಿಮಾ', 'ಬಿಂಬ', 'ಪ್ರತಿಕೃತಿ', 'ವಿಗ್ರಹ', 'ಶಿಲ್ಪ', 'ಮೂರ್ತಿ' ಮುಂತಾದ ಶಬ್ದಗಳು ಇದನ್ನು ಇನ್ನೂ ಸ್ಪಷ್ಟವಾಗಿ ಸೂಚಿಸುತ್ತವೆ. ಇಲ್ಲಿ ಒಂದು ನಿರಾಕಾರ ಕಲ್ಪನೆಯನ್ನು ಯಥಾವತ್ತಾಗಿ ಅನುಕರಿಸಿ 'ಸಾಕಾರವಸ್ತು' ಎಂಬ ಪರಿಕಲ್ಪನೆಯಿದೆ[೧]. 'ಅರ್ಚ್ಯ' ಎಂಬ ಶಬ್ದ ಪೂಜಿಸಲ್ಪಡುವಂತದ್ದು ಎಂಬ ಅರ್ಥ ನೀಡಿದರೆ 'ತನು' 'ವಪು' ಎಂಬ ಶಬ್ದಗಳು ಮೂರ್ತಿಯನ್ನು ದೇಹವನ್ನಾಗಿ ಗ್ರಹಿಸಲು ಹಾಗೂ ದೇವರನ್ನು ಅದರ ಆತ್ಮವನ್ನಾಗಿ ಪ್ರತ್ಯೇಕಿಸುತ್ತವೆ[೨].

'ಶಿಲ್ಪ' ಎಂಬ ಪದವು ಮೂರ್ತಿ ಶಿಲ್ಪ ಎಂಬ ಅರ್ಥದಲ್ಲಿ ರೂಢಿಗತವಾಗಿದ್ದರೂ ಅದಕ್ಕೆ ತನ್ನದೇ ಆದ ಖಚಿತಾರ್ಥವಿದೆ. ಶಿಲ್ಪಕರ್ಮಕಲಾಧಿಕಂ[೩]' ಇದು ಅಮರಸಿಂಹನ ಅಮರಕೋಶದ ವಿವರಣೆಯಲ್ಲಿ ಕರ್ತೃವಿನ ಅಧಿಕ ಕೌಶಲ್ಯಗಳನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಇದು ತಾಂತ್ರಿಕ ಪರಿಣಿತಿಯನ್ನು ಆಪೇಕ್ಷಿಸುತ್ತದೆ. 'ಶಿಲ್ಪ ಶಬ್ದಸ್ತಯ ಪುನಃ ಶೀಲ ಸಮಾಧೌ ಇತಿಧಾತೋರ್ಮನಸಃ ಸಮಾಧಾನಕಾರಕಂ ವಸ್ತು ಜಾತಿಮಿತಿ ಉತ್ಪದ್ಯತೇ' ಈ ವಾಕ್ಯದಲ್ಲಿ ಶಿಲ್ಪ ಎಂಬ ಶಬ್ದವು ಮನಸ್ಸಿಗೆ ಸಮಾಧಾನವನ್ನುಂಟು ಮಾಡುವ ಕ್ರಿಯೆಯಾಗಿದ್ದು ಕಲೆಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಸಾಮಾನ್ಯವಾಗಿ ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದರೆ ಮೂರ್ತಿ ಅಥವಾ ಪ್ರತಿಮಾ ರಚನೆ, ಲಕ್ಷಣಗಳು, ಚಿತ್ರ ರಚನೆ, ತಾಳಮಾನ ಇತ್ಯಾದಿಗಳನ್ನು ಹೆಸರಿಸಿರುವುದುಂಟು. ಆದರೆ ಪ್ರೊ.ಫಣೇಂದ್ರಬೋಸ್ ರವರು ಭಾರತೀಯ ಶಿಲ್ಪಶಾಸ್ತ್ರದ ಮೂಲತತ್ವಗಳನ್ನು ಗುರುತಿಸುವಾಗ 'ಶಿಲ್ಪಶಾಸ್ತ್ರ' ವೆಂಬ ಪದವನ್ನು ವಾಸ್ತು ಹಾಗೂ ಪ್ರತಿಮಾಶಾಸ್ತ್ರ ಎರಡನ್ನೂ ಒಳಗೊಂಡಂತೆ ವಿವರಿಸಿದ್ದಾರೆ[೪]. ಅದೇ ರೀತಿ ಶುಕ್ರನೀತಿ ಗ್ರಂಥವು ದೇವಾಲಯ, ಅರಮನೆ, ದೇವತಾಮೂರ್ತಿ, ಸಾರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಣಿ ಮುಂತಾದವುಗಳ ರಚನೆಯನ್ನು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ[೫]. ಹಾಗಾಗಿ 'ಶಿಲ್ಪ' ಎಂಬ ಪದವನ್ನು ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಕ್ಕೂ ಬಳಸಲಾಗುತ್ತದೆ.

ಕರ್ನಾಟಕ ಸಹಿತ ಭಾರತ ದೇಶದಲ್ಲಿ ಮೂರ್ತಿಶಿಲ್ಪಕ್ಕೆ ಅನೇಕ ಶತಮಾನಗಳ ಇತಿಹಾಸವಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಹಲವಾರು ಶಿಲ್ಪಗಳು ದೊರಕಿವೆ. ವಿಶೇಷವಾಗಿ ಕರ್ನಾಟಕದ ಕಪ್ಪುಗಲ್, ತೆಕ್ಕಲಕೋಟೆ, ಸಂಗನಕಲ್ಲು, ಪಿಕ್ಲಿಹಾಳ್, ಮಸ್ಕಿ ಮುಂತಾದ ನೆಲೆಗಳಲ್ಲಿ ಕೈಗೊಂಡ ಉತ್ಖನನದಲ್ಲಿ ನೂತನ ಶಿಲಾಯುಗ ಹಾಗೂ ತಾಮ್ರಯುಗಕ್ಕೆ ಸೇರಿದ ಕುರಿ, ಎತ್ತು, ಪಕ್ಷಿ ಮನುಷ್ಯಾಕೃತಿಯ ಸುಡಾವೆಮಣ್ಣಿನ ಬೊಂಬೆಗಳು ದೊರಕಿವೆ[೬]. ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್, ಆಗೋರಿ ಮತ್ತು ಕಲ್ಲಪ್ಪನ ಕ್ಯಾಂಪ್, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಕುಮತಿ, ಹುಲಿಕುಂಟೆಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಏಕಶಿಲಾಮಾನವಾಕಾರದ ಗೊಂಬೆಗಳು ದೊರೆಕಿವೆ[೭]. ಶಿಲಾಯುಗದ ಈ ಸುಡಾವೆಮಣ್ಣಿನ ಗೊಂಬೆಗಳು ಮತ್ತು ಕಲ್ಲುಗೊಂಬೆಗಳು ಅಂದಿನ ಜನರ ಧಾರ್ಮಿಕ ನಂಬಿಕೆ, ಮನೋಧರ್ಮ ಮತ್ತು ಕಲಾಭಿಜ್ಞತೆಗಳನ್ನು ನಿದರ್ಶಿಸುತ್ತವೆ. ಇವು ಕರ್ನಾಟಕದ ಮೂರ್ತಿಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತಾ ಇತಿಹಾಸ ಕಾಲದ ಮೂರ್ತಿಶಿಲ್ಪ ಕಲೆಗೆ ನಾಂದಿಯಾಗಿವೆ. ಸರಳ, ಚತುರ ಹಾಗೂ ತಾಂತ್ರಿಕ ಕುಶಲತೆಯನ್ನು ತೋರಿಸುವುದರ ಜೊತೆಗೆ ಆ ಕಾಲದಲ್ಲಿ ಶಿಲ್ಪಿಯು ಕಲ್ಲಿನಲ್ಲಿ ಕೆತ್ತುವ ತಾಂತ್ರಿಕ ಪರಿಣಿತಿಯನ್ನು ಹೊಂದಿದ್ದ ಎಂಬುವುದಕ್ಕೆ ಸಾಕ್ಷಿಗಳಾಗಿವೆ.[೮]

ಭಾರತದ ಪ್ರಾಚೀನ ನಾಗರೀಕತೆಯಾದ ಹರಪ್ಪ ಅಥವಾ ಸಿಂಧೂ ನಾಗರೀಕತೆಯಲ್ಲೂ ಮೂರ್ತಿಶಿಲ್ಪ ತಾಂತ್ರಿಕತೆ ಉತ್ತಮವಾಗಿಯೇ ಬೆಳವಣಿಗೆಯನ್ನು ಸಾಧಿಸಿತ್ತು. ಆ ಕಾಲದ ಅನೇಕ ಲೋಹ ಮತ್ತು ಸುಡಾವೆಮಣ್ಣಿನ ವಿಗ್ರಹಗಳು ದೊರಕಿವೆ. ಅವುಗಳಲ್ಲಿ ಕಂಚಿನ ನರ್ತಕಿಯ ಶಿಲ್ಪ, ಕಲ್ಲಿನ ಗಡ್ಡಧಾರಿ ಮನುಷ್ಯನ ಶಿಲ್ಪ, ನಗ್ನಪುರುಷ, ನೃತ್ಯನಿರತಪುರುಷನ ಶಿಲ್ಪಗಳು ಮತ್ತು ಸುಡಾವೆಮಣ್ಣಿನ ಸ್ತ್ರೀದೇವತೆಯರ ಶಿಲ್ಪಗಳು, ಚಕ್ಕಡಿ, ಎತ್ತು, ಆನೆ, ಪಕ್ಷಿ, ಖಡ್ಗಮೃಗ, ಗೂಳಿ ಮುಂತಾದ ಶಿಲ್ಪಗಳು ದೊರಕಿವೆ[೯]. ಇವು ಮೂರ್ತಿರೂಪಣ ದೃಷ್ಟಿಯಿಂದ ಉತ್ತಮಮಟ್ಟದಲ್ಲಿವೆ. ಮತ್ತು ಕ್ರಿ.ಪೂ.೩ನೆಯ ಶತಮಾನಕ್ಕೆ ಸಂಬಂಧಿಸಿದ ಕೆಲವು ಮೂರ್ತಿಶಿಲ್ಪಗಳು ಗಂಗಾ ಬಯಲಿನ ಮಥುರಾ, ಅಹಿಚಿತ್ರ, ಬಿಹಾರದ ಚಿರಾಂಡ, ಮಧ್ಯಪ್ರದೇಶದ ಕಾಯಥ್‌ನವ, ದಾಥೋಲಿ, ಮಹಾರಾಷ್ಟ್ರದ ನೆವಾಸ[೧೦], ರಾಜಾಸ್ಥಾನದ ಅರೋರ[೧೧], ಉತ್ತರಪ್ರದೇಶದ ಲಾಲ್‌ಖಿಲಾಗಳಲ್ಲಿ ಕೈಗೊಂಡ ಉತ್ಖನನಗಳಲ್ಲಿ ಪ್ರಾಣಿ ಮತ್ತು ಮಾತೃದೇವತೆಗಳ ಮೃಣಮೂರ್ತಿಗಳು ದೊರೆತಿವೆ. ಶಿಲಾಯುಗದ ಮತ್ತು ಸಿಂಧೂ ನಾಗರೀಕತೆಯ ಕಾಲದ ಈ ಮೂರ್ತಿಶಿಲ್ಪಗಳು ಭಾರತೀಯ ಮೂರ್ತಿಶಿಲ್ಪ ಪರಂಪರೆಗೆ ಮೂಲ ಪ್ರೇರಣೆಗಳಾಗಿವೆ.

ವೇದಗಳ ಕಾಲದ ಸಂಸ್ಕೃತಿಯಲ್ಲಿ ಪ್ರಕೃತಿಶಕ್ತಿಗಳ ಆರಾಧನೆ ಹೆಚ್ಚಾಗಿದ್ದು ವಿಗ್ರಹ ಅಥವಾ ಮೂರ್ತಿಗಳ ಆರಾಧನೆ ಇರಲಿಲ್ಲ. ಆದರೂ ಇಂದ್ರ, ವರುಣ, ರುದ್ರ, ಅಗ್ನಿ, ಸೂರ್ಯ ಮುಂತಾದ ಪ್ರಕೃತಿ ದೇವತೆಗಳಿಗೆ ಮನುಷ್ಯ ಅಥವಾ ಮೂರ್ತಿಯಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಕಂಡು ಬರುತ್ತದೆ[೧೨]. ಹಾಗೆಯೇ ರಾಮಾಯಣ, ಮಹಾಭಾರತ ಗ್ರಂಥಗಳಲ್ಲಿಯೂ ದೇವಾಲಯಗಳ ಉಲ್ಲೇಖವಿರುವುದರಿಂದ ಆ ವೇಳೆಗಾಗಲೇ ವಿಗ್ರಹಾರಾಧನೆ ಸ್ವಲ್ಪಮಟ್ಟಿಗೆ ಪ್ರಚಲಿತದಲ್ಲಿತ್ತೆಂದು ತಿಳಿದು ಬರುತ್ತದೆ. ವೇದೋತ್ತರ ಕಾಲದ ಗೃಹಸೂತ್ರಗಳಲ್ಲಿ ಮೂರ್ತಿಪೂಜೆಯ ಮೊದಲ ಉಲ್ಲೇಖ ಕಂಡು ಬರುತ್ತದೆ. ನಂತರದ ಸಾಹಿತ್ಯ ಗ್ರಂಥವಾದ ಶತರುದ್ರೀಯದಲ್ಲಿ ಬ್ರಾಹ್ಮಣ ಸಂಸ್ಕೃತಿಯ ಕೆಲವು ಪ್ರಮುಖ ದೇವತೆಗಳಾದ ಶಿವ, ವಿಷ್ಣು, ಬ್ರಹ್ಮ, ವಕ್ರತುಂಡ, ದುರ್ಗ, ಆದಿತ್ಯ ಮುಂತಾದ ದೇವತೆಗಳ ಉಲ್ಲೇಖ ಹಾಗೂ ದೇವತಾತನಯಗಳಿಗೆ ಗ್ರಾಂಥಿಕ ಆಧಾರಗಳು ಆ ಕಾಲದಲ್ಲೇ ಸಿಗುತ್ತವೆ[೧೩].

ಚಾರಿತ್ರಿಕ ಕಾಲದಲ್ಲಿ ಮೌರ್ಯ, ಶಾತವಾಹನರ ಕಾಲದಿಂದ ಪ್ರಾರಂಭವಾದ ಮೂರ್ತಿಶಿಲ್ಪದ ಬೆಳವಣಿಗೆ ಗುಪ್ತರು ಮತ್ತು ಬಾದಾಮಿ ಚಾಲುಕ್ಯರ ಕಾಲದಲ್ಲಿ ಪ್ರವರ್ಧಮಾನವಾಗಿ ಬೆಳೆದು ನಿಂತಿತು. ವಿಶೇಷವಾಗಿ ಕರ್ನಾಟಕದಲ್ಲಿ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿವಿಧ ಆಯಾಮಗಳನ್ನು ಪಡೆಯುತ್ತಾ ಹೊಯ್ಸಳರ ಕಾಲದಲ್ಲಿ ಉತ್ಕೃಷ್ಟ ಹಂತವನ್ನು ತಲುಪಿತು. ವಿಜಯನಗರ ಅಸ್ತಿತ್ವದೊಂದಿಗೆ ಕರ್ನಾಟಕದ ಮೂರ್ತಿಶಿಲ್ಪ ಮತ್ತೊಂದು ಆಯಾಮವನ್ನು ಪಡೆದುಕೊಂಡಿತು. ಇಲ್ಲಿ ಸಂಖ್ಯಾತ್ಮಕವಾಗಿ ವಿಪುಲವಾಗಿ ಮೂರ್ತಿಶಿಲ್ಪಗಳು ರಚನೆಯಾದರೆ ಗಾತ್ರದ ದೃಷ್ಟಿಯಿಂದ ಬೃಹತ್ ಪ್ರಮಾಣದ ಶಿಲ್ಪಗಳು ಸೃಷ್ಟಿಯಾಗಿ ಕರ್ನಾಟಕದ ಮೂರ್ತಿಶಿಲ್ಪ ಕಲೆಯನ್ನು ವೈಭವೀಕರಿಸಿದವು[೧೪].

ವಿಜಯನಗರದ ಕಲಾಪರಂಪರೆ ಮತ್ತು ಸಂಸ್ಕೃತಿಯನ್ನು ಬಳುವಳಿಯಾಗಿ ಪಡೆದುಕೊಂಡ ಅವರ ಅಧೀನ ಪಾಳೆಯಗಾರಿಕೆ ರಾಜ್ಯಗಳು ವಿಜಯನಗರದ ನೆರಳಿನಲ್ಲಿ ಸಾಗಿದರೂ ರಾಜಕೀಯ ಮತ್ತು ಆರ್ಥಿಕ ಇತಿಮಿತಿಗಳಿಂದಾಗಿ ವಿಜಯನಗರದ ವೈಭವವನ್ನು ಮುಂದುವರೆಸಲು ಆಗಲಿಲ್ಲ. ಹಾಗಾಗಿ ಪ್ರಾದೇಶಿಕ ಸಂಪನ್ಮೂಲ ಹಾಗೂ ಸಂಗತಿಗಳಿಗೆ ಆದ್ಯತೆ ನೀಡುವುದು ಅನಿವಾರ್ಯವಾಯಿತು. ಅದರ ಪರಿಣಾಮವಾಗಿ ಮೂರ್ತಿಶಿಲ್ಪ ಕ್ಷೇತ್ರದಲ್ಲಿ ಮತ್ತೊಂದು ಆಯಾಮದ ಬೆಳವಣಿಗೆಯುಂಟಾಯಿತು. ಅದು ಪ್ರಾದೇಶಿಕ ಸಂಸ್ಕೃತಿಯನ್ನು ಬಿಂಬಿಸುವ ಶಿಲ್ಪ ಪ್ರಕಾರ ಮತ್ತು ಶೈಲಿಯ ಸೃಷ್ಟಿ ಸಂಪ್ರದಾಯಬದ್ಧವಾಗಿರದ ಈ ಶೈಲಿ ಅನೇಕ ಹೊಸ ಲಕ್ಷಣಗಳನ್ನು ಅಳವಡಿಸಿಕೊಂಡು ಕರ್ನಾಟಕದ ಮೂರ್ತಿಶಿಲ್ಪ ಪರಂಪರೆಯನ್ನು ಮುಂದುವರೆಸಿತು[೧೫]. ಈ ಪ್ರಕ್ರಿಯೆಯಲ್ಲಿ ಹರಪನಹಳ್ಳಿಯ ಪಾಳೆಯಗಾರರೂ ಹೊರತಾಗಿರಲಿಲ್ಲ. ಹಾಗೂ ಕರ್ನಾಟಕದ ಮೂರ್ತಿಶಿಲ್ಪ ಕ್ಷೇತ್ರಕ್ಕೆ ಇವರ ಕೊಡುಗೆಯೂ ಮಹತ್ವವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಇವರ ಕಾಲದ ಕೆಲವು ಮೂರ್ತಿಶಿಲ್ಪಗಳು ದೊರಕಿವೆ.

ಹರಪನಹಳ್ಳಿ ಪಾಳೆಯಗಾರರ ಶಿಲ್ಪಗಳಲ್ಲಿ ಬಿಡಿಶಿಲ್ಪಗಳು ಹಾಗೂ ಉಬ್ಬುಶಿಲ್ಪಗಳು ಪ್ರಮುಖವಾಗಿವೆ. ಧಾರ್ಮಿಕವಾಗಿ ಇವರ ಶಿಲ್ಪಗಳನ್ನು ಶೈವ, ವೈಷ್ಣವ ಹಾಗೂ ಶಾಕ್ತದಶಿಲ್ಪಗಳೆಂದು ವಿಂಗಡಿಸಲಾಗಿದ್ದು ಜನಪ್ರಿಯ ಪಂಥದಲ್ಲಿ ಕೆಲವು ಆಂಜನೇಯ ಶಿಲ್ಪಗಳೂ ದೊರಕಿವೆ. ಲೌಖಿಕವಾಗಿ ಆರಸರ ರಾಣಿಯರ ಪ್ರತಿಮೆಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಸ್ಮಾರಕಶಿಲೆಗಳು ಕಂಡು ಬರುತ್ತವೆ. ಈ ಶಿಲ್ಪಗಳು ಶಿಷ್ಟ ಹಾಗೂ ಜಾನಪದೀಯ ಅಥವಾ ಸ್ಥಳೀಯ ಶೈಲಿಯಲ್ಲಿ ರಚನೆಯಾಗಿರುವುದನ್ನು ಗುರುತಿಸಲಾಗಿದೆ. ಸಪ್ತಮಾತೃಕೆಯರು (ಹಿರೇಮ್ಯಾಗಳಗೆರೆ), ನಾಗಬಂಧ (ತಂಬ್ರಹಳ್ಳಿ), ನಾಗರಹಾವು, ಗಜಲಕ್ಷ್ಮಿ (ಯಾಗನಹಳ್ಳಿ), ಮಂಗ, ಲಿಂಗಕ್ಕೆ ನಮಸ್ಕರಿಸುತ್ತಿರುವ ಆಂಜನೇಯ (ಉಚ್ಚಂಗಿದುರ್ಗಕೋಟೆ), ಆಮೆ ಮತ್ತು ಮೀನು (ತಂಬ್ರಹಳ್ಳಿ), ಆಂಜನೇಯ (ಮಾಗನಹಳ್ಳಿ), ನಂದಿ (ಹರಪನಹಳ್ಳಿ), ಶಿವಲಿಂಗ (ಹರಪನಹಳ್ಳಿ), ಗಜಲಕ್ಷ್ಮಿ (ನಾರಾಯಣದೇವರಕೆರೆ), ಹಣ್ಣನ್ನು ತಿನ್ನುತ್ತಿರುವ ಮಂಗಗಳು (ತಂಬ್ರಹಳ್ಳಿ), ಆನೆ(ತಂಬ್ರಹಳ್ಳಿ), ಯತಿ (ತಂಬ್ರಹಳ್ಳಿ), ಮತ್ಸಕನ್ಯೆ (ತಂಬ್ರಹಳ್ಳಿ), ಒಂಟೆಸವಾರ (ತಂಬ್ರಹಳ್ಳಿ), ಆನೆ ಸವಾರರು (ತಂಬ್ರಹಳ್ಳಿ), ರಾಜರಾಣಿ (ಕಾಮಭಟ್ಟರಹಳ್ಳಿ) ಸೂರ್ಯ ಚಂದ್ರ (ಹಿರೇಮ್ಯಾಗಳಗೇರಿ) ಆಂಜನೇಯ (ಕಾಮಭಟ್ಟರಹಳ್ಳಿ), ಮಿಥುನಶಿಲ್ಪ, ಲಜ್ಜಗೌರಿ ಶಿಲ್ಪ (ತಂಬ್ರಹಳ್ಳಿ) ಇನ್ನೂ ಮುಂತಾದ ಶಿಲ್ಪಗಳು ಪ್ರಮುಖವಾಗಿವೆ.

### ೫.೩ ವೀರಗಲ್ಲುಗಳು

ವೀರಗಲ್ಲುಗಳನ್ನು ನಿಲ್ಲಿಸಲು ಮುಖ್ಯವಾಗಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳನ್ನು ಹೊಂದಿದ್ದರೆಂದು ತಿಳಿದು ಬರುತ್ತದೆ. ಲೌಕಿಕವಾಗಿ ವೀರನ ಪರಾಕ್ರಮ ಲೋಕಕ್ಕೆಲ್ಲ

ತಿಳಿಯಬೇಕೆಂಬುದಾಗಿದ್ದರೆ ವೀರನಿಗೆ ಸ್ವರ್ಗ, ಕೈಲಾಸ, ವೈಕುಂಠ ಪ್ರಾಪ್ತವಾಗುತ್ತದೆಯೆಂಬುದು ಪಾರಮಾರ್ಥಿಕ ಉದ್ದೇಶವಾಗಿತ್ತು. ಈ ರೀತಿ ವೀರನ ಪರಾಕ್ರಮದ ಪ್ರದರ್ಶನಕ್ಕಾಗಿ ವೀರಗಲ್ಲುಗಳನ್ನು ನಿಲ್ಲಿಸುವ ಪರಿಪಾಠ ಹೊಸದೇನಲ್ಲ. ಇಂತಹ ವೀರರ ಶಿಲ್ಪವಿರುವ ವೀರಗಲ್ಲುಗಳ ಮೇಲೆ ಅವನ ಪರಾಕ್ರಮವನ್ನು ಸಾರುವ ಪಾಠವನ್ನು ಉತ್ತೀರ್ಣ ಮಾಡುತ್ತಿದ್ದರು ಎಂಬ ಅಂಶ ಸಂಗಂ ಸಾಹಿತ್ಯದ 'ಮಲೈಪಡುಕಡಮ್' ಎಂಬ ಕೃತಿಯಿಂದ ತಿಳಿದು ಬರುತ್ತದೆ[೧೬]. ಈ ಹಿನ್ನೆಲೆಯಲ್ಲಿ ಕರ್ನಾಟಕದ ವೀರಗಲ್ಲುಗಳ ಶಿಲ್ಪ ಮತ್ತು ಪಾಠವನ್ನು ಅವುಗಳಲ್ಲಿನ ವೀರನ ಪ್ರಶಂಸೆ, ವರ್ಣನೆ ರೀತಿ, ಶೈಲಿ ಮುಂತಾದವುಗಳನ್ನು ಗಮನಿಸಿದಾಗ ಬಹುಪಾಲು ವೀರಗಲ್ಲುಗಳನ್ನು ವೀರನ ಪರಾಕ್ರಮವನ್ನು ಲೋಕಕ್ಕೆ ತಿಳಿಸುವುದೇ ಆಗಿತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಇದಕ್ಕೆ ಭಿನ್ನವಾದ ಮತ್ತೊಂದು ಕಾರಣಕ್ಕೂ ವೀರಗಲ್ಲುಗಳನ್ನು ಹಾಕುವಂತಹ ಮನೋಧರ್ಮವಿದ್ದು ವೀರನ ಪರಾಕ್ರಮವನ್ನು ಮೆಚ್ಚಿಕೊಂಡ ಅವನ ಆಶ್ರಯದಾತ ಇಲ್ಲವೆ ಅವನ ಊರಿನವರು ಹಾಕಿಸುವುದರಲ್ಲಿ ಕಾಣಬಹುದಾಗಿದೆ. ಹಾಗೆಯೇ ತಮಗೆ ಪ್ರೀತಿ ಪಾತ್ರವಾದ ಪ್ರಾಣಿಗಳಿಗಾಗಿ ಅವುಗಳ ಒಡೆಯರು ವೀರಗಲ್ಲುಗಳನ್ನು ಹಾಕಿಸಿರುವುದು ಕಂಡು ಬರುತ್ತದೆ. ಉದಾ : ಹಂದಿಯ ಬೇಟೆಯಲ್ಲಿ ಸತ್ತ 'ಪೂಣಿಗ' ಎಂಬ ನಾಯಿಗಾಗಿ ಸ್ಮಾರಕವನ್ನು ಆತಕೂರು ಮತ್ತು ಚೋರಗಿರಿಯ ರಾಜ ನಿಲ್ಲಿಸಿರುವುದು ತಿಳಿದು ಬಂದಿದೆ[೧೭]. ವೀರನಿಗೆ ಮರಣೋತ್ತರ ಜೀವನದಲ್ಲಿ ಶ್ರೇಯಸ್ಸು ಸಿಗಲೆಂದು ಹಾಕಿಸುವ ಪದ್ಧತಿಯೂ ಇತ್ತೆಂಬುದನ್ನು ಕಾಣಬಹುದಾಗಿದೆ. 'ವೀರಶಾಸನದಿಂ ಸ್ವರ್ಗಮೆಯ್ದಿಪನ್ತು' ಎಂಬ ವಿಚಾರವನ್ನು ಕ್ರಿ.ಶ. ೧೧೧೦ರ ವೀರಗಲ್ಲಿನಿಂದ ತಿಳಿದು ಬರುತ್ತದೆ[೧೮].

'ಪರೋಕ್ಷವಿನಯಮೆಂದೀ ಕಲ್ಲ ನಿಲಿಸಿದರು[೧೯] 'ಮಾದಿಗುಡನ ಪರೋಕ್ಷವಿನಿಯಕೆ ಪೇಳಿ ಬೀರಲಿಂಗೋಸುಗುಂ[೨೦]. ಎಂಬ ವೀರಗಲ್ಲುಗಳ ಪಾಠದಿಂದ ಪರೋಕ್ಷ ವಿನಯಕ್ಕಾಗಿಯೂ ವೀರಗಲ್ಲುಗಳನ್ನು ಹಾಕಿಸುವ ಪರಿಪಾಠವಿದ್ದುದು ತಿಳಿದು ಬರುತ್ತದೆ. ಹಾಗೆಯೇ ಪರೋಕ್ಷ ವಿನಯವನ್ನು ಮಾಡಿದ ನಂತರವೂ ನಿಲ್ಲಿಸಿರುವ ವಿಷಯ ಕೆಲವು ವೀರಗಲ್ಲುಗಳಿಂದ ತಿಳಿಸಲಾಗಿದೆ. ಉದಾ : 'ಪರೋಕ್ಷಕ್ರಿಯಂಗೆಯ್ದು ಕಲ್ಲನೆಡಸಿದ[೨೧]' 'ಸೂರೆಯ ನಾಯಕರು ಪರೋಕ್ಷ ವಿನಯವ ಮಾಡಿ ಕಲ್ಲಂ ನಿಲಿಸಿದರು[೨೨]'. ಇಲ್ಲಿ ಮುಖ್ಯವಾಗಿ 'ಪರೋಕ್ಷ ವಿನಯ' ಎಂಬುದರ ಪಾರಿಭಾಷಿಕ ಅರ್ಥವನ್ನು ತಿಳಿಯಲು ನಮಗಿರುವ ಪ್ರಮುಖ ಆಧಾರಗಳೆಂದರೆ ಕಾವ್ಯಗಳು ಮತ್ತು ಶಾಸನಗಳು. ಪ್ರಮುಖವಾಗಿ ಪಂಪನ ವಿಕ್ರಮಾರ್ಜುನ ವಿಜಯ[೨೩], ರನ್ನನ ಸಾಹಸಭೀಮವಿಜಯಗಳಲ್ಲಿ[೨೪] 'ಪರಲೋಕಕ್ರಿಯೆ' 'ಪರೋಕ್ಷಕ್ರಿಯೆ' ಎಂಬ ಪದಗಳ ಪ್ರಯೋಗ ಬಹುಶಃ ಶಾಸನಗಳಲ್ಲಿ 'ಪರೋಕ್ಷ ವಿನಯ' ಎಂದು ಪ್ರಯೋಗವಾಗಿರಬೇಕೆಂದು ಕಂಡು ಬರುತ್ತದೆ. ಈ ಪದ ಕೇವಲ ವೀರಗಲ್ಲುಗಳಲ್ಲದೇ ಸ್ಥಾನಶಾಸನಗಳಲ್ಲಿಯೂ ಪ್ರಯೋಗವಾಗಿದೆ. ಹೊನ್ನವ್ವ ನಾಯಕಿಯ ಹೆಸರಿನಲ್ಲಿ ಅವಳ ಸಂಬಂಧಿಕರು

ಪರೋಕ್ಷವಿನಯದಿ ಸ್ತ್ರೀವಶಕ್ತಿದೇವರ ಕಾಲಂಕರ್ಚಿ ಧಾರಾಪೂರ್ವಕವಾಗಿ ಗದ್ದೆಯನ್ನು ದಾನ ಮಾಡಿದುದರ ಬಗ್ಗೆ ಶಾಸನವೊಂದರಲ್ಲಿದೆ[೨೫].

ಒಟ್ಟಾರೆಯಾಗಿ 'ಪರೋಕ್ಷವಿನಯ' ಎಂದರೆ ಯಾವುದೇ ಕಾರಣಕ್ಕೆ ಮಡಿದಿದ್ದರೂ ಅವನ 'ಪರೋಕ್ಷ'ದಲ್ಲಿ ಮರಣೋತ್ತರದಲ್ಲಿ ಶ್ರೇಯಸ್ಸು ಸಿಗಲೆಂಬುದೇ ಇದರ ತಾತ್ಪರ್ಯ ಹಾಗೂ ಆಶಯವಾಗಿದೆ. ಅಂದರೆ ಈ ಮೂಲಕ ವೀರನನ್ನು ಈ ಲೋಕದಿಂದ ಮತ್ತೊಂದು ಉತ್ತಮ ಲೋಕಕ್ಕೆ ಮುಟ್ಟಿಸುವ ವಿಧಿಗಳು ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ವೀರನ ಹೆಸರಿನಲ್ಲಿ ದೇವಾಲಯಗಳಿಗೆ[೨೬] ಬ್ರಾಹ್ಮಣರಿಗೆ[೨೭] ದಾನದತ್ತಿಗಳನ್ನು ನೀಡುತ್ತಿದ್ದುದರ ವಿಚಾರ ಕೆಲವು ವೀರಗಲ್ಲುಗಳ ಪಾಠದಿಂದ ತಿಳಿದು ಬಂದರೆ ಗೋದಾನ ಮತ್ತು ದಕ್ಷಿಣದಾನಗಳನ್ನು ಸಲ್ಲಿಸುತ್ತಿದ್ದರೆಂಬುದೂ ತಿಳಿದು ಬಂದಿದೆ[೨೮]. ಇಂತಹ ದಾನಧರ್ಮಗಳ ಜೊತೆಗೆ ವೀರನಿಗೆ ವೀರಸ್ವರ್ಗ ಸಿಗಲೆಂದು ಸಾಮೂಹಿಕ ದಾನಧರ್ಮಗಳನ್ನು ಮಾಡಿರುವ ವಿಚಾರ ರಾಯಘಡದ ಶಾಸನ ತಿಳಿಸುತ್ತದೆ[೨೯].

ಸಾಮಾನ್ಯವಾಗಿ ಸತ್ತ ವ್ಯಕ್ತಿಯ ಸಂಬಂಧಿಗಳು ಹಾಗೂ ಸಂಬಂಧಿಗಳೊಡನೆ ಸೇರಿ ಇಲ್ಲವೇ ತಾವಾಗಿಯೇ ಸಾರ್ವಜನಿಕರು ವೀರಗಲ್ಲುಗಳನ್ನು ನೆಡುತ್ತಿದ್ದುದನ್ನು ಗುರುತಿಸಬಹುದಾಗಿದೆ. ಅದರಲ್ಲೂ ತಂದೆಗೆ ಮಗನು ವೀರಗಲ್ಲನ್ನು ನೆಡುವುದು ಅವನ ಕರ್ತವ್ಯವೆಂಬ ಭಾವನೆ, ನಂಬಿಕೆ ಇಂದಿಗೂ ಉಳಿದುಕೊಂಡು ಬಂದಿದೆ. ತುರುಗಾಳದಲ್ಲಿ ಸತ್ತ ಚೀಲಯ ಎಂಬುವವನಿಗೆ ಸುಪುತ್ರ ಕುಲದೀಪಕನು ಗೋತ್ರಚಿನ್ತಾಮಣಿಯೂ ಆದ ಮಕ್ತಲದಾಸಯ್ಯ ವೀರಗಲ್ಲನ್ನು ನಿಲ್ಲಿಸಿರುವುದು ಕಂಡು ಬಂದಿದೆ[೩೦]. ಗಂಡು ಮಕ್ಕಳಿಲ್ಲದ ಸಂದರ್ಭದಲ್ಲಿ ವೀರನ ಅಣ್ಣ ತಮ್ಮಂದಿರು ಮತ್ತು ಅವರ ಸಂಬಂಧಿಕರು ಈ ಕರ್ತವ್ಯವನ್ನು ನಿರ್ವಹಿಸಬಹುದು. ಚಿಕ್ಕಪ್ಪ ಮತ್ತು ಚಿಕ್ಕಮ್ಮನಿಗಾಗಿ ಓಪನದ ಹರಿಹಗವುಡನ ತಂಮ ಬಯಚಗುಡನ ಮಗ ಕೇತುಡ ಕಲ್ಲ ನೆತ್ತಿಸಿ ಪ್ರತಿಷ್ಠೆ ಮಾಡಿಸಿದ ವಿಚಾರ ವೀರಗಲ್ಲೊಂದರ ಪಾಠದಿಂದ ತಿಳಿದು ಬರುತ್ತದೆ[೩೧]. ಮಗನಂತೆ ತಂದೆಯೂ ಕೂಡ ತಮ್ಮ ಮಕ್ಕಳು ಹೋರಾಡಿ ಸತ್ತಾಗ ವೀರಗಲ್ಲನ್ನು ನಿಲ್ಲಿಸಿರುವ ನಿದರ್ಶನಗಳು ಸಾಕಷ್ಟಿವೆ. ಒಮ್ಮಿಗನು ಯುದ್ಧದಲ್ಲಿ ಮಡಿದಾಗ ತಂದೆ ಒಮ್ಮಗೌಡನು 'ಕೂಳಂ ಮಾಡಿ ಕಲ್ಲನಿಕ್ಕಿ'ಸುತ್ತಾನೆ[೩೨]. ತಂದೆಯಂತೆ ತಾಯಂದಿರು ಸಹ ತಮ್ಮ ಮಕ್ಕಳಿಗಾಗಿ ವೀರಗಲ್ಲುಗಳನ್ನು ನಿಲ್ಲಿಸಿದ್ದಾರೆಂಬುದು 'ತುರುಗ'ನೆಂಬ ಮಗನಿಗಾಗಿ ತಾಯಿ 'ಲಚ್ಚಕ್ಕನ್' ನಿಲ್ಲಿಸಿರುವ ವೀರಗಲ್ಲಿನಿಂದ ತಿಳಿದು ಬರುತ್ತದೆ[೩೩]. ಇನ್ನೊಂದು ವಿಶೇಷವಾದ ಸಂಗತಿಯೆಂದರೆ ವೀರನ ಪತ್ನಿಯೇ ವೀರಗಲ್ಲುಗಳನ್ನು ಹಾಕಿಸಿರುವುದುಂಟು. ಮಾಚಿಯಕ ಮಣಿರುತನ ಖಚಿತಮಪ್ಪ ಮಣಿಮಯ ಮಂಟಪದಲ್ಲಿ ತನ್ನ ಗಂಡನ ವೀರಗಲ್ಲನ್ನು ನಿಲ್ಲಿಸಿದ್ದಾಳೆ[೩೪]. ತಂಗಿ ಅಣ್ಣನಿಗಾಗಿ[೩೫], ಅತ್ತಿಗೆ ಮೈದುನನಿಗೆ[೩೬] ವೀರಗಲ್ಲುಗಳನ್ನು ನಿಲ್ಲಿಸಿರುವ ಉದಾಹರಣೆಗಳೂ ಇವೆ. ಹಾಗಾಗಿ ಇಂತಹವರೆ ವೀರಗಲ್ಲನ್ನು ನಿಲ್ಲಿಸಬೇಕೆಂಬ ನಿಯಮವೇನೂ ಇರಲಿಲ್ಲವೆಂಬುದು ಗೊತ್ತಾಗುತ್ತದೆ.

ಸಾಮಾನ್ಯವಾಗಿ ವೀರಗಲ್ಲುಗಳನ್ನು ದೇವಾಲಯಗಳ ಬಳಿ ಊರ ಬಾಗಿಲ ಮುಂದೆ, ತೋಟಗಳಲ್ಲಿ, ಹೊಲ ಗದ್ದೆ, ಮೈದಾನ, ಚಾವಡಿ, ಕೆರೆ, ಹೊಂಡಗಳ ಬಳಿ ಹೀಗೆ ಅನೇಕ ಕಡೆಗಳಲ್ಲಿ ನಿಲ್ಲಿಸಿರುವುದನ್ನು ಕಾಣಬಹುದಾಗಿದೆ. ಇಂತಹ ವೀರಗಲ್ಲುಗಳ ಪಾಠದಲ್ಲಿ ನಮಗೆ 'ವೀರಗಲ್ಲನ್ನು ಪ್ರತಿಷ್ಠಾಪಿಸಿದರು'[೩೬] (ನಿಲ್ಲಿಸಿದರು, ಎತ್ತಿಸಿದರು, ಮಾಡಿಸಿದರು ಎಂಬ ಸಾಮಾನ್ಯ ಪ್ರಯೋಗಗಳ ಜೊತೆಗೆ) ಎಂಬ ಪ್ರಯೋಗ ವೀರಗಲ್ಲುಗಳ ಬಗ್ಗೆ ಅಂದಿನ ಜನರಿಗಿದ್ದ ಗೌರವ ಭಾವನೆಯನ್ನು ಸೂಚಿಸುತ್ತದೆ. ಆದರೆ ಇದಕ್ಕೆ ವಿರೋಧವೆಂಬಂತೆ ಜಗಲೂರು ತಾಲ್ಲೂಕಿನ ರಾಷ್ಟ್ರಕೂಟರ ಶಾಸನವೊಂದರಲ್ಲಿ ನೊಳಂಬರು ವೀರಗಲ್ಲನ್ನು ಸುಟ್ಟರು ಎಂಬ ವಿಷಯವಿದ್ದು ಆ ವೀರಗಲ್ಲು ಅವನ ಕಡೆಯವರಿಗೆ ಧೈರ್ಯ, ಶಕ್ತಿ, ಉತ್ಸಾಹಗಳನ್ನು ತುಂಬುವುದೆಂಬ ಶಂಕೆಯಿಂದ ಸುಟ್ಟಿರಬಹುದೆಂದು ಭಾವಿಸಬಹುದಾಗಿದೆ[೩೭] ಎಂದು ಡಾ. ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ[೩೮].

ವೀರಗಲ್ಲನ್ನು ನೆಡುವ ಮುನ್ನ ಹಾಗೂ ನಂತರ ಕೆಲವು ಆಚರಣೆಗಳನ್ನು ಮಾಡುತ್ತಿದ್ದುದು ಸಾಮಾನ್ಯವಾಗಿತ್ತು. ಆತ್ಮಶಾಂತಿಗಾಗಿ ಅನ್ನವನ್ನು ಹಾಕಿಸುತ್ತಿದ್ದರೆಂಬುದು 'ಬೀರಗೊಳ' 'ಕೊಳ' ಎಂಬ ಪದ ಪ್ರಯೋಗದಿಂದ ತಿಳಿಯಬಹುದಾಗಿದೆ[೩೯]. ಈ ಬೀರಗೊಳ್‌ನ್ನು ವೀರನೊಬ್ಬನಿಗೆ ಅಲ್ಲದೆ ಅವನೊಂದಿಗೆ ಸತ್ತ ಇತರರಿಗೂ ಹಾಕಿಸುತ್ತಿದ್ದುಂಟು. ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯಲ್ಲಿ ಈ ಬೀರಗೊಳ್ ನಂಬಿಕೆಯ ಬಗ್ಗೆ ವಿವರಣೆಯಿದೆ[೪೦]. ಹಾಗೆಯೇ ವೀರಗಲ್ಲುಗಳ ಬಗ್ಗೆ ಅವುಗಳನ್ನು ಹಾಕಿಸುವ ಬಗ್ಗೆ ಮತ್ತು ಆಚರಣೆಯ ಬಗ್ಗೆ ಸಂಗಂ ಸಾಹಿತ್ಯದಲ್ಲಿ ಮಾಹಿತಿಯಿದೆ. ಇದರಲ್ಲಿ ವೀರಗಲ್ಲುನ್ನು ನೆಡುವ ವಿಧಾನವನ್ನು ಈ ರೀತಿ ಮಾಹಿತಿ ದೊರೆಯುತ್ತದೆ. ಮೊದಲನೆಯ ಕಲ್ಲನ್ನು ಆಯ್ಕೆ ಮಾಡಿಕೊಂಡು ವೀರಗಲ್ಲನ್ನು ನಿಲ್ಲಿಸಲು ಶುಭ ಮೂಹೂರ್ತವನ್ನು ನಿಗದಿಪಡಿಸಬೇಕು. ನಂತರ ಕಲ್ಲನ್ನು ಪವಿತ್ರ ತೀರ್ಥದಲ್ಲಿ ತೊಳೆದು ಅದರ ಮೇಲೆ ವೀರನ ಪರಾಕ್ರಮ ಹಾಗೂ ವ್ಯಕ್ತಿತ್ವದ ಗುಣಗಳನ್ನು ಕೆತ್ತಿ (ವೀರಶಾಸನ) ಕೆಲವು ಆಚರಣೆಗಳ ಮೂಲಕ ನೆಡಬೇಕು.

ತದ ನಂತರ ವೀರನ ಗುಣಗಾನವನ್ನು ಹೊಗಳಿ ಆರಾಧನೆ ಮಾಡಬೇಕು[೪೧].ಇದು ತಮಿಳಿನ 'ನಾಟ್ಟುಕಲ್' (ನಾಟ್ಟು ಎಂದರೆ ನೆಟ್ಟ ಪ್ರಾನ್ಸ್‌ಡ್ 'ಕಲ್' ಎಂದರೆ 'ವೀರಕಲ್ಲು' 'ವೀರಸ್ಮಾರಕ') ಎಂಬ ಪದ ಪ್ರಯೋಗದಿಂದ ಬಂದಿದೆ. ಈ ನಿಟ್ಟಕಲ್ಲುಗಳ ಬಗ್ಗೆ ತಮಿಳಿನ ಪ್ರಸಿದ್ಧ ಗ್ರಂಥವಾದ 'ತೋಳ್ಕಾಪಿಯಂ' 'ವೆನ್ಬಮಲ್ಯೆ' ಮುಂತಾದ ಗ್ರಂಥಗಳು ಉಲ್ಲೇಖಿಸುತ್ತವೆ[೪೨].

ವೀರಗಲ್ಲುಗಳನ್ನು ವೀರರ ಸಾವಿಗೆ ಕಾರಣಗಳನ್ನು ಆಧರಿಸಿ ಕೆಳಕಂಡಂತೆ ವಿಭಾಗಸಲಾಗಿದೆ.

೧. ಬೇಟೆಯಲ್ಲಿ ಸತ್ತ ವೀರರು.

೨. ಯುದ್ಧದಲ್ಲಿ ಸತ್ತ ವೀರರು.

೩. ನೀರಲ್ಲಿ ಮುಳುಗಿ ಸತ್ತ ವೀರರು.

೪. ಗಡಿ ಸಂಬಂಧಿತ ಕಾಳಗದಲ್ಲಿ ಸತ್ತ ವೀರರು.

೫. ಪೆಣ್ಬುಯ್ಯಲಿನಲ್ಲಿ ಸತ್ತ ವೀರರು.

೬. ಕಳ್ಳರೊಡನೆ ಹೋರಾಡಿ ಸತ್ತ ವೀರರು.

೭. ತುರುಗಾಳಗದಲ್ಲಿ ಮಡಿದವರು.

೮. ಊರಳಿವು ಅಥವಾ ಊರ ಹುಯ್ಯಲಿನಲ್ಲಿ ಸತ್ತ ವೀರರು.

ನನ್ನ ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಅನೇಕ ಹಳ್ಳಿಗಳಲ್ಲಿ ಮೇಲಿನ ವಿಧಗಳ ವೀರಗಲ್ಲುಗಳು ದೊರೆಕಿದ್ದು ಅವುಗಳಲ್ಲಿ ಕೆಲವುಗಳ ಛಾಯಾಚಿತ್ರಗಳನ್ನು ಮಾತ್ರ ಒದಗಿಸಿದ್ದೇನೆ. ಪ್ರಮುಖವಾಗಿ ಬಾಗಳಿ, ಉಚ್ಚಂಗಿದುರ್ಗ, ದೇವರತಿಮ್ಮಲಾಪುರ, ಅರಸೀಕೆರೆ, ಕಡ್ಲೆಬಾಳು, ಮಾಗಾನಹಳ್ಳಿ, ಬಾಲೇನಹಳ್ಳಿ, ನಾರಾಯಣದೇವರಕೆರೆ, ಬಂಡ್ರಿ, ಅಲಗಿಲವಾಡ, ವೀರನದುರ್ಗ, ತಂಬ್ರಹಳ್ಳಿ, ಕಂಚಿಕೆರೆ, ಹಿರೇಮ್ಯಾಗಳಗೆರೆ, ಕಸವನಹಳ್ಳಿ ಮುಂತಾದ ಸ್ಥಳಗಳಲ್ಲಿ ಹಲವಾರು ವೀರಗಲ್ಲುಗಳು ಕಂಡು ಬಂದಿವೆ. ಇವುಗಳಲ್ಲಿ ಬೇಟೆ, ಯುದ್ಧ, ಪೆಣ್ಬುಯಲ್, ತುರುಗಾಳಗಕ್ಕೆ ಸಂಬಂಧಿಸಿದ ವೀರಗಲ್ಲುಗಳು ಪ್ರಮುಖವಾಗಿ ದೊರಕಿರುವುದು ಅವುಗಳ ಆಧಾರದ ಮೇಲೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿನ ವೀರಗಲ್ಲುಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ನಮಗೆ ದೊರೆತಿರುವ ವೀರಗಲ್ಲುಗಳನ್ನು ತುರುಗೋಳ ವೀರಶಾಸನ, ಪೆಣ್ಬುಯಲ್ ಮತ್ತು ಯುದ್ಧ ನಿರತ ವೀರಗಲ್ಲುಗಳೆಂದು ಗುರುತಿಸಲಾಗಿದೆ.

ತುರುಗೋಳ್ ವೀರಗಲ್ಲುಗಳೆಂದರೆ ಗೋವುಗಳ ರಕ್ಷಣೆಗಾಗಿ ಹೋರಾಡಿ ಮಡಿದಂತಹ ವೀರರ ಸ್ಮಾರಕಗಳು ಪ್ರಾಚೀನ ಕಾಲದಲ್ಲಿ ಗೋವುಗಳೇ ಸಂಪತ್ತಿನ ಅಥವಾ ಶ್ರೀಮಂತಿಕೆಯ ಸಂಕೇತಗಳಾಗಿದ್ದವು. ಇಂತಹ ಗೋವುಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುವಾಗ ಅವರೊಂದಿಗೆ ಹೋರಾಡಿ ಗೋವುಗಳನ್ನು ಬಿಡಿಸಿದರೆ ಇಲ್ಲವೇ ಹೋರಾಟದಲ್ಲಿ ಸಾವನಪ್ಪಿದಾಗ ಹಾಕಿಸುತ್ತಿದ್ದ ವೀರಗಲ್ಲುಗಳೇ 'ತುರುಗೋಳ್' ವೀರಗಲ್ಲುಗಳಾಗಿವೆ. ಇವುಗಳಿಗೆ ಗೋಗ್ರಹಣ ವೀರಗಲ್ಲುಗಳೆಂದೂ ಸಹ ಕರೆಯಲಾಗಿದೆ. ಪಾಳೆಯಗಾರರ ಪ್ರದೇಶದ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿಯಲ್ಲಿ ತುರುಗೋಳ್ ವೀರಶಾಸನವೊಂದು ದೊರಕಿದ್ದು ಅದರ ಕೆಳಭಾಗದಲ್ಲಿ ವೀರನೊಬ್ಬ ಕಳ್ಳರೊಡನೆ ಹೋರಾಡುತ್ತಿರುವ ಚಿತ್ರ ಮೇಲ್ಭಾಗದಲ್ಲಿ ಗೋವುಗಳ ಚಿತ್ರ, ಅದರ ಮೇಲ್ಭಾಗದಲ್ಲಿ ವೀರನು ಕೈಮುಗಿದು ವಿಮಾನದಲ್ಲಿ ಕುಳಿತುಕೊಂಡು ಅಪ್ಸರೆಯೊಂದಿಗೆ ಸ್ವರ್ಗಕ್ಕೆ ಹೋಗುತ್ತಿರುವ ದೃಶ್ಯ ಮನಮೋಹಕವಾಗಿವೆ. ಹಾಗೆಯೇ ಮೇಲಿನ ಹಂತದಲ್ಲಿ ಶಿವಲಿಂಗವಿದ್ದು ಪೂಜೆ ಮಾಡುತ್ತಿರುವ ಯತಿಗಳ ಬಳಿ ವೀರನು ಕೈಮುಗಿದು ಕುಳಿತಿರುವ ಭಂಗಿಯ ಶಿಲ್ಪ ಎರಡೂ ಭಾಗಗಳ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಶಿಲ್ಪಗಳು ಕಂಡು ಬರುತ್ತವೆ.

ನಾರಾಯಣಕೆರೆ, ತಂಬ್ರಹಳ್ಳಿ, ಹಿರೇಮ್ಯಾಗಳಗೆರೆ, ಉಪನಾಯಕನಹಳ್ಳಿಗಳಲ್ಲಿ ಯುದ್ಧ ನಿರತ ವೀರರ ವೀರಗಲ್ಲುಗಳು ದೊರಕಿವೆ. ತಂಬ್ರಹಳ್ಳಿಯ ಬಾವಿಯ ಮುಂಭಾಗದಲ್ಲಿ ದೊರೆತಿರುವ ಸ್ಮಾರಕದಲ್ಲಿ ವೀರನೊಬ್ಬ ಕುದುರೆಯ ಮೇಲೆ ಕುಳಿತು ಶತ್ರುಪಕ್ಷದ ವೀರನ ಮೇಲೆ ಧಾಳಿ ಮಾಡುತ್ತಿರುವ ದೃಶ್ಯ ಆಕರ್ಷಣೀಯವಾಗಿದೆ. ಹಿರೇಮ್ಯಾಗಳಗೇರಿಯ ಔಷಧಿ ಅಂಗಡಿಯೊಂದರ ಮುಂಭಾಗದಲ್ಲಿರುವ ವೀರನ ಸ್ಮಾರಕ ಶಿಲೆಯಲ್ಲಿ ವೀರನೊಬ್ಬನು ಕುದುರೆಯನ್ನು ಪಳಗಿಸುತ್ತಿರುವ ದೃಶ್ಯವಿದೆ. ಹಾಗೆಯೇ ನಾರಾಯಣದೇವರ ಕೆರೆಯ ವೀರಗಲ್ಲಿನಲ್ಲಿ ವೀರರು ಭರ್ಜಿ ಕತ್ತಿಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಚಿಕ್ಕಹಳ್ಳಿಯಲ್ಲಿ ಮಹಾಸತಿ ಕಲ್ಲು ದೊರೆತಿದೆ ಸುಂದರವಾಗಿದೆ. ಹರಪನಹಳ್ಳಿ ಪಾಳೆಯಗಾರರ ಕಾಲದ ವೀರಪರಂಪರೆ, ಮಹಾಸತಿ ಹಾಗೂ ಶಿಲ್ಪ ಪರಂಪರೆ ಸಾಗಿ ಬಂದಿರುವುದನ್ನು ಈ ಕೆಳಕಂಡ ಕೆಲವು ಉದಾಹರಣೆಗಳಿಂದ ಗ್ರಹಿಸಬಹುದು.

**೧. ಪಂಚಮುಖಿ ಆಂಜನೇಯ ಶಿಲ್ಪ, ಹರಪನಹಳ್ಳಿ**

ಪಂಚಮುಖಿ ಆಂಜನೇಯ ಉಬ್ಬುಶಿಲ್ಪವು ಹರಪನಹಳ್ಳಿಯಿಂದ ೨ ಕಿ.ಮೀ. ದೂರದಲ್ಲಿ ಹೊಳಲು ರಸ್ತೆಯಲ್ಲಿ ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲಾದ ದೊಡ್ಡ ಮೈಲಾರಲಿಂಗೇಶ್ವರ ದೇವಾಲಯದ ಆವರಣದಲ್ಲಿರುವ ಅರಳೀಮರದ ಕಟ್ಟೆಯ ಮೇಲೆ ಕಂಡು ಬರುತ್ತದೆ. ಪ್ರಾಯಶಃ ಯಾವುದಾದರೂ ದೇವಾಲಯದಲ್ಲಿ ಪ್ರತಿಷ್ಠಾಪನೆಯಾಗಿದ್ದ ಈ ಮೂರ್ತಿಶಿಲ್ಪವನ್ನು ಕಾಲಾಂತರದಲ್ಲಿ ತಂದು ಇಲ್ಲಿ ಇಟ್ಟಿರಬಹುದು. ಯಾವುದೇ ಪೂಜೆ ಅರ್ಚನೆಗಳು ಇರುವುದಿಲ್ಲ. ಈ ಶಿಲ್ಪವು ಸುಮಾರು ೪೧/೨ ಅಡಿ ಎತ್ತರ ಮತ್ತು ೨೧/೨ ಅಡಿ ಅಗಲವಾಗಿದ್ದು ನೀಲಿ ಮಿಶ್ರಿತ ಬಳಪದ ಕಲ್ಲಿನಲ್ಲಿ ಸುಂದರವಾಗಿ ಕೆತ್ತಲ್ಪಟ್ಟಿದೆ. ಸಮಭಂಗಿಯಲ್ಲಿ ನಿಂತಿರುವ ಸ್ಥಿತಿಯಲ್ಲಿರುವ ಮೂರ್ತಿಯು ಪಂಚಮುಖಗಳನ್ನು, ದಶಬುಜಗಳನ್ನು ಹೊಂದಿದ್ದು ಪ್ರತಿ ಕೈಯಲ್ಲಿಯೂ ಒಂದೊಂದು ಆಯುಧಗಳ ಲಾಂಛನಗಳನ್ನು ಹಿಡಿದಿರುವನು. ಬಲಗೈಗಳಲ್ಲಿ ಚಕ್ರ, ಗದೆ, ಖಡ್ಗ, ಕುಂಭ ಕಳಸಗಳಿದ್ದರೆ ಎಡಗೈಗಳಲ್ಲಿ ತ್ರಿಶೂಲ, ದಂಡ, ಚಾಕು, ಪಾಶ ಮುಂತಾದವುಗಳಿವೆ ಬಲಕೈ ಅಭಯಹಸ್ತ ಬೀರುವಂತಿದೆ. ಪಂಚಮುಖಗಳಲ್ಲಿ ಪ್ರಧಾನ ಮುಖ ಭಾವ ಪ್ರಸನ್ನನಾಗಿದ್ದು ಇತರ ಮುಖಗಳು ವಿಷ್ಣುವಿನ ದಶಾವತಾರಗಳನ್ನು ಬಿಂಬಿಸುತ್ತವೆ. ಪ್ರತಿ ತಲೆಯ ಮೇಲೆ ಕಿರೀಟಗಳು ಆಲಂಕೃತಗೊಂಡಿವೆ. ಕೊರಳಲ್ಲಿ ಕಂಠೀಹಾರ, ಸೊಂಟಪಟ್ಟಿ, ಕೈಕಡಗ, ಕಾಲು ಕಡಗಗಳು ಮೂರ್ತಿಯ ಸೌಂದರ್ಯವನ್ನು ಹೆಚ್ಚಿಸಿವೆ. ಪಾದ ತಳದಲ್ಲಿ ಎಡಗಡೆ ದೊಡ್ಡ ಗದೆ ಇದ್ದು ವಸ್ತ್ರವನ್ನು ಧರಿಸಿದ್ದು ಇದು ಕುತ್ತಿಗೆಯ ಹಿಂಭಾಗದಿಂದ ಭುಜಗಳನ್ನು ಸುತ್ತಿಕೊಂಡು ಕೆಳಗೆ ಇಳಿದಿರುವಂತೆ ಭಾಸವಾಗುತ್ತದೆ. ಶಿಲ್ಪದ ಸುತ್ತಲೂ ಪ್ರಭಾವಳಿಯಿಂದ ಅಲಂಕಾರ ಗೊಳಿಸಲಾಗಿದೆ ನೆತ್ತಿಯ ಮೇಲೆ ಬಾಯಿ ತೆರೆದ ಸಿಂಹಾಕೃತಿಯಿದೆ. ಈ ಎಲ್ಲಾ ಲಕ್ಷಣಗಳಿಂದ ಪಂಚಮುಖಿ ಆಂಜನೇಯ ಶಿಲ್ಪ ಕಂಗೊಳಿಸುತ್ತಿದ್ದು, ಈ ಇವುಗಳನ್ನು ಅವಲೋಕಿಸಿ ಈ ಶಿಲ್ಪವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿದೆ ಎಂದು ಗ್ರಹಿಸಬಹುದು.

ಆದರೆ ರಚನೆ ಕುರಿತು ಯಾವುದೇ ಆಧಾರಗಳಿರುವುದಿಲ್ಲ. ದೊರೆತ ಸ್ಥಳ, ಪಾಳೆಯಗಾರರ ಸಂಸ್ಕೃತಿ ಪರಂಪರೆಯೊಂದಿಗೆ ಆಂಜನೇಯ ಸ್ವಾಮಿ ಪ್ರಭಾವಗಳನ್ನು ಗಮನಿಸಿ ಹೇಳಲಾಗಿದೆ.

**೨. ಕುದುರೆ ಮತ್ತು ವೀರನ ಶಿಲ್ಪ, ಹಿರೇಮ್ಯಾಗಳಗೇರಿ**

ಹಿರೇಮ್ಯಾಗಳಗೇರಿ ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಕೇಂದ್ರ, ಪಾಳೆಯಗಾರರ ಕಾಲದ ಕೋಟೆ, ಕಂದಕ, ಗರಡಿಮನೆ, ಉಯ್ಯಾಲೆಕಂಬ, ಆಂಜನೇಯ ದೇವಸ್ಥಾನ, ಸಪ್ತಮಾತೃಕೆಯರ ಶಿಲ್ಪ ಮುಂತಾದ ಪುರಾತತ್ವ ಆಧಾರಗಳು ಇವರ ಆಳ್ವಿಕೆಯನ್ನು ದೃಢಪಡಿಸುತ್ತವೆ. ಚಿತ್ರದುರ್ಗ ಪಾಳೆಯಗಾರರೊಂದಿಗೆ ಗಡಿಹಂಚಿಕೆಯಲ್ಲಿ ಈ ಸ್ಥಳ ಪ್ರಮುಖ ರಕ್ಷಣಾ ನೆಲೆಯಾಗಿದೆ.

ಈ ಗ್ರಾಮದ ಮಧ್ಯೆ ಇರುವ ಔಷಧಿ ಅಂಗಡಿ ಕಟ್ಟೆಯ ಮೇಲಿಟ್ಟಿರುವ ವೀರ ಮತ್ತು ಕುದುರೆಯ ಉಬ್ಬುಶಿಲ್ಪವಿರುವ ವೀರಗಲ್ಲು ಅತ್ಯಾಕರ್ಷಕವಾಗಿದೆ. ಹರಪನಹಳ್ಳಿ ಮತ್ತು ಚಿತ್ರದುರ್ಗದವರ ನಡುವೆ ಈ ಪರಿಸರದಲ್ಲಿ ಪದೇ ಪದೇ ನಾನಾ ಕಾರಣಗಳಿಗಾಗಿ ಘರ್ಷಣೆಗಳು ಆಗಿರುವುದು ತಿಳಿದಿರುವ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ದೊರೆತಿರುವ ವೀರಗಲ್ಲು ಮಹತ್ವಪೂರ್ಣವಾದುದಾಗಿದೆ.

ಈ ವೀರಗಲ್ಲು ಸುಮಾರು ೪ ಅಡಿ ಎತ್ತರ ಮತ್ತು ೨ ಅಡಿ ಅಗಲ ೧ ಅಡಿ ದಪ್ಪವಾಗಿರುವ ನೀಲಿ ಮಿಶ್ರಿತ ಬಳಪದ ಶಿಲೆಯಲ್ಲಿ ಕೆತ್ತಿ ನಿರ್ಮಿಸಲಾಗಿದೆ. ವೀರನು ಕುದುರೆಯನ್ನು ಪಳಗಿಸುವಂತೆ ಚಿತ್ರಿತವಾಗಿದೆ. ಇವನು ದಪ್ಪಪುಷ್ಟವಾದ, ಪುಷ್ಕಳ ಅಂಗರಚನೆಯನ್ನು ಹೊಂದಿ ನಿಂತ ಭಂಗಿಯಲ್ಲಿದ್ದಾನೆ. ಬಲಗಾಲು ಮುಂದು ಮಾಡಿ ಎಡಗಾಲು ಹಿಂದಿದೆ, ಬಲ ಕೈಯಲ್ಲಿ ಖಡ್ಗ ಹಾಗೂ ಎಡ ಕೈಯಿಂದ ಕುದುರೆಯನ್ನು ಹಿಡಿದಿದ್ದಾನೆ. ದುಂಡು ಮುಖ, ಅಗಲವಾದ ಕಿವಿಗಳು, ದಪ್ಪನೆಯ ನೀಳ ಕೂದಲುಗಳನ್ನು ಹಿಂಬದಿಗೆ ಬಾಚಿಕೊಂಡು ಮೇಲೆ ತುರುಬು ಕಟ್ಟಿದ್ದಾನೆ. ಕುದುರೆಯು ಲಗಾಮು, ತುರಾಯಿ, ಇತರ ಅಲಂಕಾರಗಳಿಂದ ಸಿಂಗಾರಗೊಂಡು ಎರಡೂ ಕಾಲುಗಳನ್ನು ಮೇಲಕ್ಕೆ ಎತ್ತಿ ನಿಂತಿದೆ.

ವೀರನ ಹಿಂಬದಿಯಲ್ಲಿ ಇನ್ನೊಂದು ಕುದುರೆಯೂ ಸಹ ನಿಂತ ಭಂಗಿಯಲ್ಲಿದ್ದು ಮುಂಗಾಲುಗಳನ್ನು ಮೇಲಕ್ಕೆ ಎತ್ತಿದೆ. ವೀರ ಮತ್ತು ಕುದುರೆಯನ್ನು ಬಳಸಿಕೊಂಡು ಪ್ರಭಾವಳಿಯ ಅಲಂಕಾರವಿದೆ ಮಧ್ಯದಲ್ಲಿ ಬಾಯಿ ತೆರೆದ ಸಿಂಹಾಕೃತಿಯಿದೆ.

ವೀರನು ಕೊರಳಲ್ಲಿ ಕಂಠೀಹಾರ, ಉದ್ದನೆಯ ಸರ, ಕೈಕಡಗ, ತೋಳ್ಬಂದಿ, ಕಾಲಿನ ಕಡಗ ಧರಿಸಿದ್ದಾನೆ. ಸೊಂಟಕ್ಕೆ ಬಟ್ಟೆ ಧರಿಸಿ ಕಚ್ಚೆಪಂಜಿಯನ್ನು ಹಾಕಿ ಕಟ್ಟಿರುವಂತಿದೆ. ಈ ದೃಶ್ಯ ವಿವರಿಸುವ ಯಾವುದೇ ಶಾಸನಗಳು ದೊರೆತಿರುವುದಿಲ್ಲ. ಈ ಸ್ಥಳದ ಪಾಳೆಯಗಾರರ ಇತಿಹಾಸ, ಭೌಗೋಳಿಕ

ನೆಲೆ, ದೊರೆತ ಇತರ ಪುರಾತತ್ವ ಆಧಾರಗಳ ಹಿನ್ನೆಲೆಯಲ್ಲಿ ಈ ವೀರಗಲ್ಲು ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ವೇದ್ಯವಾಗುತ್ತದೆ.

**೩. ವೀರಗಲ್ಲು, ಉಪನಾಯಕನಹಳ್ಳಿ**

ಹಗರಿಬೊಮ್ಮನಹಳ್ಳಿ ತಾಲೂಕಿನ ಉಪನಾಯಕನಹಳ್ಳಿ ಒಂದು ಪ್ರಮುಖ ಕೇಂದ್ರ, ಹರಪನಹಳ್ಳಿ ಪಾಳೆಯಗಾರರ ಕಾಲದ ಕೋಟೆ ಇತ್ತೆಂದು ಸ್ಥಳೀಯರು ಹೇಳುತ್ತಾರೆ. ಇಂದು ಕೋಟೆ ಕಂಡುಬರುವುದಿಲ್ಲ ಕೇವಲ ಕೋಟೆ ಬೀದಿ, ಪ್ರದೇಶವನ್ನು ಸ್ಥಳೀಯರು ತೋರಿಸುತ್ತಾರೆ ಈ ಕಾಲದ ಆಂಜನೇಯ ದೇವಸ್ಥಾನವಿದೆ. ಜೀರ್ಣೋದ್ಧಾರಗೊಂಡಿದೆ. ಈ ಆಂಜನೇಯ ದೇವಾಲಯದ ಪಾರ್ಶ್ವದಲ್ಲಿ ಒಂದು ವೀರಗಲ್ಲು ಮತ್ತು ಒಂದು ಮಹಾಸತಿ ಕಲ್ಲುಗಳನ್ನು ನೆಲದ ಮೇಲೆ ನಿಲ್ಲಿಸಲಾಗಿದೆ. ಇವುಗಳಿಗೆ ಬಣ್ಣಬಳಿಯಲಾಗಿದೆ ಇದರಿಂದ ಶಿಲೆಯ ಪ್ರಕಾರವನ್ನು ಗುರ್ತಿಸಲು ಸಾಧ್ಯವಾಗುವುದಿಲ್ಲ.

ವೀರಗಲ್ಲು ಸುಮಾರು ೪ ಅಡಿ ಎತ್ತರವಾಗಿದ್ದು ೩ ಅಡಿ ಅಗಲವಾಗಿದೆ. ವೀರನು ಬಲಗಾಲನ್ನು ಮುಂದೆ ಮಾಡಿ ಎಡಗಾಲನ್ನು ಹಿಂದೆ ಮಾಡಿಕೊಂಡು ಎಡಗೈಯಿಂದ ಬಿಲ್ಲನ್ನು ಹಿಡಿದು ಬಲಗೈಯಿಂದ ಬಾಣವನ್ನು ಬಿಡುತ್ತಿರುವಂತೆ ಚಿತ್ರಿತವಾಗಿದೆ. ವೀರನು ಕೂದಲನ್ನು ಬಾಚಿಕೊಂಡು ತುರುಬು ಕಟ್ಟಿಕೊಂಡಿದ್ದಾನೆ. ಉಳಿದಂತೆ ಇತರ ಲಕ್ಷಣಗಳು ಗೋಚರಿಸುವುದಿಲ್ಲ. ವೀರಗಲ್ಲು ಮೇಲುತುದಿಯಲ್ಲಿ ಸೂರ್ಯ, ಚಂದ್ರ, ಬಸವ ಹಾಗೂ ಲಿಂಗ ಮುದ್ರೆ ಇದ್ದು ವೀರನು ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುವನು. ಈ ಗ್ರಾಮದ ಸಮೀಪದ ನಾರಾಯಣದೇವರಕೆರೆ ಹರಪನಹಳ್ಳಿ ಪಾಳೆಯಗಾರರ ರಾಜಧಾನಿಯಾಗಿತ್ತು. ಈ ಊರಿನ ಪ್ರಮುಖ ವೀರನೊಬ್ಬನ ಶಿಲ್ಪ ಇದಾಗಿರಬಹುದು, ಯಾವುದೇ ಶಾಸನಗಳು ಕಂಡುಬರುವುದಿಲ್ಲ.

**೪. ವೀರಗಲ್ಲು ಮೆರವಣಿಗೆ ದೃಶ್ಯ, ತಂಬ್ರಹಳ್ಳಿ**

ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಹರಪನಹಳ್ಳಿ ಪಾಳೆಯಗಾರರ ಸಾಮಂತ ಅರಸ ಓಬರ ನಾಯಕನ ಆಡಳಿತ ಕೇಂದ್ರ, ಪಾಳೆಯಗಾರರ ಕಾಲದ ಕೋಟೆ, ಕೊತ್ತಲ, ಪುಷ್ಕರಣಿ ಇಲ್ಲಿ ದೊರೆತಿವೆ.

ತಂಬ್ರಹಳ್ಳಿ ಗ್ರಾಮದಿಂದ ೪ ಕಿ.ಮೀ. ದೂರದಲ್ಲಿ ರಂಗನಾಥನ ಚಿಕ್ಕ ಬೆಟ್ಟವಿದೆ ಇದನ್ನು ಬಳಸಿಕೊಂಡು ನಿರ್ಮಿಸಲಾಗಿದ್ದ ಕೋಟೆ ನಶಿಸಿಹೋಗಿದೆ. ಸಣ್ಣ ೫ ಅಡಿ ಎತ್ತರದ ಕೊತ್ತಲ ಬೆಟ್ಟದ ಮೇಲೆ ಕಂಡುಬರುತ್ತದೆ. ಬೆಟ್ಟದ ಕೆಳಗೆ ರಸ್ತೆಗೆ ಹೊಂದಿಕೊಂಡು ಸುಂದರವಾದ ಪುಷ್ಕರಣಿ ಇದೆ.

ಸ್ಥಳೀಯರು ಇದನ್ನು ಪಾಳೆಯಗಾರರ ಸಾಮಾಂತಾಧಿಕಾರಿ ಓಬರನಾಯಕ ನಿರ್ಮಿಸಿದನೆಂದು ಹೇಳುತ್ತಾರೆ. ಯಾವುದೇ ಶಾಸನಾಧಾರಗಳು ಇರುವುದಿಲ್ಲ. ಪುಷ್ಕರಣಿ ಸುಂದರವಾಗಿ ಕಾಣುವಂತೆ

ಮೆಟ್ಟಿಲುಗಳು, ಇದಕ್ಕೊಂದು ಅಲಂಕೃತ ಪ್ರವೇಶದ್ವಾರ ಎಡಬಲ ಜಗುಲಿ ಇದೆ. ಈ ಪ್ರವೇಶ ದ್ವಾರದ ಮುಂದೆ ಬೇರೆ ಪ್ರದೇಶದಿಂದ ತಂದು ಇಲ್ಲಿ ಇಟ್ಟಿರಬಹುದಾದ ವೀರನ ಶಿಲ್ಪವೊಂದಿದೆ.

ಈ ಶಿಲ್ಪವು ಸುಮಾರು ೩ ಅಡಿ ಅಗಲ ಹಾಗೂ ೨ ಅಡಿ ಎತ್ತರದ ಬಳಿ ಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಇದರಲ್ಲಿ ಎರಡು ದೃಶ್ಯಗಳು ಕಂಡುಬರುತ್ತವೆ. ದೃಶ್ಯ ಒಂದರಲ್ಲಿ ಅಲಂಕೃತ ಸಮಸ್ಥಿತಿಯಲ್ಲಿ ನಿಂತಿರುವ ಕುದುರೆ, ಇದರ ಮೇಲೆ ಸುಂದರವಾಗಿರುವ ಯುವಕನೊಬ್ಬನು ಕುಳಿತಿರುವನು. ಎಡಗೈಯಲ್ಲಿ ಕುದುರೆಯ ಹಗ್ಗ ಹಿಡಿದು ಬಲಗೈಯನ್ನು ಮೇಲಕ್ಕೆ ಎತ್ತಿರುವನು. ಕುದುರೆಯ ಬೆನ್ನು ಮೇಲೆ ಮೆತ್ತನೆಯ ಥಡಿ ಹಾಸಿದೆ, ಬಾಲವು ಸೆಟೆದು ನಿಂತಿದೆ.

ಎರಡನೇ ದೃಶ್ಯದಲ್ಲಿ ಕುದುರೆಯ ಮುಂದೆ ವೀರನು ನಡೆದುಕೊಂಡು ಹೋಗುವಂತೆ ಚಿತ್ರಿತವಾಗಿದೆ. ತುರುಬುಕಟ್ಟಿಕೊಂಡಿರುವ ವೀರನು ಬಲಗೈಯಲ್ಲಿ ಖಡ್ಗ ಹಾಗೂ ಎಡಕೈಯ್ಯಲ್ಲಿ ಕೋವಿ ಹಿಡಿದಿರುವನು. ಅತ್ಯಂತ ಸುಂದರವಾಗಿ ಚಿತ್ರಿತವಾಗಿರುವ ಈ ಶಿಲ್ಪ ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ಹೇಳಲು ಸಾಂದರ್ಭಿಕ ದಾಖಲೆಗಳಿಂದ ಸಾಧ್ಯ. ಈ ದೃಶ್ಯ ಬಹುತೇಕ ಮೆರವಣಿಗೆ ಹೊರಟಂತೆ ಚಿತ್ರಿತವಾಗಿದೆ. ತಂಬ್ರಹಳ್ಳಿಗೆ ಸಮೀಪದಲ್ಲಿಯೇ ನಾರಾಯಣದೇವರಕೆರೆ ಇದೆ. ಹರಪನಹಳ್ಳಿ ಪಾಳೆಯಗಾರರ ಸಾಮಾಂತಾಧಿಕಾರಿ ಓಬರ ನಾಯಕ ಹರಪನಹಳ್ಳಿ ಪಾಳೆಯಗಾರನ ಮೆರವಣಿಗೆ ನಡೆಸಿರಬಹುದಾಗಿದೆ.

**೫. ವೀರ–ಮಹಾಸತಿ ಕಲ್ಲು, ಕ.ವಿ.ವಿ. ಮ್ಯೂಸಿಯಂ, ಹಂಪಿ**

ಕನ್ನಡ ವಿಶ್ವವಿದ್ಯಾಲಯದ ಅವರಣದಲ್ಲಿರುವ ವಸ್ತುಸಂಗ್ರಹಾಲಯದಲ್ಲಿ ಸುಮಾರು ೨ ಅಡಿ ಅಗಲ ಹಾಗೂ ೩ ಅಡಿ ಎತ್ತರ ಕಪ್ಪುಶಿಲೆಯಿಂದ ಮಾಡಿರುವ ಸುಂದರ ವೀರ ಮತ್ತು ಈತನ ಸತಿಯನ್ನು ಬಿಂಬಿಸಿರುವ ಶಿಲ್ಪವೊಂದು ಇದೆ. ವೀರ ಮತ್ತು ಈತನ ಸತಿಯ ಉಬ್ಬು ಶಿಲ್ಪಗಳು ಸುಂದರ ಅಂಗರಚನೆ ಹೊಂದಿದೆ. ವೀರನು ಬಲಗೈಯಲ್ಲಿ ಕೋವಿ ಹಿಡಿದಿದ್ದು ಕೋವಿಯ ತುದಿಯನ್ನು ಎಡಗೈಯಿಂದ ಎತ್ತಿ ಹಿಡಿದಿರುವನು ಸೊಂಟದಲ್ಲಿ ಬಾಕನ್ನು ಸಿಕ್ಕಿಸಿಕೊಂಡಿದ್ದನು. ಕೇಶವನ್ನು ಮೇಲಕ್ಕೆ ಬಾಚಿಕೊಂಡು ತುರುಬುಕಟ್ಟಿದ್ದಾನೆ. ದುಂಡು ಮುಖ, ಅಗಲವಾದ ಕಿವಿಗಳು, ಕೊರಳಲ್ಲಿ ಹಾರ, ಕಂಡುಬರುತ್ತವೆ.

ವೀರನ ಪಕ್ಕದಲ್ಲಿಯೇ ಇನ್ನೊಂದು ಪಟ್ಟಿಕೆಯಲ್ಲಿ ಮಹಾಸತಿಯ ಶಿಲ್ಪವಿದೆ. ಈಕೆಯು ಆಭರಣ ಮತ್ತು ವಸ್ತ್ರಗಳಿಂದ ಅಲಂಕಾರ ಮಾಡಿಕೊಂಡು ಬಲಗೈಯನ್ನು ಮೇಲಕ್ಕೆ ಎತ್ತಿದ್ದಾಳೆ, ಎಡಗೈಯಲ್ಲಿ ನಿಂಬೆಹಣ್ಣು ಹಿಡಿದು ಮೇಲೆ ಎತ್ತಿದ್ದಾಳೆ. ಕೇಶವನ್ನು ಬಾಚಿಕೊಂಡು ತುರುಬು ಹಾಕಿಕೊಂಡಿದ್ದಾಳೆ. ಕೊರಳಲ್ಲಿ ಆಭರಣಗಳನ್ನು ಧರಿಸಿದ್ದಾಳೆ. ಒಂದೇ ಕಲ್ಲಿನಲ್ಲಿ ಈ ಎರಡೂ

ಶಿಲ್ಪಗಳನ್ನು ಪ್ರತ್ಯೇಕಿಸಿ ರಚಿಸಲಾಗಿದೆ. ಆಲಂಕೃತ ಪ್ರಭಾವಳಿ ಇದೆ. ಶಿಲೆ, ವೇಷಭೂಷಣ, ಕೇಶಾಲಂಕಾರ ಗಮನಿಸಿ ಈ ಶಿಲ್ಪ, ಹರಪನಹಳ್ಳಿ ಪಾಳೆಯಗಾರರ ಕಾಲದ್ದೆಂದು ಊಹಿಸಲು ಅವಕಾಶವಿದೆ.

**೬. ಮಹಾಸತಿ ಕಲ್ಲು, ಉಪನಾಯಕನಹಳ್ಳಿ**

ಹಗರಿಬೊಮ್ಮನಹಳ್ಳಿ ತಾಲೂಕಿನ ಉಪನಾಯಕನಹಳ್ಳಿ ಹರಪನಹಳ್ಳಿ ಪಾಳೆಯಗಾರರ ಪ್ರಮುಖ ಕೇಂದ್ರ. ಇಲ್ಲಿಯ ಕೋಟೆ ಪ್ರದೇಶದ ಆಂಜನೇಯ ದೇವಸ್ಥಾನ ಆವರಣದಲ್ಲಿ ಈ ಮಹಾಸತಿ ಕಲ್ಲನ್ನು ನಿಲ್ಲಿಸಿ ಬಣ್ಣ ಬಳಿಯಲಾಗಿದೆ.

ಇಬ್ಬರು ಮಹಾಸತಿಯರು ಸತಿ ಹೋಗಿರುವ ದೃಶ್ಯ ಬಿಂಬಿತವಾಗಿದೆ. ಶಿಲ್ಪಗಳಲ್ಲಿ ಇವರ ಎತ್ತರ ಮತ್ತು ಗಾತ್ರ ಬೇರೆ ಬೇರೆಯಾಗಿವೆ. ಬಹುಶಃ ಅಕ್ಕ ತಂಗಿಯರು ಇರಬಹುದು. ಈ ಕಲ್ಲಿನ ಪಕ್ಕದಲ್ಲಿಯೇ ವೀರನ ಕಲ್ಲು ಇರುವುದರಿಂದಾಗಿ ಈ ಮಹಾಸತಿಯರು ಈ ವೀರನ ಪತ್ನಿಯರಾಗಿರಬಹುದು. ಲಕ್ಷಣಗಳು ಒಂದೇ ರೀತಿಯಾಗಿವೆ. ಸತಿಯರೀರ್ವರೂ ಕೇಶ ಮತ್ತು ವಸ್ತ್ರಾಭರಣಗಳಿಂದ ಅಲಂಕೃತರಾಗಿದ್ದಾರೆ. ಚಿಕ್ಕಸತಿ ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದು ಎಡಕೈಯನ್ನು ಇಳಿ ಬಿಟ್ಟಿದ್ದಾಳೆ. ಪಕ್ಕದಲ್ಲಿ ಹಿರೇಸತಿ ತನ್ನೆರಡೂ ಕೈಗಳನ್ನು ಜೋಡಿಸಿ ಕೈಮುಗಿದು ನಿಂತಿರುತ್ತಾಳೆ. ಮೇಲ್ಭಾಗದಲ್ಲಿ ಬಸವ, ಲಿಂಗ ಮುದ್ರೆ ಇದ್ದು ಪಕ್ಕದಲ್ಲಿ ಈ ಸತಿಯರೀರ್ವರು ಪದ್ಮಾಸನದಲ್ಲಿ ಕುಳಿತಿರುತ್ತಾರೆ. ಸೂರ್ಯ, ಚಂದ್ರರು ಚಿತ್ರಿತರಾಗಿದ್ದಾರೆ. ಈ ಮೇಲ್ಕೈ ಲಕ್ಷಣಗಳನ್ನು ಗಮನಿಸಿ ಈ ಗ್ರಾಮದ ವೀರನ ಮತ್ತು ಈತನ ಪತ್ನಿಯರ ಮಹಾಸತಿ ಕಲ್ಲುಗಳು ಇವಾಗಿದ್ದು, ಲಕ್ಷಣಗಳಿಂದ ಹರಪನಹಳ್ಳಿ ಪಾಳೆಯಗಾರರ ಕಾಲದವರೆಂದು ನಿರ್ಧರಿಸಬಹುದು.

**೭. ಮಹಾಸತಿ ಕಲ್ಲುಗಳು, ನಾರಾಯಣದೇವರಕೆರೆ**

ನಾರಾಯಣದೇವರಕೆರೆ ಹರಪನಹಳ್ಳಿ ಪಾಳೆಯಗಾರರ ರಾಜಧಾನಿಯಾಗಿತ್ತು. ಇವರ ಪ್ರಮುಖ ಕೋಟೆ, ಅರಮನೆ, ದೇವಾಲಯಗಳು, ದರ್ಬಾರ್ ಹಾಲ್ ಇಲ್ಲಿ ನಿರ್ಮಾಣಗೊಂಡಿದ್ದವೆಂದು ದಾಖಲೆಗಳಿಂದ ತಿಳಿದುಬರುತ್ತದೆ. ಆದರೆ ತುಂಗಭದ್ರಾ ಅಣೆಕಟ್ಟು ನಿರ್ಮಾಣದಿಂದಾಗಿ ಈ ಸ್ಮಾರಕಗಳೆಲ್ಲವೂ ಹಿನ್ನೀರಿನಲ್ಲಿ ಮುಳುಗಿ ಹೋಗಿದ್ದು ಇಲ್ಲಿಯ ಕೋಟೆ, ಪುಷ್ಕರಣಿ, ವಸತಿಗೃಹಗಳು, ದೇವಾಲಯ ಅವಶೇಷಗಳು ಬೇಸಿಗೆ ಕಾಲದಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಎರಡು ಮಹಾಸತಿ ಕಲ್ಲುಗಳು ಪ್ರಮುಖವಾಗಿವೆ.

ಬಿಳಿ ಕಣಶಿಲೆಯಿಂದ ನಿರ್ಮಾಣಗೊಂಡಿರುವ ಈ ಎರಡೂ ಮಹಾಸತಿ ಕಲ್ಲುಗಳು ಅಕ್ಕಪಕ್ಕದಲ್ಲಿ ಇವೆ ೧ನೇ ಮಾಸ್ತಿಕಲ್ಲಿನಲ್ಲಿ ವೀರ ಮತ್ತು ಸತಿ ದೃಶ್ಯ ಇದೆ. ಸುಮಾರು ೩೧/೨ ಅಡಿ

ಅಗಲ ಹಾಗೂ ೩ ಅಡಿ ಎತ್ತರವಾಗಿರುವ ಈ ಶಿಲ್ಪದಲ್ಲಿ ವೀರನು ಹೋರಾಟ ಮಾಡುತ್ತಿರುವಂತಿದೆ. ಬಲಿಷ್ಠ ಅಂಗರಚನೆ ಇದ್ದು ಎಡ ಕೈಯ್ಯಲ್ಲಿ ಬಾಕು ಹಾಗೂ ಬಲ ಕೈಯ್ಯಲ್ಲಿ ಕೋವಿ ಹಿಡಿದಿರುವಂತಿದೆ. ತುರುಬು ಕಟ್ಟಿದ್ದಾನೆ ಹೆಚ್ಚಿನ ವಿವರಗಳಿಲ್ಲ, ಪಕ್ಕದಲ್ಲಿ ಸತಿ ಅಲಂಕಾರ ಮಾಡಿಕೊಂಡು ಎರಡು ಕೈಗಳನ್ನು ಮೇಲಕ್ಕೆ ಎತ್ತಿ ನಿಂಬೆ ಹಣ್ಣುಗಳನ್ನು ಹಿಡಿದಿರುವಂತಿದೆ. ಬಹುತೇಕ ನೀರಿನಲ್ಲಿ ನಿಂತು ಶಿಲ್ಪಗಳು ಸವೆದು ಹೋಗಿವೆ.

೨ನೆಯ ಮಹಾಸತಿ ಕಲ್ಲು ೨ ಅಡಿ ಅಗಲ ಮತ್ತು ೨೧/೨ ಅಡಿ ಎತ್ತರವಾಗಿದ್ದು ಅಲಂಕಾರಗೊಂಡ ವೀರ ಮತ್ತು ಸತಿಯ ದೃಶ್ಯಗಳಿವೆ. ವೀರನ ಅಂಗರಚನೆ ಬಲಿಷ್ಠವಾಗಿದೆ. ದುಂಡುಮುಖ, ಚೂಪಾಗಿ ತೀಡಿದ ಮೀಸೆ, ಕೇಶ ಬಾಚಿಕೊಂಡು ಕಟ್ಟಿದ ತುರುಬು, ಕೈ ಕಡಗ, ತೋಳ್ಬಂದಿ, ಸೊಂಟಪಟ್ಟಿ ಇದೆ. ಬಲಗೈಯನ್ನು ಮೇಲೆತ್ತಿ ಖಡ್ಗ ಹಿಡಿದಿರುವನು. ಎಡಗೈಯಲ್ಲಿ ಶತ್ರುವಿನ ರುಂಡ ಹಿಡಿದಿರುವಂತಿದೆ.

ಪಕ್ಕದ ಸತಿ ಸುಂದರವಾಗಿ ಅಲಂಕಾರ ಮಾಡಿಕೊಂಡು ತನ್ನೆರಡೂ ಕೈಗಳ ಹಸ್ತ ಜೋಡಿಸಿ ಕೈಮುಗಿದು ನಿಂತಿದ್ದಾಳೆ. ಮುಖದ ಸೌಂದರ್ಯ ಅಗಲವಾದ ಕಿವಿಗಳು, ಕೇಶವನ್ನು ಬಾಚಿಕೊಂಡು ಕಟ್ಟಿದ ತುರುಬು ಆಕರ್ಷಣೀಯವಾಗಿದೆ. ಎರಡೂ ತೋಳುಗಳಿಗೆ ತೋಳ್ಬಂದಿ ಧರಿಸಿದ್ದಾಳೆ. ಇದಕ್ಕೆ ಹೊರತಾದ ಹೆಚ್ಚಿನ ವಿವರಗಳಿರುವುದಿಲ್ಲ. ಶಿಲ್ಪಗಳ ಸೌಂದರ್ಯ ಗಮನಸೆಳೆಯುವಂತಿದೆ. ಈ ಹಿನ್ನೆಲೆಯಲ್ಲಿ ಬಿಂಬಿತವಾಗಿರುವ ಈ ವೀರ ಮತ್ತು ಸತಿ ಈರ್ವರೂ ಪಾಳೆಯಗಾರರ ಪರಿವಾರದವರಿರಬಹುದೆಂದು ಅಂದಾಜಿಸಬಹುದು.

**೮. ಮಹಾಸತಿ ಕಲ್ಲು ಮತ್ತು ಶಾಸನ, ಚಿಕ್ಕಹಳ್ಳಿ**

ಹರಪನಹಳ್ಳಿ ಹಡಗಲಿ ಮಾರ್ಗದಲ್ಲಿ ಹರಪನಹಳ್ಳಿಯಿಂದ ೮ ಕಿ.ಮೀ. ದೂರದಲ್ಲಿ ಈ ಪಾಳೆಯಗಾರರ ಪ್ರಮುಖ ರಕ್ಷಣಾ ನೆಲೆ ಹಾಗೂ ಹೂಡೇವು ಹೊಂದಿರುವ ಚಿಕ್ಕಹಳ್ಳಿ ಎಂಬ ಗ್ರಾಮವಿದೆ. ಬಾಗಳಿ ಹಾಗೂ ಕೂಲಹಳ್ಳಿ ರಕ್ಷಣೆಯಲ್ಲಿ ಇಲ್ಲಿಯ ಕಾವಲು ಗೋಪುರ ಪ್ರಮುಖ ಪಾತ್ರವಹಿಸಿತ್ತು. ಗ್ರಾಮದ ಬಾಗಿಲಿಗೆ ಆಂಜನೇಯ ದೇವಸ್ಥಾನ ಹಾಗೂ ದೀಪಸ್ತಂಭವಿದೆ. ಪಾಳೆಯಗಾರರ ಕಾಲದ ಆಂಜನೇಯ ದೇವಸ್ಥಾನ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಆಂಜನೇಯ ಸ್ವಾಮಿಯ ಉಬ್ಬುಶಿಲ್ಪ ಮಾತ್ರ ಇವರ ಕಾಲದ್ದಾಗಿದೆ. ಈ ದೇವಾಲಯದ ಎದುರು ಒಂದು ಸುಂದರವಾದ, ಆಕರ್ಷಕವಾದ ಶಾಸನೋಕ್ತ ಮಹಾಸತಿ ಕಲ್ಲು ಇದೆ. ಇದೊಂದು ಶಾಸನಶಿಲ್ಪ ವರ್ಗೀಕರಣಕ್ಕೆ ಉತ್ತಮ ಉದಾಹರಣೆಯಾಗಿದೆ. ಈ ಶಾಸನ ಶಿಲ್ಪ ಇತ್ಯಾದಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧೧ರಲ್ಲಿ ಪ್ರಕಟಗೊಂಡಿರುವುದಿಲ್ಲ. ಶಾಸನ ಲಿಪಿಗಳು ಮಸುಕಾಗಿವೆ, ಆದರೆ ಶಿಲ್ಪ ಮಾತ್ರ ಸೊಗಸಾಗಿದೆ.

ಈ ಮಹಾಸತಿ ಕಲ್ಲು ಮತ್ತು ಶಾಸನ ೫ ಅಡಿ ಎತ್ತರ ೨ ಅಡಿ ಅಗಲವಾಗಿದ್ದು ನೀಲಿ ಮಿಶ್ರಿತ ಬಳಪದ ಕಲ್ಲಿನಿಂದ ರಚಿತವಾಗಿದೆ. ನೆಲದಲ್ಲಿ ಹೂಳಲಾಗಿದ್ದು ಸಂಪೂರ್ಣವಾಗಿ ಕಾಣಿಸುತ್ತದೆ. ಸ್ಪಷ್ಟವಾಗಿ ಶಿಲೆಯ ಮಧ್ಯೆ ಶಿಲ್ಪ ಚಿತ್ರಿತವಾಗಿದ್ದು ಮೇಲ್ಭಾಗದಲ್ಲಿ ೧೩ ಸಾಲುಗಳುಳ್ಳ ಶಾಸನವಿದೆ. ಇದರ ಮೇಲ್ಭಾಗದಲ್ಲಿ ಲಿಂಗಮುದ್ರೆ ಇದೆ.

ಈ ಮಹಾಸತಿ ಕಲ್ಲಿನ ದೃಶ್ಯಗಳಲ್ಲಿ ವೀರನು ಹೋರಾಡುತ್ತಿರುವುದು ಬಿಂಬಿತವಾಗಿದೆ. ಎಡ ಕೈಯ್ಯಲ್ಲಿ ಬಿಲ್ಲು ಹಿಡಿದು ಬಲ ಕೈಯಿಂದ ಬಾಣವನ್ನು ಬಿಡುತ್ತಿರುವಂತಿದೆ. ಶತ್ರು ವೀರನ ಪಾದ ತಳದಲ್ಲಿ ಸತ್ತು ಬಿದ್ದಿದ್ದಾನೆ. ವೀರನ ಇಬ್ಬರು ಪತ್ನಿಯರು ಸತಿ ಹೋಗುವ ದೃಶ್ಯವಿದೆ. ಸತಿಯರು ಕೇದಿಗೆ, ಆಭರಣ ಹಾಗೂ ವಸ್ತ್ರಗಳಿಂದ ಅಲಂಕಾರಗೊಂಡು ಸತಿ ಪ್ರವೇಶಿಸಲು ಸಿದ್ಧವಾಗಿರುವಂತೆ ಬಿಂಬಿತರಾಗಿದ್ದಾರೆ.

ಶಾಸನ ಮಸಕಾಗಿದ್ದು ಓದಲು ಅಸ್ಪಷ್ಟವಾಗಿದೆ ಕೇವಲ ಕೆಲ ಕೆಲ ಅಕ್ಷರಗಳು ಅಲ್ಲಲ್ಲಿ ಗುರುತಿಸಲ್ಪಡುತ್ತವೆ. ಭೌಗೋಳಿಕ ಸನ್ನಿವೇಶ, ಅಲಂಕಾರ ಇತ್ಯಾದಿಗಳಿಂದ ಇದು ಹರಪನಹಳ್ಳಿ ಪಾಳೆಯಗಾರರ ಕಾಲದ್ದು ಎನ್ನಬಹುದು. ಹಾಗಾದಲ್ಲಿ ಹರಪನಹಳ್ಳಿ ಪಾಳೆಯಗಾರರ ಶಾಸನಶಿಲ್ಪಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ.

**೫.೪ ಬಾವಿ, ಹೊಂಡ, ಪುಷ್ಕರಣಿಗಳು**

ಪ್ರಾಚೀನ ಕಾಲದಿಂದಲೂ ಸಾಮಾಜಿಕ, ಧಾರ್ಮಿಕ, ಕೃಷಿ ಮುಂತಾದ ಉದ್ದೇಶಕ್ಕಾಗಿ ಬಾವಿ, ಹೊಂಡ, ಪುಷ್ಕರಣಿ, ಕೆರೆ ಕಾಲುವೆ ಅಣೆಕಟ್ಟುಗಳನ್ನು ನಿರ್ಮಿಸುವ ಪದ್ಧತಿ ಭಾರತದಲ್ಲಿ ಕಂಡುಬರುತ್ತದೆ. ಕರ್ನಾಟಕದ ಕದಂಬ ಮಯೂರವರ್ಮನು ಚಂದ್ರವಳ್ಳಿಯಲ್ಲಿ ಒಂದು ತಟಾಕ (ಕೆರೆ) ಯನ್ನು ನಿರ್ಮಿಸಿದನೆಂದು ಶಾಸನ ಉಲ್ಲೇಖವಿದೆ. ಇಂದೂ ನಾವು ಇದನ್ನು ನೋಡಬಹುದಾಗಿದೆ. ಇತರ ರಾಜಮನೆತನಗಳೂ ಸಹ ಬಾವಿ, ಹೊಂಡ, ಪುಷ್ಕರಣಿಗಳನ್ನು ನಿರ್ಮಿಸುವ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋದವು. ವಿಶೇಷವಾಗಿ ವಿಜಯನಗರ ಅರಸರ ಕಾಲದಲ್ಲಿ ಸುಂದರ ಮತ್ತು ಕಲಾತ್ಮಕವಾದ ಪುಷ್ಕರಣಿಗಳು ನಿರ್ಮಾಣಗೊಂಡವು ನಿರ್ಮಾಣ ತಾಂತ್ರಿಕತೆ, ಕಲೆ ಮತ್ತು ವಾಸ್ತು ಶಿಲ್ಪ, ಅಧ್ಯಯನಕ್ಕೆ ಇವು ಅತ್ಯುತ್ತಮ ನಿದರ್ಶನಗಳಾಗಿವೆ.

ವಿಜಯನಗರೋತ್ತರ ಕಾಲದಲ್ಲಿ ಅಧಿಕಾರಕ್ಕೆ ಒಂದು ಪಾಳೆಯಗಾರರು ಹಾಗೂ ಇವರ ಸಾಮಾಂತಾಧಿಕಾರಿಗಳು ಕಾಲ ಕಾಲಕ್ಕೆ ಅವಶ್ಯಕತೆಗೆ ಅನುಗುಣವಾಗಿ ಬಾವಿ, ಹೊಂಡ, ಪುಷ್ಕರಣಿಗಳನ್ನು ನಿರ್ಮಿಸಿರುವುದನ್ನು ಮನಗಾಣಬಹುದು. ಹರಪನಹಳ್ಳಿ ಪಾಳೆಯಗಾರರೂ ಸಹ ಇಂತಹ ನಿರ್ಮಾಣಗಳನ್ನು ಮಾಡಿದ್ದರು. ಇವರ ಕಾಲದಲ್ಲಿ ನಿರ್ಮಿಸಲಾದ ಸಾರ್ವಜನಿಕ ಬಾವಿಗಳು

ಅನೇಕ ಕಡೆ ಕಂಡು ಬರುತ್ತವೆ ಹರಪನಹಳ್ಳಿ, ಹಿರೇಮ್ಯಾಗಳಗೇರಿ, ನಾರಾಯಣದೇವರಕೆರೆ, ಚಿಕ್ಕಮ್ಯಾಗಳಗೇರಿ, ಮಾಗಾನಹಳ್ಳಿ, ಕುಂಚೂರು, ಬಸವನಕೋಟೆ ಒಳಗೊಂಡಂತೆ ಆ ಕಾಲದ ಹಳ್ಳಿಗಳಲ್ಲಿ ಸಾರ್ವಜನಿಕ ಕುಡಿಯುವ ನೀರಿನ ಉದ್ದೇಶಕ್ಕೆ ನಿರ್ಮಿಸಿರುವುದು ಕಂಡುಬರುತ್ತದೆ. ಇವು ಕೆಲವುಕಡೆ ಸಂಪೂರ್ಣ ಸಾಧಾರಣ ಕಲ್ಲು ಕಟ್ಟಡ ಹೊಂದಿದ್ದು ಇನ್ನು ಕೆಲವು ಕಡೆ ಬಾವಿಯ ಅರ್ಧಭಾಗದಿಂದ ಮೇಲ್ಭಾಗದವರೆಗೆ ಮಾತ್ರ ಕಲ್ಲು ಕಟ್ಟಡ ಹೊಂದಿವೆ. ಕಲಾತ್ಮಕ ದೃಷ್ಟಿಯಿಂದ ಮಹತ್ವದವುಗಳಾಗಿರುವುದಿಲ್ಲ. ಇದೇ ಮಾತನ್ನು ಹೊಂಡಗಳಿಗೂ ಸಹ ಅನ್ವಯಿಸಬಹುದು. ಬಾವಿ ಮತ್ತು ಹೊಂಡಗಳು ಸುಮಾರು ೫೦-೮೦ ಅಡಿವರೆಗೂ ಆಳವಾಗಿವೆ.

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಕೃಷಿ ನೀರಾವರಿ ಹಾಗೂ ಧಾರ್ಮಿಕ ಉದ್ದೇಶಕ್ಕೆ ಕಲಾತ್ಮಕವಾದ ಹಾಗೂ ಕಲೆ ವಾಸ್ತುಶಿಲ್ಪಕ್ಕೆ ಉತ್ತಮ ನಿದರ್ಶನವಾಗಬಲ್ಲಂತಹ ಪುಷ್ಕರಣಿಗಳನ್ನು ನಿರ್ಮಿಸಿದರು, ಹರಪನಹಳ್ಳಿ, ದೇವರ ತಿಮ್ಮಲಾಪುರ, ಚಿಗಟೇರಿ, ತಂಬ್ರಹಳ್ಳಿ, ನಾರಾಯಣದೇವರಕೆರೆ, ಉಚ್ಚಂಗಿದುರ್ಗ ಮುಂತಾದೆಡೆ ಬೃಹತ್ ಗಾತ್ರದ ಪುಷ್ಕರಣಿಗಳನ್ನು ಕಾಣಬಹುದು. ಕೆಲವು ಕಡೆ ಪಾಳೆಯಗಾರರ ಕಾಲದ ನಂತರವೂ ಇವು ಜೀರ್ಣೋದ್ಧಾರವಾಗಿವೆ.

ಕ್ರಿ.ಶ. ೧೫೦೦ ರಿಂದ ೧೮೦೦ರ ಕಾಲಾವಧಿಯ ಶಾಸನೋಕ್ತ ಹೊಂಡ ಪುಷ್ಕರಣಿಗಳ ಸಂಕ್ಷಿಪ್ತ ವಿವರಣೆ ನೀಡಲಾಗಿದೆ. ತಂಬ್ರಹಳ್ಳಿ ಶಾಸನ ಇಟಗಿಯ ಶಾನಭೋಗ ವಬರಸಯ್ಯನ ಮಗ ಸುರೆಯ ರಾಜ ಗಜಕೊಂಡವನ್ನು ನಿರ್ಮಿಸಿದ ಕ್ರಿ.ಶ. ೧೬೪೪ರ ಮೈದೂರು ಶಾಸನವು ಮಹಾ ನಾಯಕಾಚಾರ್ಯ ಬಸವಯ್ಯ ನಾಯಕನ ಕಾಲದಲ್ಲಿ ಮೈದೂರಿನಲ್ಲಿ ಯಾತ ಮತ್ತು ಕಲ್ಲುದೋಣಿಯನ್ನು ನಿರ್ಮಿಸಿದನೆಂದೂ ಕ್ರಿ.ಶ. ೧೭೭೦ರ ಹರಿಯಮ್ಮಾಜಿ ಶಾಸನವು ಕೊರೆಗಲ್ಲು ಕಾಲ್ವೆ ಕಟ್ಟೆ ಕಟ್ಟಿದ ನಿಮಿತ್ತ ನೀಡಿದ ದಾನವನ್ನೂ ಕ್ರಿ.ಶ. ೧೫೧೪ರ ಹಿರೇಮ್ಯಾಗಳಗೇರಿ ಶಾಸನ ಬಾವಿ ನಿರ್ಮಾಣವನ್ನು, ಕ್ರಿ.ಶ. ೧೮೪೧ರ ದೇವರ ತಿಮ್ಮಲಾಪುರ ತೆಲುಗು ಶಾಸನ ದೇವರ ತಿಮ್ಮಲಾಪುರದ ಪುಷ್ಕರಣಿಯ ಜೀರ್ಣೋದ್ಧಾರವನ್ನು ಉಲ್ಲೇಖಿಸುತ್ತವೆ. ಇವಲ್ಲದೆ ನಿರ್ಮಾಣ ತಾಂತ್ರಿಕತೆ ಮತ್ತು ವಾಸ್ತು ಶಿಲ್ಪ ದೃಷ್ಟಿಯಿಂದ ಮಹತ್ವದವು ಎನಿಸುವಂತಹ ಪುಷ್ಕರಣಿಗಳು ನನ್ನ ಕ್ಷೇತ್ರಕಾರ್ಯ ಕಾಲದಲ್ಲಿ ಉಚ್ಚಂಗಿದುರ್ಗ, ಚಿಗಟೇರಿ, ತಂಬ್ರಹಳ್ಳಿ ನಾರಾಯಣದೇವರಕೆರೆ ಮುಂತಾದೆಡೆ ಕಂಡುಬಂದಿದೆ. ಇವುಗಳ ಚಿತ್ರಗಳನ್ನು ಅನುಬಂಧದಲ್ಲಿ ನೀಡಿದ್ದೇನೆ. ಇವುಗಳ ನಿರ್ಮಾಣಕ್ಕೆ ಸಂಬಂಧಿಸಿದ ದಾಖಲೆಗಳು ದೊರೆಯುವುದಿಲ್ಲ. ಕೇವಲ ಸ್ಥಳೀಯರ ಹೇಳಿಕೆ ಮತ್ತು ತುಲನಾತ್ಮಕ ನೋಟದ ಆಧಾರದ ಮೇಲೆ ಹೇಳಲಾಗಿದೆ. ನಾರಾಯಣ ದೇವರಕೆರೆಯ ಪುಷ್ಕರಣೆ ತುಂಗಭದ್ರಾ ಅಣೆಕಟ್ಟೆಯಲ್ಲಿ ಮುಳುಗಿ ಹೋಗಿದ್ದು ಅವಶೇಷಗಳು ಮಾತ್ರ ಬೇಸುಗೆ ಕಾಲದಲ್ಲಿ ಕಾಣಿಸುತ್ತವೆ ಇದರ ಆಧಾರದಲ್ಲಿಯೇ ಇದು ಬಹುದೊಡ್ಡ ಗಾತ್ರದ ಪುಷ್ಕರಣಿ ಎಂದು ಹೇಳಬಹುದು ಚಿಗಟೇರಿ, ತಂಬ್ರಹಳ್ಳಿ ಮತ್ತು ಉಚ್ಚಂಗಿದುರ್ಗದ ಪುಷ್ಕರಣಿಗಳ ಗಾತ್ರ ಮತ್ತು ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವದವುಗಳೆನಿಸಿಕೊಳ್ಳುತ್ತವೆ.

**ಚಿಗಟೇರಿ ಪುಷ್ಕರಣಿ**

ಹರಪನಹಳ್ಳಿ ತಾಲೂಕು ಚಿಗಟೇರಿ ದೊಡ್ಡ ಗ್ರಾಮ ಇಲ್ಲಿಯ ಶಿವನಪ್ಪ ನಾಯಕ ಹರಪನಹಳ್ಳಿ ಪಾಳೆಯಗಾರರ ಸಾಮಂತನೂ, ಪಾಳೆಯಗಾರರಿಗೆ ವಿಶ್ವಾಸಿಕನೂ ಆಗಿದ್ದನು. ಈತನು ಇಲ್ಲಿ ಒಂದು ಕೋಟೆ, ಕೆರೆ ಹಾಗೂ ಪುಷ್ಕರಣೆಯನ್ನು ನಿರ್ಮಿಸಿದ್ದನೆಂದು ಸ್ಥಳೀಯರು ಹೇಳುತ್ತಾರೆ. ಕೆರೆಯು ಈ ಗ್ರಾಮದ ಬೆಟ್ಟದ ಇಳಿಜಾರಿನಲ್ಲಿದೆ. ಪುಷ್ಕರಣಿಯು ಗ್ರಾಮದ ಮಧ್ಯಭಾಗದಲ್ಲಿದೆ. ಪುಷ್ಕರಣಿಯು ಸುಮಾರು ೮೦ ಅಡಿ ಉದ್ದ ಹಾಗೂ ೬೦ ಅಡಿ ಅಗಲವಾಗಿದ್ದು ೮೦ ಅಡಿ ಆಳಹೊಂದಿದೆ. ತಳಭಾಗದಿಂದ ಮೇಲ್ಭಾಗದವರೆಗೂ ಬೃಹತ್ ಗಾತ್ರದ ಕಣಶಿಲೆಯಿಂದ ನಿರ್ಮಿಸಲಾಗಿದೆ. ಬಾವಿಗೆ ಇಳಿಯಲು ಮೆಟ್ಟಿಲುಗಳನ್ನು ತುದಿಯಿಂದ ಕೆಳಗಿನವರೆಗೂ ಮಾಡಲಾಗಿದೆ. ಮೆಟ್ಟಿಲುಗಳನ್ನು ಇಳಿದು ಹೋಗುವಾಗ ಬಲಗಡೆಯಲ್ಲಿ ಮಂಟಪವಿದೆ. ಇನ್ನು ಮುಂದೆ ಸಾಗಿದಲ್ಲಿ ಸುಂದರ ಉಬ್ಬುಶಿಲ್ಪದ ಗಜಲಕ್ಷ್ಮಿ ಹಾಗೂ ಸಿಂಹದ ತೋರಣ ಇದ್ದು ಕಲಾತ್ಮಕವಾಗಿದೆ. ಪುಷ್ಕರಣಿಯ ಅನೇಕ ಕಡೆ ಸುತ್ತಲೂ ಉಬ್ಬುಶಿಲ್ಪಗಳಿವೆ. ನಾಗಬಂಧ, ಮಂಗ, ಸಿಂಹ, ಮಿಥುನಶಿಲ್ಪಗಳಿವೆ. ಇವು ವಿಶಿಷ್ಟ ಸಂಕೇತಗಳನ್ನು ನೀಡುತ್ತವೆ. ಪುಷ್ಕರಣಿಯಿಂದ ನೀರನ್ನು ಮೇಲಕ್ಕೆ ಎತ್ತಲು ಏತದ ಕಟ್ಟೆ ಮಾಡಲಾಗಿದೆ. ಸುರಕ್ಷತೆಗಾಗಿ ಗ್ರಾಮ ಪಂಚಾಯಿತಿಯವರು ರಕ್ಷಣಾ ಗೋಡೆಯನ್ನು ನಿರ್ಮಿಸುತ್ತಿದ್ದಾರೆ. ಸ್ಥಳೀಯರು ತಮ್ಮ ಊರಿನ ಶಿವನಪ್ಪ ನಾಯಕ ನಿರ್ಮಿಸಿದ ಪುಷ್ಕರಣಿ ಇದೆಂದು ಹೇಳಿಕೊಳ್ಳುತ್ತಾರೆ ಆದರೆ ಸ್ವಚ್ಛತೆ ಕಾಯ್ದುಕೊಂಡು ಇದರ ಸದುಪಯೋಗ ಮಾಡಿಕೊಳ್ಳಲು ಹಿಂದುಳಿದಿದ್ದಾರೆ. ಪಕ್ಕದ ಮನೆಗಳವರು ಇದಕ್ಕೆ ಕಸ, ಕಡ್ಡಿ ಹಾಕುತ್ತಾರೆ. ಇದನ್ನು ಅಭಿವೃದ್ಧಿಪಡಿಸಿದಲ್ಲಿ ಚಿಗಟೇರಿ ಈ ಕಾಲದ ಪ್ರವಾಸೋದ್ಯಮ ಮತ್ತು ನಾರದಮುನಿಯ ಧಾರ್ಮಿಕ ಕೇಂದ್ರವಾಗುತ್ತದೆ.

**ತಂಬ್ರಹಳ್ಳಿ ಪುಷ್ಕರಣಿ**

ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಗ್ರಾಮದಿಂದ ೪ ಕಿ.ಮಿ. ದೂರದಲ್ಲಿ ರಂಗನಾಥನ ಬೆಟ್ಟವಿದೆ. ತಂಬ್ರಹಳ್ಳಿ ಹರಪನಹಳ್ಳಿ ಪಾಳೆಯಗಾರರ ಸಾಮಂತ ಓಬರ ನಾಯಕನ ಕೇಂದ್ರವಾಗಿತ್ತು. ಇಲ್ಲಿ ಈತ ಪುಷ್ಕರಣೆಯನ್ನು ನಿರ್ಮಿಸಿದನೆಂದು ಸ್ಥಳೀಯರು ಹೇಳುತ್ತಾರೆ. ಕಲೆ, ವಾಸ್ತು ಮತ್ತು ನಿರ್ಮಾಣ ತಾಂತ್ರಿಕತೆ ದೃಷ್ಟಿಯಿಂದ ಇದೊಂದು ಅತ್ಯುತ್ತಮ ಕಲಾಕೃತಿಯಾಗಿದೆ. ಚಿಗಟೇರಿಯ ಪುಷ್ಕರಣಿಯಂತೆ ಇದನ್ನು ಸಹ ಬೃಹತ್ ಗಾತ್ರದ ಕಣಶಿಲೆಯಿಂದ ನಿರ್ಮಿಸಲಾಗಿದ್ದು ಸೌಂದರ್ಯ ಕಲಾತ್ಮಕತೆ ದೃಷ್ಟಿಯಿಂದ ಎರಡೂ ಅತ್ಯುತ್ತಮವಾಗಿವೆ. ಪುಷ್ಕರಣಿ ೮೦ ಅಡಿ ಉದ್ದ ೬೦ ಅಡಿ ಅಗಲ ೮೦ ಅಡಿ ಆಳವಾಗಿದ್ದು ಹಂತ-ಹಂತದ ಮೆಟ್ಟಿಲುಗಳಿವೆ. ಮುಂಭಾಗದಲ್ಲಿ ಕಮಾನು ಹೊಂದಿದ ಪ್ರವೇಶದ್ವಾರವಿದೆ. ನಾಗಬಂಧ, ಸಿಂಹ, ನಾಗ, ಹೂಬಳ್ಳಿ, ಮುಂತಾದ ಕಲಾತ್ಮಕ ಉಬ್ಬುಶಿಲ್ಪಗಳಿವೆ. ನೀರನ್ನು ಮೇಲಕ್ಕೆ ಎತ್ತಲು ಏತ ವ್ಯವಸ್ಥೆ ಇದೆ. ಇದನ್ನು ಸಹ ರಕ್ಷಿಸುವ ಅಗತ್ಯವಿದೆ. ಈಗಲೂ ನೀರಿನಿಂದ ತುಂಬಿದೆ. ಸ್ಥಳೀಯರು ಇದರ ಸದುಪಯೋಗ ಪಡೆದಲ್ಲಿ ಹರಪನಹಳ್ಳಿ ಪಾಳೆಯಗಾರರ ಶ್ರಮ ಸಾರ್ಥಕವಾಗುತ್ತದೆ.

**ಉಚ್ಚಂಗಿದುರ್ಗದ ಪುಷ್ಕರಣಿ**

ಅಣಜಿಯಿಂದ ಅರಸೀಕೆರೆ ಮಾರ್ಗವಾಗಿ ಹರಪನಹಳ್ಳಿಗೆ ಹೋಗುವ ಮಾರ್ಗದಲ್ಲಿ ಉಚ್ಚಂಗಿದುರ್ಗ ಪ್ರವೇಶಿಸುವದಕ್ಕೆ ಮೊದಲೇ ಬಲಭಾಗದಲ್ಲಿ ಬೃಹತ್ ಗಾತ್ರದ ಪುಷ್ಕರಣಿ ಇದೆ. ಇದು ತಂಬ್ರಹಳ್ಳಿ, ಚಿಗಟೇರಿ ಪುಷ್ಕರಣಿಗಳಿಗಿಂತಲೂ ಗಾತ್ರದಲ್ಲಿ ದೊಡ್ಡದಾಗಿದೆ. ಬೃಹತ್ ಗಾತ್ರದ ಕಣಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಪುಷ್ಕರಣಿಗೆ ಇಳಿಯಲು ಮೆಟ್ಟಿಲುಗಳನ್ನು ಮಾಡಿದ್ದಾರೆ. ಪುಷ್ಕರಣಿಗೆ ಇಳಿಯಲು ಮೂರು ಹಂತದಲ್ಲಿ ಮೆಟ್ಟಿಲುಗಳಿವೆ. ನೀರಿನಿಂದ ಕೂಡಿದೆ. ಕಲಾತ್ಮಕ ಸೌಂದರ್ಯ ದೃಷ್ಟಿಯಿಂದ ತಂಬ್ರಹಳ್ಳಿ, ಚಿಗಟೇರಿ ಪುಷ್ಕರಣಿ ತರಹ ಇರುವುದಿಲ್ಲ. ಗಾತ್ರದಲ್ಲಿ ದೊಡ್ಡದಾಗಿದೆ. ಚಿತ್ರದುರ್ಗದ ಸಂತೆ ಹೊಂಡದಂತಿದೆ. ಎರಡೂ ಹೊಂಡಗಳಲ್ಲಿ ಬಸ್‌ಗಳು ಬಿದ್ದು ದುರಂತ ಸಂಭವಿಸಿದೆ.

**ದೇವರ ತಿಮ್ಮಲಾಪುರ ಪುಷ್ಕರಣಿ**

ಹರಪನಹಳ್ಳಿ ಸಮೀಪದ ಅಡವಿಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯ ದೇವರ ತಿಮ್ಮಲಾಪುರದ ಶ್ರೀ ಲಕ್ಷ್ಮೀ ವೆಂಕಟರಮಣ ದೇವಾಲಯದ ಪೂರ್ವ ದಿಕ್ಕಿನಲ್ಲಿ ಹೊಲಗಳ ಮಧ್ಯೆ ಪುಷ್ಕರಣಿ ಇದೆ. ಇದೂ ಸಹ ಗಾತ್ರದಲ್ಲಿ ದೊಡ್ಡದಾಗಿದ್ದು ಅರ್ಧಭಾಗದವರೆಗೆ ಬೃಹತ್‌ಗಾತ್ರದ ಕಣಶಿಲೆಯಿಂದ ನಿರ್ಮಿಸಲ್ಪಟ್ಟಿದೆ. ಉಳಿದರ್ಧಭಾಗ ನೈಸರ್ಗಿಕ ಗಟ್ಟಿ ಕಲ್ಲಿನಿಂದ ಕೂಡಿದೆ. ಇಳಿಯಲು ಮೆಟ್ಟಿಲುಗಳಿವೆ. ಪುಷ್ಕರಣಿಗೆ ರಕ್ಷಣಾಗೋಡೆಯಿದೆ. ಪುಷ್ಕರಣಿಯ ಪ್ರವೇಶದಲ್ಲಿ ಕ್ರಿ.ಶ. ೧೮೪೧ರಲ್ಲಿ ಹರಪನಹಳ್ಳಿ ಕಲೆಕ್ಟರ್ ಮ್ಯಾಜಿಸ್ಟ್ರೇಟ್ ಆಗಿದ್ದ ವೆಂಕಟಾಚಲಪತಿಯವರು ಈ ಪುಷ್ಕರಣಿಯನ್ನು ಜೀರ್ಣೋದ್ಧಾರಗೊಳಿಸಿದ್ದಾರೆಂದು ತಿಳಿಸುವ ಶಾಸನ ಇದೆ. ಉತ್ತಮ ಸ್ಥಿತಿಯಲ್ಲಿದೆ. ಯಾವುದೇ ಉಬ್ಬುಶಿಲ್ಪಗಳಿರುವುದಿಲ್ಲ. ನೀರಿನಿಂದ ಕೂಡಿದೆ.

ಹೀಗೆ ಬಾವಿ, ಹೊಂಡ ಪುಷ್ಕರಣಿಗಳು ಸಹ ಈ ಕಾಲದ ಪ್ರಮುಖ ಸಾರ್ವಜನಿಕ ನಿರ್ಮಾಣಗಳಾಗಿವೆ. ಪಾಳೆಯಗಾರರ ಕೊಡುಗೆಗಳಾಗಿವೆ.

## ಅಡಿಟಿಪ್ಪಣಿಗಳು

೧. ಪ್ರತಿಮಾ ಎಂದರೆ – ಹೋಲುವವಂಥದ್ದು, ಅನುಸರಿಸಿದ್ದು, ಪಡಿಯಚ್ಚು, ಪ್ರತಿಕೃತಿ–ಪ್ರತಿ+ಕೃತಿ. ಅಂದರೆ ಒಂದಕ್ಕೆ ಪ್ರತಿಯಾಗಿ ಒತ್ತೊಂದನ್ನು ಮಾಡಿದ್ದು ವಿಗ್ರಹ–ವಿ–ಗ್ರಹ ಅಂದರೆ ಪ್ರತ್ಯೇಕಿಸಿದ ಆಕಾರ ಎಂಬ ಅರ್ಥಗಳನ್ನು ನೀಡುತ್ತದೆ.

೨. ರಾಜರಾಂ ಹೆಗಡೆ, ೧೯೯೨, ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯದ ಐತಿಹಾಸಿಕ ವಿಶ್ಲೇಷಣೆ, ಅರಿವು ಬರಹ, ಸಂ–೩, ಭಾಗ–೧, ಪುಟ–೩೫–೩೬.

೩. ಪ್ರಭಾಕರ್ ಎಂ.ಎನ್., ೧೯೯೯, ದೇವಾಲಯಗಳ ವಾಸ್ತು ಚಂದ್ರಿಕೆ, ಪುಟ–೪.

೪. ಫಣೀಂದ್ರನಾಥಬೋಸ್, ೧೯೭೮, ಫ್ರಿನ್ಸಿಪಲ್ ಆಫ್ ಇಂಡಿಯನ್, ಶಿಲ್ಪಶಾಸ್ತ್ರ, ಪುಟ–೮.

೫. ಪ್ರಭಾಕರ್ ಎಂ.ಎನ್., ೧೯೯೯, ಪೂರ್ವೋಕ್ತ, ಪುಟ–೩.

೬. ರಾಮಚಂದ್ರರಾವ್ ಎಸ್.ಕೆ., ೧೯೯೨, ಪ್ರತಿಮಾಕೋಶ, ಪುಟ–೩.

೭. ತಿಪ್ಪೇಸ್ವಾಮಿ ಎಚ್, ೧೯೯೮, ಕೂಡ್ಲಿಗಿ ತಾಲ್ಲೂಕಿನ ಅಪರೂಪದ ಮಾನವಾಕೃತಿಗಳು, ನಾಗರಾಜ ಎಂ.ಜಿ. ಕೃಷ್ಣಮೂರ್ತಿ(ಸಂ), ಇತಿಹಾಸದರ್ಶನ, ಸಂ–೧೪, ಪುಟ–೧೯.

೮. ಸುಂದರ ಅ, ೧೯೯೮, ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ, ಪ್ರೊ.ಷೇಕ್ಅಲಿ (ಸಂ), ಕರ್ನಾಟಕ ಚರಿತ್ರೆ ಸಂ–೧, ಪುಟ–೨೪೧, ೪೨.

೯. ತಿಪ್ಪೇಸ್ವಾಮಿ ಎಚ್., ೧೯೯೪, ದಾವಣಗೆರೆ ಜಿಲ್ಲೆಯ ದೇವಾಲಯಗಳು, (ಅಪ್ರಕಟಿತ ಮಹಾಪ್ರಬಂಧ) ಪುಟ–೧೮೨.

೧೦. ಅದೇ ಪುಟ–೧೮೩.

೧೧. ಆಲ್ವಿನ್ ಎಫ್.ಆರ್., ೧೯೯೮, ದಿ ರೈಸ್ ಅಂಡ್ ಬರ್ಥ್ ಆಫ್ ಇಂಡಿಯನ್ ಸಿವಿಲಿಜೇಷನ್, ಪುಟ–೧೭೭.

೧೨. ಉಮೇಶ್ ಎಸ್., ಹಿರೇಮಠ್, ಮೂರ್ತಿಶಿಲ್ಪ ಕಲೆ (ಅಪ್ರಕಟಿತ ಪ್ರಬಂಧ) ಪುಟ–೫೩.

೧೩. ರಾಜಾರಾಂ ಹೆಗಡೆ, ೧೯೯೨, ಪೂರ್ವೋಕ್ತ, ಪುಟ–೭೨.

೧೪. ಶಕುಂತಲ ಎನ್, ೨೦೦೯, ಚಿತ್ರದುರ್ಗ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತು ಶಿಲ್ಪ, ಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ–೧೯೦.

೧೫. ಅದೇ ಪುಟ–೧೯೧.

೧೬. N. Subramani, Sangam Polity, page-೩೧.

೧೭. S.I.I.IX, P+೧, NO.೩೭.

೧೮. EC.I.V. yd. ೩೦.೧೧೧೦.

೧೯. EC.VI.Cm.೮೭.೧೧೮೦.

೨೦. E.C.XI.HK. ೧೩೦.೧೨೩೬.

೨೧. E.C.೧೧೧, ch.೨೦, ೧೧೪೨.

೨೨. E.C.Hn.೧೭೦, ೧೧೭೨.

೨೩. ವಿಕ್ರಮಾರ್ಜುನ ವಿಜಯಂ, ೧–೭೩, ವ ೧–೮ ವ.

೨೪. ಸಾಹಸಭೀಮ ವಿಜಯಂ, ೧೦, ೧೨ ವ.

೨೫. EC XI, HK, ೩೦ ೧೪೯೦.

೨೬. EC, VII. Sh. ೬೧, ೬೨, ೧೨೮೭.

೨೭. EC, VII, SK. ೮೮, ೧೦೫೮.

೨೮. EC, V. C N. ೨೦೫.

೨೯. ವರದರಾಜರಾವ್ ಜಿ., ಕುಮಾರರಾಮನ ಸಾಂಗತ್ಯಗಳು, ಪುಟ–೩೭೯, ರಾಮನಾಥನ ಕಾಲದ ಪೂರ್ವದ ಭಪ್ಪನ್ನ ಸಮಂದಿ, ವೀರರಿಗೆ ವೀರಸ್ವರ್ಗ ಆಗಬೇಕೆಂದು ಕಟ್ಟಿಸ್ತಳು.

೩೦. EC.VII. HL. ೨೭, ೧೧೭೨.

೩೧. E.C. XI, Dg. ೧೧೬, ೧೩೯೭.

೩೨. E.C. VI Cm. ೧೦೦. ೧೧೧೬.

೩೩. E.I. XV. P. ೭೫, ೯೨೦.

೩೪. M.A.R. ೧೯೩೭, ೯.೧೨೫೯.

೩೫. E.C. VIII.Sq. ೭೮, ೧೨೬೫.

೩೬. E.C. XII. Tp. ೩೨, ೧೧ನೇ ಶತಮಾನ.

೩೭. E.C. VIII. Sq. ೯೭, ೧೨೯೨.

೩೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ–೨೫೦.

೩೯. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಪೂರ್ವೋಕ್ತ, ಪುಟ–೧೨೬.

೪೦. ಅದೇ ಪೂರ್ವೋಕ್ತ, ಪುಟ–೧೨೭.

೪೧. Kailasapathy, Tamil Heroic poetry page-೨೩೫–೨೩೬.

೪೨. Nagaswamy, Hero stones of Tamil Nadu J.I.H. Vol-LI, pt-೧೧, page-೨೬೫.

## ಅಧ್ಯಾಯ - ೬

# ಪಾಳೆಯಗಾರರ ರಕ್ಷಣಾ ಸ್ಮಾರಕಗಳು

---

೬.೧ ಕೋಟೆಗಳು : ಅರ್ಥ ಮಹತ್ವ, ಪ್ರಕಾರಗಳು

೬.೨ ಪಾಳೆಯಗಾರರ ಪ್ರದೇಶದಲ್ಲಿ ಕಂಡು ಬರುವ ಕೋಟೆಗಳು

೬.೩ ಹೂಡೇವುಗಳು, ಕಾವಲು ಗೋಪುರಗಳು

೬.೪ ಆಯುಧಗಳು, ಯುದ್ಧ ಸಾಮಗ್ರಿಗಳು

೬.೫ ಕುಸ್ತಿ ಹಾಗೂ ಗರಡಿ ಮನೆಗಳು

೬.೬ ಅರಮನೆಗಳು

# ಪಾಳೆಯಗಾರರ ರಕ್ಷಣಾ ಸ್ಮಾರಕಗಳು

ಪ್ರಾಚೀನ ಭಾರತದ ರಾಜನೀತಿ ತಜ್ಞ ಹಾಗೂ ರಾಜನೀತಿ ಗ್ರಂಥ 'ಅರ್ಥಶಾಸ್ತ್ರ' ಕೃತಿಯ ಕರ್ತೃ ಕೌಟಿಲ್ಯ ತನ್ನ ರಾಜ್ಯಾಂಗ ಸಿದ್ಧಾಂತದಲ್ಲಿ ಒಂದು ರಾಜ್ಯವು ಏಳು ಪ್ರಮುಖ ಅಂಗಗಳಿಂದ ಕೂಡಿರಬೇಕೆಂದು ಸಪ್ತಾಂಗ ಸಿದ್ಧಾಂತವನ್ನು ವಿವರಿಸುತ್ತಾನೆ. ಅವುಗಳೆಂದರೆ ರಾಜ್ಯ (ಪ್ರದೇಶ), ರಾಜ (ಪ್ರಭು), ಮಂತ್ರಿ (ಅಮಾತ್ಯ), ದುರ್ಗ (ಕೋಟೆ) ಕೋಶ (ಖಜಾನೆ) ದಂಡ (ಸೈನ್ಯ) ಮತ್ತು ಮಿತ್ರ[೧] ಇವುಗಳಲ್ಲಿ ರಾಜ್ಯದ ಸಂರಕ್ಷಣೆಯಲ್ಲಿ ದುರ್ಗ (ಕೋಟೆ) ಬಹು ಪ್ರಾಮುಖ್ಯತೆ ವಹಿಸುತ್ತದೆ. ಹರಪನಹಳ್ಳಿ ಪಾಳೆಯಗಾರರ ಸಂಸ್ಥಾನವು ಒಂದು ಚಿಕ್ಕರಾಜ್ಯವಾದರೂ ಈ ಎಲ್ಲಾ ಏಳೂ ಮೂಲಾಂಶಗಳನ್ನು ಒಳಗೊಂಡಿತ್ತೆಂದು ಆಧಾರಗಳಿಂದ ಗೊತ್ತಾಗುತ್ತದೆ. ವಿಶೇಷವಾಗಿ ಪಾಳೆಯಗಾರರು ತಮ್ಮ ಆಳ್ವಿಕೆಯ ಕಾಲದಲ್ಲಿ ಕೋಟೆಗಳನ್ನು ನಿರ್ಮಿಸಲು, ದುರಸ್ತಿಗೊಳಿಸಲು, ಹೊಸಕೋಟೆಗಳನ್ನು ಜಯಿಸಿ ತಮ್ಮ ಪ್ರಭುತ್ವವನ್ನು ವಿಸ್ತರಿಸಲು ಪ್ರಯತ್ನಿಸಿರುವುದನ್ನು ನಾವು ಕಾಣುತ್ತೇವೆ. ರಾಜ್ಯಾಡಳಿತದಲ್ಲಿ ಕೋಟೆಗಳ ಮಹತ್ವವನ್ನು ಈ ನಾಡಿನ ಪ್ರಾಚೀನ ರಾಜಮನೆತನಗಳಾದ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರಂತೆ ಇವರೂ ಸಹ ಅರಿತಿದ್ದರು. ವಿಶೇಷವಾಗಿ ವಿಜಯನಗರ ಪತನಾನಂತರ ಆ ಪರಂಪರೆಯಲ್ಲಿಯೇ ಸಾಗಿದ ಹರಪನಹಳ್ಳಿ ಪಾಳೆಯಗಾರರೂ ಸಹ ತಮ್ಮ ಪಾಳೆಯಪಟ್ಟು ಸಂರಕ್ಷಣೆ, ರಾಜ್ಯದ ವಿಸ್ತರಣೆಯಲ್ಲಿ ಸೇನೆ ಮತ್ತು ಕೋಟೆ ಹಾಗೂ ಇತರ ರಕ್ಷಣಾ ತಂತ್ರಗಾರಿಕೆಗೆ ಮಹತ್ವ ನೀಡಿದ್ದರು. ಈ ಹಿನ್ನೆಲೆಯಲ್ಲಿ ನೋಡಿದಾಗ ಕ್ರಿ.ಶ. ೧೫೦೦ ರಿಂದ ೧೮೦೦ ರವರೆಗಿನ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರು ತಮ್ಮ ಪ್ರದೇಶದಾದ್ಯಂತ ಸೂಕ್ತವಾದ ರಕ್ಷಣಾವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಇಂದಿನ ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಯ ಇವರ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಪರಿಶೀಲನೆ ಹಾಗೂ ಸಾಂದರ್ಭಿಕ ದಾಖಲೆಗಳ ಮೂಲಕ ಈ ಕಾಲದಲ್ಲಿ ನಿರ್ಮಾಣಗೊಂಡ, ಜೀರ್ಣೋದ್ಧಾರಗೊಂಡ, ಸೇನಾ ಕಾರ್ಯಾಚರಣೆ ಮೂಲಕ ವಶಪಡಿಸಿಕೊಂಡ ಕೋಟೆಗಳ ಮತ್ತು ಇತರ ರಕ್ಷಣಾ ವ್ಯವಸ್ಥೆ ಕುರಿತಂತೆ ತಿಳಿಯುತ್ತದೆ. ಈ ವ್ಯವಸ್ಥೆಯಲ್ಲಿ ಕೋಟೆಗಳು, ಹೂಡೇವುಗಳು, ಆಯುಧಗಳಾದ ಖಡ್ಗ, ತುಪಾಕಿ, ಯುದ್ಧ ತಂತ್ರಗಳು, ಕುಸ್ತಿ ಮತ್ತು ಗರಡಿ ಮನೆಗಳು ಇತ್ಯಾದಿ ಪ್ರಮುಖ ಪಾತ್ರವಹಿಸಿದ್ದವು.

## ೬.೧ ಕೋಟೆಗಳು : ಅರ್ಥಮಹತ್ವ, ಪ್ರಕಾರಗಳು

ಕೋಟೆ, ಪುರ, ಕಿಲ್ಲೆ, ದುರ್ಗ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ದುರ್ಗಮವಾದ ಪ್ರವೇಶಿಸಲು ಕಷ್ಟಕರವಾದ ಒಂದು ರಕ್ಷಿತ ಆಯಕಟ್ಟಿನ ಪ್ರದೇಶವನ್ನು ಕೋಟೆ ಎನ್ನಬಹುದು. "ಸೈನಿಕರಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡುಪಾಗಿರುವ ಗಟ್ಟಿಯಾದ ಸ್ಥಳವೇ

ಕೋಟೆ ಎಂದು ಡಾ. ಎಂ. ಕೊಟ್ರೇಶ್‌ರವರು ಅಭಿಪ್ರಾಯ ಪಡುತ್ತಾರೆ.[೧] ಇಂತಹ ಆಯಕಟ್ಟಿನ ಸ್ಥಳ ಹಾಗೂ ಇದರ ಮಹತ್ವ ಕುರಿತಂತೆ ಪ್ರಾಚೀನ ಸಾಹಿತ್ಯದಲ್ಲಿ ಉಲ್ಲೇಖಗಳಿವೆ. ಕೋಟೆ ರಾಜ್ಯವೆಂಬ ದೇಹದ ಪ್ರಮುಖ ಅಂಗವಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರ, ಸೋಮೇಶ್ವರನ ಮಾನಸೋಲ್ಲಾಸ, ಲಿಂಗಣ್ಣ ಕವಿಯ ಕೆಳದಿನೃಪವಿಜಯಂ, ನಂಜುಂಡನ ಕುಮಾರರಾಮ ಚರಿತೆ ಮುಂತಾದ ಸಾಹಿತ್ಯ ಕೃತಿಗಳಲ್ಲದೆ ಅನೇಕ ಶಾಸನಗಳು, ವೀರಗಲ್ಲುಗಳು, ಸಹ ಕೋಟೆಗಳ ಮಹತ್ವ ಮತ್ತು ಲಕ್ಷಣಗಳನ್ನು ತಿಳಿಸಿಕೊಡುತ್ತವೆ. ಮುಂದುವರೆದು ಕೋಟೆಗಳ ಪ್ರಕಾರಗಳನ್ನು ಸಹ ವಿವರಿಸುತ್ತವೆ. ಕೋಟೆಗಳ ಆಕಾರ, ಭೌತಿಕ ಸ್ವರೂಪ, ಗಾತ್ರ, ಭೌಗೋಳಿಕ ನೆಲೆ, ನಿರ್ಮಾಣ ತಾಂತ್ರಿಕತೆ, ಬಳಸಿದ ಸಾಮಗ್ರಿ, ತಳವಿನ್ಯಾಸ, ಮುಂತಾದ ಅಂಶಗಳನ್ನು ಪರಿಗಣಿಸಿ ಕೋಟೆಗಳ ಪ್ರಕಾರಗಳನ್ನು ಗುರ್ತಿಸಲಾಗುತ್ತದೆ.[೨] ಈ ಅಂಶಗಳನ್ನು ಪರಿಗಣಿಸಿ ಕೋಟೆಗಳನ್ನು ಜಲದುರ್ಗ, ಗಿರಿದುರ್ಗ, ವನದುರ್ಗ, ಬಯಲುದುರ್ಗ (ನೆಲದುರ್ಗ), ಪಂಕದುರ್ಗ (ಮಣ್ಣಿನ ದುರ್ಗ) ಪರಿಖ (ಕೋಟೆಯ ಸುತ್ತ ಆಳವಾದ ಕಂದಕದಿಂದ ಕೂಡಿರುವಂತಹದ್ದು) ಎಂದು ಇನ್ನೂ ಅನೇಕ ಪ್ರಕಾರಗಳಲ್ಲಿ ಗುರ್ತಿಸಲಾಗುತ್ತದೆ. ಹರಪನಹಳ್ಳಿ ಪಾಳೆಯಗಾರರು ಇಂತಹ ಕೋಟೆಗಳನ್ನು ನಿರ್ಮಿಸಿಕೊಂಡು ತಮ್ಮ ರಾಜ್ಯದ ಹಾಗೂ ಪ್ರಜೆಗಳ ರಕ್ಷಣೆಗಾಗಿ ವ್ಯವಸ್ಥೆಯೊಂದನ್ನು ರೂಪಿಸಿಕೊಂಡಿದ್ದರು. ಕೋಟೆಗಳಲ್ಲದೆ, ಕಂದಕಗಳು, ಬುರುಜ = ಕೊತ್ತಲ = ಬತ್ತೇರಿ = ವೀಕ್ಷಣಾ ಗೋಪುರಗಳು, ಆಯುಧಗಳು, ಗುಂಡು ಕಲ್ಲುಗಳು, ಮಾಹಿತಿದಾರರು, ಪತ್ರಗಳು, ಪ್ರಾಣಿಗಳು, ದೈವಶಕ್ತಿ, ಮಂತ್ರಪಠಣ ಮುಂತಾದವುಗಳು ಇವರ ರಕ್ಷಣಾ ವ್ಯವಸ್ಥೆಯ ಭಾಗವಾಗಿದ್ದವು.

### ೬.೨ ಪಾಳೆಯಗಾರರ ಪ್ರದೇಶದಲ್ಲಿ ಕಂಡುಬರುವ ಕೋಟೆಗಳು

ಹರಪನಹಳ್ಳಿ ಪಾಳೆಯಗಾರರ ಪ್ರದೇಶದಾದ್ಯಂತ ವಿವಿಧ ಪ್ರಕಾರದ ಕೋಟೆಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಉತ್ತಮಸ್ಥಿತಿಯಲ್ಲಿದ್ದರೆ, ಇನ್ನೂ ಕೆಲವು ವಿನಾಶದ ಅಂಚಿನಲ್ಲಿವೆ, ಬಹುತೇಕ ಕೋಟೆಗಳು ಇತರ ರಕ್ಷಣಾ ಸ್ಮಾರಕಗಳು ನೆಲಸಮವಾಗಿವೆ. ಸಾಂದರ್ಭಿಕ, ಸ್ಥಳೀಕರ ಹೇಳಿಕೆಗಳನ್ನು, ಆಧಾರಗಳನ್ನು ಲಕ್ಷಿಸಿ ಬಾಗಳಿ, ಕೂಲಹಳ್ಳಿ, ಉಚ್ಚಂಗಿದುರ್ಗ, ಹರಪನಹಳ್ಳಿ ನಾರಾಯಣದೇವರಕೆರೆ, ಕುರೇದಗಡ್ಡಿ, ಹಂಪಾಪಟ್ಟಣ, ತಂಬ್ರಹಳ್ಳಿ, ಹ್ಯಾರಡ, ಹೊಳಲು, ಕರಡಿದುರ್ಗ, ನರಸಪ್ಪನಬೆಟ್ಟ, ಬಸವನಕೋಟೆ, ಉಚ್ಚಂಗಿಪುರ, ಅಣಜಿಗೆರೆ, ಕಡಬಗೇರಿ, ನಿಚ್ಚವ್ವನಹಳ್ಳಿ, ಕಸವನಹಳ್ಳಿ, ಹಿರೇಮ್ಯಾಗಳಗೇರಿ, ಚಿಕ್ಕಮ್ಯಾಗಳಗೇರಿ, ಮಾಗಾನಹಳ್ಳಿ, ಬಂಡ್ರಿ, ಕೊಟ್ಟೂರು, ವೀರನದುರ್ಗ, ಹನಸಿ, ಕಂಚಿಕೇರೆ, ಬೂದನೂರು, ಮುಂತಾದವು ಇವರ ಪ್ರಮುಖ ಕೋಟೆ ಹಾಗೂ ರಕ್ಷಣಾ ಸ್ಮಾರಕಗಳ ಕೇಂದ್ರಗಳಾಗಿದ್ದವೆಂದು ಹೇಳಬಹುದು. ಇವುಗಳಲ್ಲಿ ಉಚ್ಚಂಗಿದುರ್ಗ, ಕರಡಿದುರ್ಗ, ವೀರನದುರ್ಗ, ಕಂಚಿಕೇರಿ, ತಂಬ್ರಹಳ್ಳಿ, ಚಿಗಟೇರಿ, ಬಂಡ್ರಿ, ಉಚ್ಚಂಗಿಪುರಗಳು ಗಿರಿದುರ್ಗ ಸಾಲಿಗೆ ಸೇರುತ್ತವೆ. ಹರಪನಹಳ್ಳಿ, ಹಿರೇಮ್ಯಾಗಳಗೇರಿ, ಕೊಟ್ಟೂರು, ಮುಂತಾದವು ಬಯಲು ಪ್ರದೇಶದ ದುರ್ಗ ಪ್ರಕಾರಕ್ಕೆ

ಸೇರುತ್ತವೆ. ಅಣಜಿಗೆರೆ, ಕಡಬಗೆರೆ, ಅಲಗಿಲವಾಡ, ನಿಚ್ಚವನಹಳ್ಳಿ, ಕಸವನಹಳ್ಳಿ, ಬಸವನಕೋಟೆ, ಹಂಪಾಪಟ್ಟಣ, ಮಾಗಾನಹಳ್ಳಿ, ಚಿಕ್ಕಮ್ಯಾಗಳಗೇರಿ ಮುಂತಾದ ಕಡೆಯ ಕೋಟೆಗಳು ಸಂಪೂರ್ಣ ನೆಲಸಮಗೊಂಡಿವೆ. ಸ್ಥಳೀಯರು ಕೋಟೆ ಪ್ರದೇಶವನ್ನು ತೋರಿಸುತ್ತಾರೆ ಪಳೆಯುಳಿಕೆಗಳನ್ನು ಗುರ್ತಿಸಬಹುದಾಗಿದೆ.

ಲಭ್ಯವಾಗಿರುವ ಮಾಹಿತಿ ಆಧಾರಗಳಿಂದ ಉಚ್ಚಂಗಿದುರ್ಗ, ಕರಡಿದುರ್ಗ, ಬಂಡ್ರಿ, ಹರಪನಹಳ್ಳಿ, ನರಸಪ್ಪನಬೆಟ್ಟ, ವೀರನದುರ್ಗ, ತಂಬ್ರಹಳ್ಳಿ, ಹನಸಿ ಮುಂತಾದ ಕೆಲ ಪ್ರಮುಖವಾದವುಗಳ ವಿವರಣೆ ನೀಡಲಾಗಿದೆ.

**ಉಚ್ಚಂಗಿದುರ್ಗ**

ಉಚ್ಚಂಗಿದುರ್ಗ ಗ್ರಾಮ ಪಂಚಾಯ್ತಿ ಹೊಂದಿರುವ ಹರಪನಹಳ್ಳಿ ತಾಲೂಕಿನ ಒಂದು ಗ್ರಾಮ ದಾವಣಗೆರೆ ಜಿಲ್ಲೆಯಲ್ಲಿದೆ ೧೯೯೭ರ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿತ್ತು. ಇದೊಂದು ಐತಿಹಾಸಿಕ ಮಹತ್ವದ ಸ್ಥಳವಾಗಿದ್ದು ಸಾವಿರಾರು ವರ್ಷಗಳ ಇತಿಹಾಸ ಹೊಂದಿದೆ. ಕದಂಬ, ಪಾಂಡ್ಯ, ನೊಳಂಬ, ವಿಜಯನಗರದ ಆಡಳಿತಕ್ಕೆ ಒಳಪಟ್ಟಿದ್ದು ವಿಜಯನಗರೋತ್ತರ ಕಾಲದಲ್ಲಿ ಪಾಳೆಯಗಾರರ ಪ್ರಮುಖ ಆಡಳಿತ ಕೇಂದ್ರವೂ, ರಾಜಧಾನಿಯೂ ಆಗಿತ್ತು. ಇದೊಂದು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವಾಗಿದ್ದು ಇತಿಹಾಸ ಪ್ರಸಿದ್ಧ ಉಚ್ಚಂಗಮ್ಮ ದೇವಿಯ ಶಕ್ತಿ ಕೇಂದ್ರವಾಗಿದೆ. ವಿಜಯನಗರ ಪತನಾನಂತರ ಹರಪನಹಳ್ಳಿ ಪಾಳೆಯಗಾರರ ರಾಜಕೀಯ, ಆಡಳಿತ ಕೇಂದ್ರವಾಯಿತು. ಇಲ್ಲಿರುವ ಕೋಟೆ ಪ್ರಾಚೀನವಾದದು, ಶ್ರೇಷ್ಠ ಗಿರಿದುರ್ಗಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ.[೩] ಹರಪನಹಳ್ಳಿ ಪಾಳೆಯಗಾರರ ಸ್ಥಾಪಕ ದಾದೇನಾಯಕ ಈ ಪ್ರಾಚೀನಕೋಟೆಯನ್ನು ಜೀರ್ಣೋದ್ಧಾರಗೊಳಿಸಿ ಭದ್ರಪಡಿಸಿಕೊಂಡು ಆಳಿದನು. ನಂತರ ಈತನ ಉತ್ತರಾಧಿಕಾರಿಗಳು ಇದನ್ನು ಮುಂದುವರೆಸಿದರು.

ದಕ್ಷಿಣ ಉತ್ತರವಾಗಿ ಹಬ್ಬಿರುವ ಬೆಟ್ಟಗಳನ್ನು ಬಳಸಿ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆ ಗೋಡೆಯು ಸುಮಾರು ೧೦-೧೫ ಅಡಿ ಎತ್ತರ ಹಾಗೂ ೫-೬ ಅಡಿ ಅಗಲವಾಗಿದೆ. ಕೋಟೆ ಗೋಡೆಯ ಉದ್ದಕ್ಕೂ ರಕ್ಷಣೆಗಾಗಿ ವೀಕ್ಷಣಾಗೋಪುರ (ಬತ್ತೇರಿ) ಗಳಿವೆ ಇವುಗಳನ್ನು ದೊಡ್ಡ-ದೊಡ್ಡ ಗಾತ್ರದ ಕಲ್ಲುಗಳಿಂದ ನಿರ್ಮಿಸಲಾಗಿದೆ. ನೂರಾರು ಸಂಖ್ಯೆಯಲ್ಲಿ ಈ ಬತ್ತೇರಿಗಳಿದ್ದವೆಂದು ಸ್ಥಳೀಯರು ಮಾಹಿತಿ ನೀಡುತ್ತಾರೆ. ಪ್ರಸ್ತುತ ಇಂತಹ ೨೫ಕ್ಕೂ ಹೆಚ್ಚು ಭತೇರಿಗಳನ್ನು ನೋಡಬಹುದು. ಕೋಟೆಯ ಒಳಭಾಗದಲ್ಲಿಯೇ ಜನವಸತಿಗಾಗಿ ವಸತಿ ಗೃಹಗಳು, ನೀರಿನ ಸೌಕರ್ಯ ಕಂಡುಬರುತ್ತದೆ. ಬೆಟ್ಟದ ತುದಿಯಲ್ಲಿ ಎರಡು ಅರಮನೆಗಳು, ಉಚ್ಚಂಗಮ್ಮನ ದೇವಾಲಯ ಕಂಡುಬರುತ್ತವೆ. ಕೋಟೆಯನ್ನು ಆಕ್ರಮಿಸಲು ಶತೃಗಳು ಮಾಡಿದ ದಾಳಿಯ ಕಾಲದಲ್ಲಿ ಹಾರಿಸಲಾದ

ಫಿರಂಗಿ ಗುಂಡಗಳ ಗುರುತುಗಳನ್ನು ಅಲ್ಲಲ್ಲಿ ನೋಡಬಹುದಾಗಿದೆ. ಕೋಟೆಯ ಮೇಲಿನ ಹಿಡಿತ ಕುರಿತಂತೆ ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ನಡುವೆ ಅನೇಕ ಕದನಗಳು ನಡೆದಿರುವುದು ಈ ಕೋಟೆಯ ಮಹತ್ವವನ್ನು ತಿಳಿಸುತ್ತದೆ. ಕೋಟೆಯ ಒಳಭಾಗದಲ್ಲಿ ಅನೇಕ ದೇವಾಲಯ ಮುಂತಾದ ಸ್ಮಾರಕಗಳು ಕಂಡುಬರುತ್ತವೆ. ಹರಪನಹಳ್ಳಿ ಪಾಳೆಯಗಾರರ ಕ್ರಿ.ಶ. ೧೬೫೩ರ ಗಂಟೆ ಶಾಸನ ಇಲ್ಲಿ ಕಂಡುಬಂದಿದ್ದು ದಾದೇನಾಯಕನಿಂದ ಮುಮ್ಮಡಿ ಬಸಪ್ಪನಾಯಕನವರೆಗಿನ ವಂಶಾವಳಿಯನ್ನು ಗುರ್ತಿಸಲು, ಸಹಾಯಕವಾಗುತ್ತದೆ, ಅಲ್ಲದೆ ಇವರ ಸಾಮಾಂತಾಧಿಕಾರಿ ಚಿಗಟೇರಿಯ ಶಿವನಪ್ಪ ನಾಯಕನ ಉಲ್ಲೇಖ ಕಂಡುಬರುತ್ತದೆ.

**ಕರಡಿದುರ್ಗ**

ಉಚ್ಚಂಗಿದುರ್ಗದ ಬೆಟ್ಟ ಶ್ರೇಣಿಗೆ ಅಂಟಿಕೊಂಡಂತೆ ಸ್ವಲ್ಪ ಚಿಕ್ಕದಾದ ಬೆಟ್ಟ ಶ್ರೇಣಿ ಇದೆ ಇದನ್ನು ಕರಡಿದುರ್ಗ ಎಂದು ಕರೆಯಲಾಗುತ್ತದೆ. ಉಚ್ಚಂಗಿದುರ್ಗದ ಕೋಟೆಯ ಹರಿಹರ ಬಾಗಿಲು ಭಾಗದಿಂದ ಇಳಿದುಕೊಂಡು ಹೋದರೆ ಈ ಕರಡಿದುರ್ಗ ಸಿಗುತ್ತದೆ. ಪ್ರಸ್ತುತ ಇದೊಂದು ಸುಮಾರು ೮೦ ಮನೆಗಳನ್ನು ಹೊಂದಿರುವ ಕುಗ್ರಾಮವಾಗಿದ್ದು ಈ ಗ್ರಾಮದ ಉತ್ತರ ದಿಕ್ಕಿಗೆ ಚಿಕ್ಕ ಬೆಟ್ಟ ಶ್ರೇಣಿಯ ಮೇಲೆ ಹರಪನಹಳ್ಳಿ ಪಾಳೆಯಗಾರರಿಂದ ನಿರ್ಮಾಣಗೊಂಡ ವ್ಯವಸ್ಥಿತ ಕೋಟೆ ಇದೆ. ಇದೂ ಸಹ ಗಿರಿದುರ್ಗ ಕೋಟೆ ಪ್ರಕಾರಕ್ಕೆ ಈ ಕಾಲದ ಅತ್ಯುತ್ತಮ ನಿದರ್ಶನವಾಗಿದೆ. ಗಾತ್ರದಲ್ಲಿ ಚಿಕ್ಕಕೋಟೆಯಾದರೂ ಕೋಟೆಯ ಲಕ್ಷಣಗಳೂ, ಜನವಸತಿ ಸೌಕರ್ಯ ಮುಂತಾದ ದೃಷ್ಟಿಯಿಂದ ವ್ಯವಸ್ಥಿತವಾಗಿತ್ತೆಂದು ಕ್ಷೇತ್ರಕಾರ್ಯ ಪರಿಶೀಲನೆಯಿಂದ ಗೊತ್ತಾಗುತ್ತದೆ.

ಬೆಟ್ಟವನ್ನು ಏರಿಕೊಂಡು ತುದಿಭಾಗವನ್ನು ತಲುಪಿದರೆ ಕೋಟೆಯ ಮುಖ್ಯ ಪ್ರವೇಶದ್ವಾರವಿದೆ. ಬೆಟ್ಟದ ತುದಿಯನ್ನು ಬಳಸಿಕೊಂಡು ಸುತ್ತಲೂ ಎತ್ತರವಾದ ಹಾಗೂ ಸುಮಾರು ೫-೬ ಅಡಿ ಅಗಲವಾದ ರಕ್ಷಣಾ ಗೋಡೆಯನ್ನು ಬೃಹತ್ ಗಾತ್ರದ ಶಿಲೆಗಳನ್ನು ಬಳಸಿ ನಿರ್ಮಿಸಲಾಗಿದೆ. ಪ್ರವೇಶದ್ವಾರದ ಎಡ ಬಲ ಬೃಹತ್ ಗಾತ್ರದ ಕೊತ್ತಳಗಳಿವೆ. ರಕ್ಷಣಾ ಗೋಡೆಯ ಉದ್ದಕ್ಕೂ ವೃತ್ತಾಕಾರದ ಸುಮಾರು ೨೫ ಅಡಿ ವ್ಯಾಸದ ಭತೇರಿಗಳಿವೆ ಕೋಟೆ ಮಧ್ಯಭಾಗದಲ್ಲಿ ಎತ್ತರವಾದ ವೃತ್ತಾಕಾರದ ವೀಕ್ಷಣಾಗೋಪುರದಂತಿರುವ ಕೊತ್ತಳವಿದೆ. ಕೋಟೆಯ ಒಳಭಾಗದಲ್ಲಿ ಸೈನಿಕರ, ಅಧಿಕಾರಿಗಳ, ಮುಂತಾದವರ ವಸತಿ ಗೃಹಗಳಿವೆ. ಇವರಿಗೆ ಆಹಾರ, ನೀರಿನ ವ್ಯವಸ್ಥೆಗಾಗಿ ಸೌಕರ್ಯಗಳಿವೆ. ವೃತ್ತಾಕಾರದ ಕಣಜಗಳನ್ನು (ವಾಡೇವು) ಶಿಲೆಗಳಿಂದ ನಿರ್ಮಿಸಿ ಒಳಭಾಗವನ್ನು ಗಾರೆಯಿಂದ ಲೇಪನಮಾಡಿ ಧಾನ್ಯಗಳನ್ನು ಸುರಕ್ಷಿತವಾಗಿ ಸಂಗ್ರಹಿಸಲು ವ್ಯವಸ್ಥೆ ಮಾಡಿಕೊಂಡಿರುವುದು ಇವರ ತಂತ್ರಗಾರಿಕೆಗೆ ಸಾಕ್ಷಿಯಾಗಿದೆ.[೪]

ಕೋಟೆಯ ಒಳಗಡೆ ಪಾಳೆಯಗಾರರ ಕುಲದೈವ ಆಂಜನೇಯನ ಗುಡಿಯನ್ನು ನಿರ್ಮಿಸಲಾಗಿದ್ದು ಸರಳವಾಸ್ತು ರಚನೆಯ. ಸಭಾಮಂಟಪ ಮತ್ತು ಗರ್ಭಗೃಹ ಹೊಂದಿದ್ದು ಜೀರ್ಣೋದ್ಧಾರಗೊಂಡಿದೆ. ಸುಂದರವಾದ ಆಂಜನೇಯನ ಉಬ್ಬುಶಿಲ್ಪ ಗರ್ಭಗೃಹದಲ್ಲಿದೆ ದೇವಾಲಯದ ಪೂರ್ವಭಾಗದ ಗೋಡೆಗೆ ಅಂಟಿಕೊಂಡು ಮುಮ್ಮಡಿ ಬಸಪ್ಪ ನಾಯಕನ ಶಾಸನವೊಂದನ್ನು ಡಾ. ಎಂ. ಕೊಟ್ರೇಶ್‌ರವರು ಬೆಳಕಿಗೆ ತಂದಿದ್ದಾರೆ. ಈ ಶಾಸನ ಮತ್ತು ಸ್ಥಳೀಯರ ಹೇಳಿಕೆಗಳಿಂದ ಈ ಕೋಟೆಯನ್ನು ಮುಮ್ಮಡಿ ಬಸಪ್ಪ ನಾಯಕ ನಿರ್ಮಿಸಿರಬಹುದೆಂಬ ನಿಲುವಿಗೆ ಬರಲು ಸಾಧ್ಯವಿದೆ. ಇಂದು ಈ ಕೋಟೆ ಮತ್ತು ಕೋಟೆ ಪ್ರದೇಶ ಸಂಪೂರ್ಣ ಶಿಥಿಲಗೊಂಡಿದ್ದು ಆಂಜನೇಯ ದೇವರ ಪೂಜೆ ಮಾತ್ರ ನಡೆಯುತ್ತದೆ. ದೂರ-ದೂರ ಊರುಗಳಿಂದ ಭಕ್ತಾದಿಗಳು ಪೂಜಾ ಕಾರ್ಯಕ್ಕಾಗಿ ಬರುತ್ತಾರೆ. ಪಾಳೆಯಗಾರರ ಅವನತಿ ತರುವಾಯ ಇಲ್ಲಿಯ ಜನವಸತಿ ಬೆಟ್ಟಪ್ರದೇಶ ತೊರೆದು ಕೆಳಗಿನ ಬಯಲು ಪ್ರದೇಶಕ್ಕೆ ಬಂದು ವಾಸಿಸಲು ಆರಂಭಿಸಿರುವ ಸಾಧ್ಯತೆ ಇದೆ, ಇಲ್ಲಿಯೂ ಸಹ ಆಂಜನೇಯ ದೇವಸ್ಥಾನವಿದೆ. ಹರಪನಹಳ್ಳಿ ಪಾಳೆಯಗಾರರ ಬಲಿಷ್ಠ ರಕ್ಷಣಾ ವ್ಯವಸ್ಥೆಗಾಗಿ ಪಕ್ಕದ ಉಚ್ಚಂಗಿದುರ್ಗದಲ್ಲಿಯೇ ಬಲಿಷ್ಠ ಕೋಟೆಯನ್ನು ಹೊಂದಿರುವಾಗ ಪಕ್ಕದ ಈ ಕರಡಿದುರ್ಗದಲ್ಲಿ ಏಕೆ ಇನ್ನೊಂದು ಕೋಟೆಯನ್ನು, ರಕ್ಷಣಾ ನೆಲೆಯನ್ನು ಹೊಂದಿದ್ದರು ಎಂಬ ಪ್ರಶ್ನೆ ಬರುತ್ತದೆ. ಬಹುಶಃ ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ನಡುವೆ ಪದೇ ಪದೇ ಕದನಗಳು ಏರ್ಪಡುತ್ತಿದ್ದ ಇತಿಹಾಸ ಗಮನಿಸಿದರೆ ಈ ಕರಡಿದುರ್ಗ ರಕ್ಷಣಾ ನೆಲೆ ಇವರ ಒಂದು ಸ್ಥಾಯೀ ಸೈನಿಕ ನೆಲೆ (Standby Military Location) ಆಗಿತ್ತೆಂದು ಅಭಿಪ್ರಾಯ ಪಡಬಹುದಾಗಿದೆ.

**ಬಂಡ್ರಿಕೋಟೆ**

ಬಂಡ್ರಿ ಇದೊಂದು ಶಿಲಾವಾಚಕ ಹೆಸರಾಗಿದ್ದು ಹರಪನಹಳ್ಳಿಯಿಂದ ಹಡಗಲಿ ಮಾರ್ಗದಲ್ಲಿ ಕಂಡು ಬರುವ ಪಾಳೆಯಗಾರರ ಕಾಲದ ಒಂದು ಸೈನಿಕ ನೆಲೆಯಾಗಿದೆ. ಈಗ ಇದೊಂದು ಕುಗ್ರಾಮ. ಇಲ್ಲಿಯ ಚಿಕ್ಕಬೆಟ್ಟದ ಮೇಲೆ ಪಾಳೆಯಗಾರರು ಒಂದು ಕೋಟೆಯನ್ನು ಸುಮಾರು ೫-೬ ಅಡಿ ದಪ್ಪವಾದ ಗೋಡೆಯಿಂದ ನಿರ್ಮಿಸಿದ್ದರು. ಕೋಟೆಯ ಗೋಡೆ ಉದ್ದಕ್ಕೂ ಸುಮಾರು ೨೦-೨೫ ಅಡಿ ಎತ್ತರದ ಕೊತ್ತಲುಗಳಿದ್ದು ಇಂದು ಇಂತಹ ಮೂರ್‍ನಾಲ್ಕು ಕೊತ್ತಲುಗಳು ಕಂಡುಬರುತ್ತವೆ. ಕೋಟೆಯ ಪ್ರವೇಶದ್ವಾರವನ್ನು ಮಧ್ಯಮ ಗಾತ್ರದ ಶಿಲೆಗಳಿಂದ ಸುಂದರವಾಗಿ ನಿರ್ಮಿಸಲಾಗಿದೆ. ಪ್ರವೇಶ ಬಾಗಿಲು ಒಳಭಾಗದ ಎಡ-ಬಲ ಜಗುಲಿಗಳಿವೆ. ಕೋಟೆಯ ಬಾಗಿಲನ್ನು ಮುಚ್ಚಿದಾಗ ಒಳ ಪ್ರವೇಶಿಸಲು ಸಣ್ಣದೊಂದು ಬಾಗಿಲನ್ನು ಇಟ್ಟಿದ್ದಾರೆ. ಪ್ರವೇಶ ಬಾಗಿಲು ಮೇಲ್ಭಾಗವನ್ನು ಗಾರೆಯಿಂದ ಮೆತ್ತಲಾಗಿದೆ ವೈರಿಗಳ ಚಲನ ವಲನ ಗುರ್ತಿಸಿ ಕೋಟೆ ರಕ್ಷಿಸಲು ಬಂದೂಕಿನ ಕಿಂಡಿಗಳಿವೆ ನಿರ್ಮಿಸಲಾಗಿದೆ. ಕೋಟೆಯ ಒಳಭಾಗದಲ್ಲಿ ಜನವಸತಿ ಇತ್ತೆಂದು ಪಳೆಯುಳಿಕೆಗಳಿಂದ

ಗೊತ್ತಾಗುತ್ತದೆ. ಕೋಟೆಯ ಒಳಭಾಗದಲ್ಲಿ ದಾದೇನಾಯಕ ಮತ್ತು ರಂಗಾನಾಯಕ ಇವರ ಚಿಕ್ಕ ಚಿಕ್ಕ ಗುಡಿಗಳಿವೆ. ಇದನ್ನು ಆಧಾರವಾಗಿಟ್ಟುಕೊಂಡು ಈ ಕೋಟೆಯ ನಿರ್ಮಾಣ ಇವರೀರ್ವರ ಕಾಲದಲ್ಲಿ ಆಗಿರಬಹುದೆಂದು ಅಂದಾಜಿಸಬಹುದು. ಸ್ಥಳೀಯರು ಕೂಲಹಳ್ಳಿಯ ಗೋಣಿಬಸಪ್ಪ ಮತ್ತು ಚಿಗಟೇರಿಯ ಶಿವನಪ್ಪ ನಾಯಕ ಇಬ್ಬರೂ ಸೇರಿ ಈ ಕೋಟೆಯನ್ನು ನಿರ್ಮಿಸಿದ್ದರೆಂದು ಹೇಳುತ್ತಾರೆ. ಕೋಟೆಯ ಭೌಗೋಳಿಕ ಪರಿಸರ ಮತ್ತು ಕೋಟೆ ಗೋಡೆಯ ಸುತ್ತಲೂ ನಿರ್ಮಿಸಲಾಗಿರುವ ಕೊತ್ತಲಗಳನ್ನು ಪರೀಕ್ಷಿಸಲಾಗಿ ಈ ಕೊತ್ತಲಗಳ ಮೇಲಿಂದ ಸುಮಾರು ೮–೧೦ ಕಿ.ಮೀ. ಗಳ ದೂರದಿಂದಲೇ ವೈರಿಗಳ ಆಗಮನವನ್ನು ಗುರ್ತಿಸಿ ಪಕ್ಕದ ಬಾಗಳಿ, ಕೂಲಹಳ್ಳಿ, ಹರಪನಹಳ್ಳಿಗಳನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತಿದ್ದುರಿಂದಾಗಿ ಈ ಆಯಕಟ್ಟಿನ ಸ್ಥಳವನ್ನು ತಮ್ಮ ರಕ್ಷಣಾ ನೆಲೆಯನ್ನಾಗಿ ಮಾಡಿಕೊಂಡಿದ್ದರು.[೫] ಇದು ಇವರ ವ್ಯವಸ್ಥಿತ ರಕ್ಷಣಾ ತಂತ್ರವಾಗಿದೆ. ಇಂದು ಈ ಗುಡ್ಡದಲ್ಲಿ ಕುಲ್ಲು ಗಣಿಗಾರಿಕೆ ನಡೆಯತ್ತಿದ್ದು ಸಿಡಿಮದ್ದು ಉಪಯೋಗಿಸುತ್ತಿರುವುದರಿಂದ ಕೋಟೆ, ಕೊತ್ತಲ ಸಂಪೂರ್ಣ ನೆಲಸಮವಾಗುತ್ತಿವೆ.

**ಹರಪನಹಳ್ಳಿ ಕೋಟೆ**

ಪಾಳೆಯಗಾರರ ಬಲಿಷ್ಠ ಆಡಳಿತ ಕೇಂದ್ರವಾಗಿದ್ದ ಹರಪನಹಳ್ಳಿ ಈ ಕಾಲದ ಅನೇಕ ಸ್ಮಾರಕಗಳನ್ನು ಹೊಂದಿದೆ. ಬಾಗಳಿಯಿಂದ ಆರಂಭವಾದ ಇವರ ಆಳ್ವಿಕೆ ಹರಪನಹಳ್ಳಿ, ಉಚ್ಚಂಗಿದುರ್ಗ ಮುಂತಾದ ಪ್ರದೇಶಗಳಿಗೆ ವಿಸ್ತರಣೆಗೊಂಡಂತೆ ಇದನ್ನು ರಕ್ಷಿಸಿಕೊಳ್ಳುವ ಅವಶ್ಯಕತೆಯೂ ಹೆಚ್ಚಾಯಿತು. ಅಂತೆಯೇ ಇವರ ರಕ್ಷಣಾ ವ್ಯವಸ್ಥೆ, ಕೋಟೆಗಳ ನಿರ್ಮಾಣ ವಿಸ್ತಾರಗೊಂಡಿತು.

ಇಂದು ಹರಪನಹಳ್ಳಿಯಿಂದ ಹರಿಹರ ರಸ್ತೆಯಲ್ಲಿ ಹಿರೇಕೆರೆ ಏರಿಯ ಮೇಲೆ ಸಾಗುವಾಗ ಬಲಗಡೆ ವಿಶಾಲ ಪ್ರದೇಶ, ಕಂದಕ, ಕೊತ್ತಲಗಳ ಪಳೆಯುಳಿಕೆಗಳು ಕಂಡುಬರುತ್ತವೆ. ಈ ವಿಶಾಲ ಪ್ರದೇಶದಲ್ಲಿಯೇ ಪಾಳೆಯಗಾರರ ಬೃಹತ್ ಕೋಟೆ, ಅರಮನೆ, ಉದ್ಯಾನವನಗಳಿದ್ದವೆಂದು ಸ್ಥಳೀಯರು ಹೇಳುತ್ತಾರೆ. ಪರಿವೀಕ್ಷಣೆ ಮಾಡಿದಾಗ ಈ ಹೇಳಿಕೆಯನ್ನು ಸಮರ್ಥಿಸುವ ಅನೇಕ ಪುರಾತತ್ವ ದಾಖಲೆಗಳು ಕಂಡುಬರುತ್ತವೆ. ಹೆಚ್ಚಿನ ಶೋಧನೆಗೆ ಈ ಪ್ರದೇಶದಲ್ಲಿ ವ್ಯವಸ್ಥಿತ ಉತ್ಖನನ ಮಾಡಬೇಕಾದ ಅವಶ್ಯಕತೆ ಇದೆ.[೬] ಇದು ಸಾಧ್ಯವಾದಲ್ಲಿ ಹರಪನಹಳ್ಳಿ ಪಾಳೆಯಗಾರರ ಐತಿಹಾಸಿಕತೆ ಬಗ್ಗೆ ಹೆಚ್ಚಿನ ವಿವರಗಳು ದೊರೆಯಬಹುದು.

ಈ ಪ್ರದೇಶದ ಭೌಗೋಳಿಕ ಪರಿಸರ ಅವಲೋಕನದಿಂದ ಪಾಳೆಯಗಾರರು ಇಲ್ಲಿ ಪಂಕದುರ್ಗ = ನೆಲದುರ್ಗ = ಬಯಲುದುರ್ಗವೊಂದನ್ನು ನಿರ್ಮಿಸಿದ್ದರೆಂದು ಗೊತ್ತಾಗುತ್ತದೆ. ಡಾ. ಎಂ. ಕೊಟ್ರೇಶ್‌ರವರು ಈ ಕೋಟೆಯ ಅಸ್ತಿತ್ವ ಮತ್ತು ಲಕ್ಷಣಗಳನ್ನು ಕುರಿತು ಚರ್ಚಿಸಿದ್ದಾರೆ. ಒಂದು ನಂಬುಗೆಯ ಪ್ರಕಾರ ಈ ಕೋಟೆಯನ್ನು ದಾದೇನಾಯಕ ನಿರ್ಮಿಸಿದನೆಂದು ತಿಳಿಯುತ್ತದೆ.

ಯಾವುದೇ ನೈಸರ್ಗಿಕ ರಕ್ಷಣೆ ಇಲ್ಲದೆ ಬಯಲು ಪ್ರದೇಶದಲ್ಲಿ ಹರಪನಹಳ್ಳಿ ಪಾಳೆಯಗಾರರು ತಮ್ಮ ಸಂಸ್ಥಾನದಾದ್ಯಂತ ಅನೇಕ ಕೋಟೆ, ಕೊತ್ತಲುಗಳನ್ನು ರಕ್ಷಣೆಗಾಗಿ ನಿರ್ಮಿಸಿದರು. ಇವುಗಳಲ್ಲಿ ಹರಪನಹಳ್ಳಿಯ ಕೋಟೆ ಕೊತ್ತಲುಗಳು ಬಹು ಪ್ರಸಿದ್ಧವಾಗಿವೆ ಹಾಗೂ ಗಾತ್ರದಲ್ಲಿ ದೊಡ್ಡವಿವೆ. ಸುಮಾರು ನೂರಾರು ಎಕರೆ ಪ್ರದೇಶದಲ್ಲಿ ಕಂಡು ಬರುವ ಈ ಕೋಟೆ ಹಿರೇಕೆರೆ ಮತ್ತು ಅಯ್ಯನಕೆರೆ ಎಂಬ ಎರಡು ಕೆರೆಗಳ ಮಧ್ಯೆ ನಿರ್ಮಾಣಗೊಂಡಿದೆ. ಹರಪನಹಳ್ಳಿಯಿಂದ ಹಡಗಲಿ ಮತ್ತು ಹೊಳಲು ಮಾರ್ಗದಲ್ಲಿ ಸಾಗಿದರೆ ಕೋಟೆಯ ಪ್ರವೇಶದ್ವಾರ ಗೋಚರಿಸುತ್ತದೆ. ಕೋಟೆಯನ್ನು ಬೃಹತ್ ಗಾತ್ರದ ಕಣಶಿಲೆಗಳಿಂದ ನಿರ್ಮಿಸಲಾಗಿತ್ತು. ಗೋಡೆಯು ಸುಮಾರು ೫-೬ ಅಡಿ ದಪ್ಪವಾಗಿದ್ದು ಗೋಡೆಯ ಉದ್ದಕ್ಕೂ ವೃತ್ತಾಕಾರದ ಸುಮಾರು ೫೦ ಅಡಿ ವ್ಯಾಸ ವಿಸ್ತೀರ್ಣದ ಹಾಗೂ ೩೦-೪೦ ಅಡಿ ಎತ್ತರದ ಕೊತ್ತಲ = ಬತ್ತೇರಿಗಳನ್ನು ನಿರ್ಮಿಸಲಾಗಿತ್ತು. ಕೋಟೆಯ ಹೊರ ಗೋಡೆಯ ಪಕ್ಕದಲ್ಲಿ ಸುತ್ತಲೂ ಸುಮಾರು ೨೦ ಅಡಿ ಅಗಲವುಳ್ಳ ಹಾಗೂ ೧೦-೧೫ ಅಡಿ ಆಳವಾದ ಕಂದಕವನ್ನು ನಿರ್ಮಿಸಲಾಗಿದ್ದನ್ನು ಅವಶೇಷಗಳಿಂದ ಗುರ್ತಿಸಬಹುದು. ಕಂದಕವನ್ನು ವ್ಯವಸ್ಥಿತವಾಗಿ ದೊಡ್ಡಗಾತ್ರದ ಶಿಲೆಗಳಿಂದ ನಿರ್ಮಿಸಲಾಗಿದೆ. ಪಕ್ಕದ ಕೆರೆಯಿಂದ ನೀರು ತುಂಬಿಸಲಾಗುತ್ತಿತ್ತು.

ಕೋಟೆಯ ಪ್ರವೇಶದ್ವಾರದ ಅವಶೇಷಗಳು ಕಂಡು ಬರುವುದಿಲ್ಲ. ಮುಂದೆ ಸಾಗಿದಾಗ ಕೋಟೆ ಆಂಜನೇಯ ದೇವಸ್ಥಾನ, ಕೋಟೆ ಕಾಳಿಕಾಂಬ ದೇವಸ್ಥಾನ, ಆಧುನಿಕ ಜೈನ ದೇವಸ್ಥಾನ ಕಂಡು ಬರುತ್ತವೆ. ಕೋಟೆ ಆಂಜನೇಯ ದೇವಾಲಯ ಪಾಳೆಯಗಾರರ ಕುಲದೈವವಾಗಿದ್ದು ದಾದೇ ನಾಯಕನಿಂದ ನಿರ್ಮಾಣಗೊಂಡಿದೆ ಎಂದು ಈ ದೇವಾಲಯದ ಪೂಜಾರಿಗಳು ಹೇಳುತ್ತಾರೆ. ಈ ಕುರಿತಂತೆ ಐತಿಹ್ಯವೊಂದಿದೆ. ಈ ದೇವಾಲಯ ದಕ್ಷಿಣಾಭಿಮುಖವಾಗಿದೆ. ಇದರ ಮುಂದಿನ ಪ್ರದೇಶದಲ್ಲಿಯೇ ಪಾಳೆಯಗಾರರ ಅರಮನೆ, ಉದ್ಯಾನವನ, ಸೇನಾವಲಯ, ಖಜಾನೆ, ಇತ್ಯಾದಿಗಳಿದ್ದವೆಂದು ಹಿರಿಯರು ಹೇಳುತ್ತಾರೆ. ಹರಪನಹಳ್ಳಿಯ ಯಾವುದೇ ಮೂಲೆ, ದೇವಾಲಯಗಳ ಮುಂದಿನ ದೀಪಸ್ತಂಭ, ಕಟ್ಟೆ ಮುಂತಾದಡೆ ದೊಡ್ಡ ಗಾತ್ರದ ದುಂಡನೆಯ ಶಿಲೆಕಲ್ಲುಗಳು (ಗುಂಡು ಕಲ್ಲು) ಕಂಡುಬರುತ್ತವೆ. ಸ್ಥಳೀಯರು ಇವುಗಳನ್ನು ಭರಮಪ್ಪ ದೇವರು ಎನ್ನುತ್ತಾರೆ. ಬಹುತೇಕ ಇವು ರಕ್ಷಣಾ ಆಯುಧಗಳಾಗಿದ್ದು ಕೋಟೆಯ ಮೇಲೆ ದಾಳಿ ಮಾಡುವ ವೈರಿಗಳನ್ನು ನಿಯಂತ್ರಿಸಲು, ಹಿಮ್ಮೆಟ್ಟಿಸಲು, ಪಾಳೆಯಗಾರರ ಸೈನಿಕರು ಬಳಸಿರಬಹುದು ಅಥವಾ ವೈರಿ ಪಡೆ ಕೋಟೆಯನ್ನು ಅಕ್ರಮಿಸಲು ಕೋಟೆಯನ್ನು ಭೇದಿಸಲು ಇವುಗಳನ್ನು ಉಪಯೋಗಿಸಿರಬಹುದು. ಬೃಹತ್ ಸಂಖ್ಯೆಯ ಭರಮಪ್ಪಗಳು ದೊರೆತಿರುವುದರಿಂದ ಹರಪನಹಳ್ಳಿಯ ಈ ಕೋಟೆ ಬಲಿಷ್ಠವಾಗಿದ್ದು ಭೇದಿಸಲು ಅಸಾಧ್ಯವೆನ್ನುವಷ್ಟು ಬೃಹತ್ ಗಾತ್ರದಲ್ಲಿದ್ದಿರಬಹುದೆಂದು ಅಂದಾಜಿಸಬಹುದು. ಕೋಟೆ ಪ್ರದೇಶದ ಕಾಲ್ಪನಿಕ ನಕ್ಷೆಯನ್ನು ಅನುಬಂಧದಲ್ಲಿ ನೀಡಲಾಗಿದೆ.

**ವೀರನದುರ್ಗ ಕೋಟೆ**

ಹರಪನಹಳ್ಳಿ ಪಾಳೆಯಗಾರರು ತಮ್ಮ ರಾಜ್ಯವನ್ನು ವಿಸ್ತರಿಸಿ ಹೊಸ ಹೊಸ ಪ್ರದೇಶಗಳಲ್ಲಿ ರಕ್ಷಣಾ ಸ್ಮಾರಕಗಳನ್ನು ಕೋಟೆಗಳನ್ನು ನಿರ್ಮಿಸಿದರು. ಅವುಗಳ ರಕ್ಷಣೆಗೆ ಸಾಮಾಂತಾಧಿಕಾರಿಗಳನ್ನು ನೇಮಿಸಿದರು. ಇಂತಹ ಸಾಲಿಗೆ ಸೇರುವ ಒಂದು ಕೋಟೆ ಕೂಡ್ಲಿಗಿ ತಾಲೂಕಿನ ವೀರನದುರ್ಗದಲ್ಲಿದೆ. ಇಲ್ಲಿಯ ಕಾವಲುಗಾರ ಹಾಗೂ ಸಾಮಂತ ರಾಮಯ್ಯ ನಾಯಕ.

ವೀರನದುರ್ಗ ಕೋಟೆ ಈ ಕಾಲದ ಗಿರಿದುರ್ಗಕ್ಕೆ ಇನ್ನೊಂದು ಉದಾಹರಣೆ. ಈ ಕೋಟೆಯ ನಿರ್ಮಾಪಕರನ್ನು ಕುರಿತಂತೆ ಅನೇಕ ಚರ್ಚೆಗಳಿವೆ. ಈ ಕೋಟೆಯನು ಜರಿಮಲೆ ಪಾಳೆಯಗಾರರಿಂದ ಹರಪನಹಳ್ಳಿ ಪಾಳೆಯಗಾರರು ವಶಪಡಿಸಿಕೊಂಡು ತಮ್ಮ ರಾಜ್ಯವನ್ನು ಇಲ್ಲಿಯವರೆಗೆ ವಿಸ್ತರಿಸಿದರೆಂದು ಕುಂಬಾ ಸದಾಶಿವಪ್ಪನವರು ಹೇಳುತ್ತಾರೆ.[೭]

ಈ ಕೋಟೆಯನ್ನು ಬೆಟ್ಟವನ್ನು ಬಳಸಿ ನಿರ್ಮಿಸಲಾಗಿದೆ. ಎರಡು ಹೆಬ್ಬಂಡೆಗಳನ್ನು ಬಳಸಿ ಪ್ರವೇಶದ್ವಾರ ನಿರ್ಮಿಸಲಾಗಿದೆ. ಕೋಟೆಯ ಒಳಭಾಗದಲ್ಲಿ ಜನವಸತಿ ಇತ್ತೆಂಬುದನ್ನು ತಿಳಿಸುವ ಅವಶೇಷಗಳಿವೆ. ಆಹಾರಧಾನ್ಯ, ನೀರಿನ ಸಂಗ್ರಹಣೆಗೆ ವ್ಯವಸ್ಥೆಗಳಿವೆ. ಕೋಟೆಯ ಸುತ್ತಲೂ ಬೃಹತ್ ಕೊತ್ತಲುಗಳಿವೆ. ಅನೇಕ ದೇವಾಲಯಗಳು, ಶಿಲ್ಪಗಳು ಕಂಡುಬರುತ್ತವೆ. ಹರಪನಹಳ್ಳಿ ಪಾಳೆಯಪಟ್ಟು ಸಂಕರ್ಷಣೆಯಲ್ಲಿ ಈ ವೀರನದುರ್ಗ ಕೋಟೆಯು ಒಂದು ಪ್ರಮುಖ ರಕ್ಷಣಾ ನೆಲೆಯಾಗಿದ್ದಿತು.

**ತಂಬ್ರಹಳ್ಳಿ ಕೋಟೆ**

ಹಗರಿಬೊಮ್ಮನಹಳ್ಳಿ ತಾಲೂಕಿನ ತಂಬ್ರಹಳ್ಳಿ ಒಂದು ಗ್ರಾಮ ಇಲ್ಲಿಂದ ಸುಮಾರು ೪ ಕಿ.ಮಿ. ದೂರದಲ್ಲಿ ರಂಗನಾಥನ ಚಿಕ್ಕ ಬೆಟ್ಟ ಇದೆ. ಇದು ಭೌಗೋಳಿಕವಾಗಿ ಆಯಕಟ್ಟಿನ ಸ್ಥಳದಲ್ಲಿದ್ದು ಹರಪನಹಳ್ಳಿ ಪಾಳೆಯಗಾರರ ಸೇನಾ ನೆಲೆಯಾಗಿತ್ತು. ಇಲ್ಲಿ ಈ ಬೆಟ್ಟವನ್ನು ಬಳಸಿ ಕೋಟೆ ನಿರ್ಮಿಸಿದ್ದರೆಂದು ಅವಶೇಷಗಳಿಂದ ತಿಳಿದುಬರುತ್ತದೆ. ಕೋಟೆಯ ಗೋಡೆಗಳ ಪಳೆಯುಳಿಕೆಗಳನ್ನು ಹಾಗೂ ಒಂದು ಶಿಥಿಲಾವಸ್ಥೆಯಲ್ಲಿರುವ ಕೊತ್ತಲವನ್ನು ಗುರ್ತಿಸಬಹುದು.[೮] ಹರಪನಹಳ್ಳಿ ಪಾಳೆಯಗಾರರ ಸಾಮಂತಾಧಿಕಾರಿ ಓಬರ ನಾಯಕ ಇಲ್ಲಿಯ ಆಡಳಿತಗಾರಾಗಿದ್ದು ಒಂದು ಸುಂದರವಾದ ಪುಷ್ಕರಣಿಯನ್ನು ನಿರ್ಮಿಸಿದ್ದನು. ಇಲ್ಲಿಗೆ ಸಮೀಪದಲ್ಲಿಯೇ ಪಾಳೆಯಗಾರರ ರಾಜಧಾನಿ ನಾರಾಯಣದೇವರಕೆರೆ ಇದೆ. ಈ ರಾಜಧಾನಿ ಸಂರಕ್ಷಣೆಯಲ್ಲಿ ತಂಬ್ರಹಳ್ಳಿ ಕೋಟೆ ಪ್ರಮುಖ ಪಾತ್ರ ವಹಿಸಿತ್ತು. ಇದೊಂದು ಗಿರಿದುರ್ಗವಾಗಿದೆ. ಬೆಟ್ಟದ ಇಳಿಜಾರಿನಲ್ಲಿ ಗಾಳಿಮಂಟಪವಿದೆ. ಚಿಕ್ಕ ಚಿಕ್ಕ ಶಾಸನಗಳು ಕಂಡುಬರುತ್ತವೆ.

**ನರಸಪ್ಪನ ಬೆಟ್ಟ**

ಹರಪನಹಳ್ಳಿ ತಾಲೂಕು ಅರಸೀಕೆರೆಯಿಂದ ಕಂಚಿಕೇರಿಗೆ ಹೋಗುವ ಮಾರ್ಗದಲ್ಲಿ ನರಸಪ್ಪನಬೆಟ್ಟ ಕಾಣಿಸುತ್ತದೆ. ವಿಜಯನಗರ ಕಾಲದ ಶಾಸನವೊಂದು ಇಲ್ಲಿ ಕಂಡುಬರುತ್ತದೆ. ಇಲ್ಲಿಂದ ಉಚ್ಚಂಗಿದುರ್ಗ ೧೦ ಕಿ.ಮಿ. ದೂರದಲ್ಲಿದೆ. ಈ ಹಿನ್ನಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ಈ ಬೆಟ್ಟದ ತುದಿಯ ಮೇಲೆ ತಮ್ಮ ರಕ್ಷಣಾನೆಲೆಯೊಂದನ್ನು ಸ್ಥಾಪಿಸಿಕೊಂಡಿದ್ದರೆಂದು ಅವಶೇಷಗಳಿಂದ ಗೊತ್ತಾಗುತ್ತದೆ. ಬೆಟ್ಟದ ಕೆಳಭಾಗದಲ್ಲಿರುವ ಯರಬಳ್ಳಿ ಗ್ರಾಮ ದಾಟಿಕೊಂಡು ಸಾಗಿದಲ್ಲಿ ಬೆಟ್ಟವನ್ನೇರಬಹುದು. ಕಾಲುದಾರಿ ಬಳಸಿ ಬೆಟ್ಟದ ತುದಿಗೆ ತಲುಪುವಾಗ ಸುತ್ತಲೂ ರಕ್ಷಣಾ ಗೋಡೆ ಹಾಗೂ ಕೊತ್ತಲ ಹೊಂದಿರುವ ಪ್ರದೇಶವೊಂದು ಗೋಚರಿಸುತ್ತದೆ. ಇದೊಂದು ಸೀಮಿತ ಪ್ರದೇಶವಾಗಿದ್ದು ಸುಮಾರು ೧೦೦೦೦ ಸಾವಿರ ಚದುರ ಅಡಿ ವಿಸ್ತೀರ್ಣವನ್ನು ಹೊಂದಿರಬಹುದು. ರಕ್ಷಣಾ ಗೋಡೆ ದಪ್ಪವಾಗಿದ್ದು ಅಲ್ಲಲ್ಲಿ ಬಂದೂಕಿನ ನಳಿಕೆಗಳನ್ನು ಇಡುವ ಕಿಂಡಿಗಳನ್ನು ಹೊಂದಿದೆ. ದೂರದಿಂದಲೇ ವೈರಿಗಳ ಆಗಮನವನ್ನು ಗುರ್ತಿಸಬಹುದು. ನೀರಿನ ವ್ಯವಸ್ಥೆಗಾಗಿ ನಿರ್ಮಿಸಿದ ಬಾವಿ ಕಟ್ಟಡ ಇದೆ. ಉಚ್ಚಂಗಿದುರ್ಗದ ಕಡೆಯಿಂದ ಬರುವ ವೈರಿಗಳನ್ನು ಗುರ್ತಿಸಿ ಹರಪನಹಳ್ಳಿ ರಕ್ಷಿಸಲು ಅಗತ್ಯ ಕ್ರಮ ಕೈಗೊಳ್ಳುವ ತಡೆಗೋಡೆ ರಕ್ಷಣಾ ಸ್ಥಳವಾಗಿರಬಹುದಾಗಿದೆ.[೯] ಬೆಟ್ಟದ ಮೇಲೆ ನಿಧಿಚೋರರ ಹಾವಳಿ ನಡೆದಿರುವ ಗುರುತುಗಳು ಸಿಗುತ್ತವೆ. ದೊಡ್ಡ ದೊಡ್ಡ ಒಲೆ, ಬೂದಿ, ಇದ್ದಿಲು ಅದಿರು ಲೋಹದ ಕಿಟ್ಟ ಇತ್ಯಾದಿ ಕಂಡುಬರುತ್ತವೆ. ಬಹುತೇಕ ಇದೊಂದು ಸೈನಿಕ ಉದ್ದೇಶಕ್ಕೆ ಅಲ್ಲದೆ ಇತರ ಯಾವುದಾದರೂ ಉದ್ದೇಶಕ್ಕೆ ಮುಖ್ಯವಾಗಿರಬಹುದಾಗಿದೆ.

ಇದೇ ರೀತಿ ಈ ಪಾಳೆಯಪಟ್ಟು ಪ್ರದೇಶದಾದ್ಯಂತ ಹುಲಿಗಿ, ಹಂಪಾಪಟ್ಟಣ, ಹನಸಿ, ನಾರಾಯಣದೇವರಕೆರೆ, ಹೊಳಲು, ಕುಂಚೂರು, ಹ್ಯಾರಡ, ತಲವಾಗಲು, ಅಲಗಿಲವಾಡ, ಮಾಗಾನಹಳ್ಳಿ, ಕಂಚಿಕೇರಿ, ಅಣಜಿಗೆರಿ, ಕಡಬಗೇರಿ, ಹಿರೇಮ್ಯಾಗಳಗೇರಿ, ನಿಚ್ಚವ್ವನಹಳ್ಳಿ, ಚಿಕ್ಕಮ್ಯಾಗಳಗೇರಿ, ಬಸವನಕೋಟೆ ಮುಂತಾದೆಡೆ ಈ ಪಾಳೆಯಗಾರರ ರಕ್ಷಣಾ ಸ್ಮಾರಕಗಳು, ಕೋಟೆಗಳು ಕಂಡುಬರುತ್ತವೆ. ಇವು ಸಂಪೂರ್ಣ ನೆಲಸಮಗೊಂಡಿದ್ದು ಸ್ಥಳೀಯರ ಹೇಳಿಕೆಗಳಿಂದ ಹಾಗೂ ಕೆಲ ಪಳೆಯುಳಿಕೆಗಳಿಂದ ಸ್ಥಳ ಗುರ್ತಿಸಬಹುದಾಗಿದೆ.

**ಹನಸಿ ಕೋಟೆ**

ಹಗರಿಬೊಮ್ಮನಹಳ್ಳಿ ತಾಲೂಕಿನ ಹನಸಿ ಒಂದು ಪ್ರಮುಖ ಗ್ರಾಮ. ಹರಪನಹಳ್ಳಿ ಪಾಳೆಯಗಾರರ ಕಾಲದ ಪ್ರಮುಖ ಕೇಂದ್ರ. ಹರಪನಹಳ್ಳಿ ಪಾಳೆಯಗಾರ ಭರಮಣ್ಣ ನಾಯಕನು ಗೇರಿಲ್ಲಾ ಯುದ್ಧ ತಂತ್ರಮೂಲಕ ಈ ಕೋಟೆಯನ್ನು ಜರಿಮಲೆ ಪಾಳೆಯಗಾರರಿಂದ ವಶಪಡಿಸಿಕೊಂಡನು. ಹರಪನಹಳ್ಳಿ ಪಾಳೆಯಗಾರರ ಪಾಳೆಯ ಪಟ್ಟು ಉತ್ತರ ದಿಕ್ಕಿನ ರಕ್ಷಣೆಯಲ್ಲಿ ಇದು ಪ್ರಮುಖ ಪಾತ್ರ ವಹಿಸಿತ್ತು.

ಹನಸಿ ಕೋಟೆ ನೆಲದುರ್ಗಕ್ಕೆ ಉತ್ತಮ ಉದಾಹರಣೆ. ಸುತ್ತಲೂ ಕಂದಕವಿರುವ ಈ ಕೋಟೆಯನ್ನು ದಪ್ಪ ದಪ್ಪ ಕಲ್ಲುಗಳು ಮತ್ತು ಮಣ್ಣಿನಿಂದ ನಿರ್ಮಿಸಲಾಗಿತ್ತು. ಸುಮಾರು ಹತ್ತಾರು ಎಕರೆ ವಿಸ್ತೀರ್ಣದಲ್ಲಿ ನಿರ್ಮಾಣಗೊಂಡಿದ್ದ ಈ ಕೋಟೆ ಗೋಡೆ ಸುಮಾರು ೫ ಅಡಿಗಳಷ್ಟಿದೆ. ಗೋಡೆಯ ಉದ್ದಕ್ಕೂ ವೀಕ್ಷಣೆಗಾಗಿ ಕೊತ್ತಲಗಳಿವೆ. ಕೋಟೆಯೊಳಗೆ ಜನವಸತಿ ಇದ್ದ ಕುರುಹುಗಳಿವೆ ಈಗ ಸಂಪೂರ್ಣ ಹಾಳಾಗಿದ್ದು ಎಲ್ಲೂ ಕೆಲವಡೆ ಗೋಡೆಯ ತುಂಡುಗಳು, ಕಾವಲು ಗೋಪುರಗಳು ಕಾಣಿಸುತ್ತವೆ.

ಗ್ರಾಮದ ಹಿರಿಯರು ಹರಪನಹಳ್ಳಿ ಪಾಳೆಯಗಾರರ ಕೋಟೆ ಇದೆಂದು ಹೇಳುತ್ತಾರೆ. ಕೋಟೆಯ ದಕ್ಷಿಣ ದಿಕ್ಕಿನಲ್ಲಿ ಈಶ್ವರ ದೇವಾಲಯವಿದೆ. ತಂಬ್ರಹಳ್ಳಿ ಹನಸಿ ಈ ಭಾಗದ ಪ್ರಮುಖ ರಕ್ಷಣಾ ಸ್ಮಾರಕಗಳಾಗಿವೆ.

### ೬.೩ ಹೂಡೇವುಗಳು, ಕಾವಲುಗೋಪುರಗಳು

ಹರಪನಹಳ್ಳಿ ಪಾಳೆಯಗಾರರ ರಕ್ಷಣಾ ವ್ಯವಸ್ಥೆಯಲ್ಲಿ ಹಾಗೂ ಇವರ ರಕ್ಷಣಾ ಸ್ಮಾರಕಗಳ ಅಧ್ಯಯನದಲ್ಲಿ ಹೂಡೇವು = ಬುರುಜ = ಬತೇರಿ = ಕೊತ್ತಲ = ಕಾವಲು ಗೋಪುರಗಳು ಪ್ರಮುಖ ಪಾತ್ರ ವಹಿಸುತ್ತವೆ. ಕೋಟೆಗೆ ಅಂಟಿಕೊಂಡಿರುವ ಈ ಕಾವಲು ಗೋಪುರಗಳ ಮೇಲಿಂದ ಸೈನಿಕರು ಕಾವಲು ನಿಂತು ಶತೃಗಳ ದಾಳಿಯನ್ನು ಚಲನವಲನಗಳನ್ನು ಬಹುದೂರದಿಂದಲೇ ಗುರ್ತಿಸುತ್ತಿದ್ದರು. ಇವುಗಳ ಸಹಾಯದಿಂದ ಕೋಟೆಗಳನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಈ ಕೊತ್ತಲಗಳು ಬೃಹದಾಕಾರದಲ್ಲಿದ್ದು ಎತ್ತರವಾಗಿರುತ್ತಿದ್ದವು. ತುದಿಯನ್ನು ತಲುಪಲು ಮೆಟ್ಟಿಲುಗಳಿರುತ್ತಿದ್ದವು, ತುದಿಯಲ್ಲಿ ರಕ್ಷಣಾಗೋಡೆ, ವಿಕ್ಷಣಾ ಕಿಂಡಿಗಳು, ಬಂದೂಕು ನಳಿಕೆ ಕಿಂಡಿಗಳು ಕಂಡುಬರುತ್ತವೆ. ಇಂತಹ ಕೊತ್ತಲ (ಬುರುಜು)ಗಳು ಸಹ ಈ ಪಾಳೆಯಗಾರರ ರಕ್ಷಣಾ ವ್ಯವಸ್ಥೆಯಲ್ಲಿದ್ದವು ಕೋಟೆಗಳೊಂದಿಗೆ ಇರುವ ಕೊತ್ತಳಗಳಲ್ಲದೆ ಕೋಟೆ ರಹಿತವಾಗಿಯೂ ಇಂತಹ ಕೊತ್ತಳಗಳು ಈ ಪ್ರದೇಶದಾದ್ಯಂತ ಕಂಡುಬರುತ್ತವೆ. ಸ್ಥಳೀಯ ರಕ್ಷಣೆಯಲ್ಲಿ ಇವು ಮಹತ್ತರ ಪಾತ್ರ ವಹಿಸುವುದಲ್ಲದೆ ರಕ್ಷಣಾ ಮುನ್ನೆಚ್ಚರಿಕೆಯನ್ನು ಗ್ರಹಿಸುವಲ್ಲಿ ಮುಖ್ಯವಾಗಿದ್ದವು. ಪಾಳೆಯಗಾರರು ಹಾಗೂ ಸ್ಥಳೀಯ ಸಾಮಂತರು ನಿರ್ಮಿಸಿದ ಇಂತಹ ಹೂಡೇವುಗಳು ಕೂಲಹಳ್ಳಿ, ಚಿಕ್ಕಹಳ್ಳಿ, ಹುಲಿಕಟ್ಟೆ, ದಾದಾಪುರ, ಆಲಮರಸೀಕೆರೆ, ಮೂಡ್ಲಗೆರೆ, ಮೀನಳ್ಳಿ, ಮುಂತಾದಡೆ ಕಂಡುಬರುತ್ತವೆ. ಇವುಗಳಲ್ಲಿ ಬಹುತೇಕ ವಿನಾಶಗೊಂಡಿದ್ದು ಇವುಗಳ ಅಸ್ತಿತ್ವವನ್ನು ಸ್ಥಳಪರಿಶೀಲನೆ, ಬುನಾದಿ, ಪಳೆಯುಳಿಕೆ ಮುಂತಾದವುಗಳ ಸಹಾಯದಿಂದ ಗುರ್ತಿಸಬಹುದು. ಲಭ್ಯವಾಗಿರುವ ಕೆಲ ಹೂಡೇವುಗಳನ್ನು ವಿವರಣೆಯಿಂದ ತಿಳಿದುಕೊಳ್ಳಬಹುದು.

**ಕೂಲಹಳ್ಳಿ ಹೂಡೇವು**

ಕೂಲಹಳ್ಳಿ ಬಾಗಳಿ ಸಮೀಪದ ಗ್ರಾಮ, ಪಾಳೆಯಗಾರರ ಪ್ರಥಮ ಕೇಂದ್ರ ಇಲ್ಲಿ ಕೋಟೆ, ಅರಮನೆ ಇದೆ, ಕೋಟೆಯು ಸಂಪೂರ್ಣ ನಾಶಗೊಂಡಿದ್ದು ಕೋಟೆಯ ಮೋಟು ಗೋಡೆಗಳು ಅಲ್ಲಲ್ಲಿ ಗೋಚರಿಸುತ್ತವೆ. ಕೋಟೆ ಪ್ರದೇಶದ ಮಧ್ಯಭಾಗದಲ್ಲಿ ಬೃಹತ್ ಗಾತ್ರದ ಒಂದು ಕಟ್ಟಡ ಇದೆ ಈಗ ಇದನ್ನು ಮದ್ದಾನೇಶ್ವರರ ಮಠ ಎಂದು ಕರೆಯುತ್ತಾರೆ. ಇದು ಹರಪನಹಳ್ಳಿ ಪಾಳೆಯಗಾರರ ಅರಮನೆಯಾಗಿತ್ತೆಂದು ಕುಂಬಾ ಸದಾಶಿವಪ್ಪನವರು ಹೇಳುತ್ತಾರೆ.[೧೦] ನಂತರ ಇದು ಗುರುಮನೆ (ಮಠ) ಆಯಿತಂತೆ. ಈ ಕಟ್ಟಡದ ಚಾವಣಿಯ ಮೇಲೆ ಸುಮಾರು ೨೫ ಅಡಿ ಎತ್ತರದ ಸಾಧಾರಣ ಶಿಲೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಿದ ಒಂದು ಹೂಡೇವು ಇದೆ. ಸುಮಾರು ೨೦ ಅಡಿ ಸುತ್ತಳತೆಯಲ್ಲಿದೆ ಸುಣ್ಣವನ್ನು ಬಳಿಯಲಾಗಿದೆ. ಇದೊಂದು ರಕ್ಷಣೆ ಉದ್ದೇಶಕ್ಕಾಗಿ ಬಳಸಲಾಗುತ್ತಿದ್ದ ವೀಕ್ಷಣಾ ಗೋಪುರವಾಗಿದ್ದು ಅರಮನೆ ರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿತ್ತು. ಇಲ್ಲಿಯೇ ಸುಮಾರು ೧೦ ಅಡಿ ಉದ್ದದ ಕಟ್ಟಿಗೆ ಬಂದೂಕು ಇದೆ. ಈ ಹಿನ್ನೆಲೆಯಲ್ಲಿ ಇದೊಂದು ಪ್ರಮುಖ ರಕ್ಷಣಾ ವಾಸ್ತು ನಿರ್ಮಾಣವಾಗಿದೆ.

**ಚಿಕ್ಕಹಳ್ಳಿ ಹೂಡೇವು**

ಹರಪನಹಳ್ಳಿ-ಹಡಗಲಿ ಮಾರ್ಗದಲ್ಲಿ ಚಿಕ್ಕಹಳ್ಳಿ ಗ್ರಾಮವಿದೆ. ಈ ಗ್ರಾಮದ ದಕ್ಷಿಣಕ್ಕೆ ಚಿಕ್ಕ ಗುಡ್ಡ ಇದೆ. ಈ ಗುಡ್ಡವನ್ನು ಬಳಸಿ ತುದಿಯ ಮೇಲೊಂದು ಹೂಡೇವು ನಿರ್ಮಿಸಲಾಗಿದೆ. ಬೃಹತ್‌ಗಾತ್ರದ ಹೆಬ್ಬಂಡೆಗಳಿಗೆ ಹೊಂದಿಸಿ, ದೊಡ್ಡ ದೊಡ್ಡ ಶಿಲೆಗಳನ್ನು ಉಪಯೋಗಿಸಿ ಸುಮಾರು ೧೫-೨೦ ಅಡಿ ಎತ್ತರದ ಹೂಡೇವು ನಿರ್ಮಿಸಲಾಗಿದೆ.[೧೧] ಇದರ ಸುತ್ತಲೂ ರಕ್ಷಣಾ ಗೋಡೆ ಇದೆ. ಕೂಲಹಳ್ಳಿ ಅರಮನೆ ಕಾವಲಿಗೆ ಇದನ್ನು ಕಾವಲು ಗೋಪುರವನ್ನಾಗಿ ಪಾಳೆಯಗಾರರು ಬಳಸುತ್ತಿದ್ದರು. ಆಂಜನೇಯನ ಗುಡಿ, ಆಂಜನೇಯನ ಉಬ್ಬು ಶಿಲ್ಪ ಇಲ್ಲಿ ಕಂಡುಬರುತ್ತದೆ. ಆಂಜನೇಯ ದೇವಾಲಯದ ಮುಂಭಾಗ ದೀಪಸ್ತಂಭ ಪಕ್ಕದಲ್ಲಿ ಮಹಾಸತಿ ಕಲ್ಲು ಇದೆ. ಶಾಸನ ಶಿಲ್ಪಕ್ಕೆ ಉದಾಹರಣೆಯಾಗಿದೆ.

ಇದೇ ರೀತಿ ಮೂಡ್ಲಗೇರಿ, ಮೀನಳ್ಳಿ, ಹುಲಿಕಟ್ಟೆ, ಅಲಮರಸೀಕೆರೆ ಮುಂತಾದರೆ ಇಂತಹ ಹೂಡೇವುಗಳಿದ್ದವು. ಈ ಸ್ಥಳಗಳಲ್ಲಿ ಮಧ್ಯಮಗಾತ್ರದ ಭರಮಪ್ಪ ದುಂಡುಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಹೂಡೇವುಗಳು ನೆಲಸಮವಾಗಿವೆ.

**೬.೪ ಆಯುಧಗಳು, ಯುದ್ಧ ಸಾಮಗ್ರಿಗಳು**

ರಾಜ್ಯಗಳ ರಕ್ಷಣಾ ವ್ಯವಸ್ಥೆಯಲ್ಲಿ ರಕ್ಷಣಾ ಸ್ಮಾರಕಗಳಂತೆ ಯುದ್ಧ ಸಾಮಗ್ರಿಗಳು, ಆಯುಧಗಳೂ, ಯುದ್ಧ ತಂತ್ರಗಳೂ ಇತ್ಯಾದಿ ಪ್ರಮುಖ ಪಾತ್ರವಹಿಸುತ್ತವೆ. ಹರಪನಹಳ್ಳಿ

ಪಾಳೆಯಗಾರರೂ ಸಹ ತಮ್ಮ ರಕ್ಷಣಾ ವ್ಯವಸ್ಥೆಯಲ್ಲಿ ಆಯುಧಗಳು, ಇತರ ಯುದ್ಧ ಸಾಮಗ್ರಿಗಳಿಗೆ ಆದ್ಯತೆ ನೀಡಿದ್ದರು. ಕ್ಷೇತ್ರಕಾರ್ಯ ಪರಿಶೀಲನೆಯಲ್ಲಿ ಅನೇಕ ಕಡೆ ಆ ಕಾಲದ ಖಡ್ಗ, ಕಹಳೆ, ಚಾಕು, ಕೈಬಾಕು, ಕೈ ಕವಚ ಸಹಿತ ಖಡ್ಗ, ಸರಪಳಿ, ಗುರಾಣಿ, ಡಾಲುಖಡ್ಗ, ವಿಷಪೂರಿತ ಗುದ್‌ಬಾಕು, ಉಕ್ಕಿನ ದೇಹಕವಚ, ಬಂದೂಕು, ಫಿರಂಗಿ, ಗುಂಡುಕಲ್ಲುಗಳು ಬಾಣ, ಇತ್ಯಾದಿ ಕಂಡುಬಂದಿವೆ. ಇವೇ ಇವರ ಕಾಲದ ಪ್ರಮುಖ ಆಯುಧಗಳಾಗಿವೆ. ಹರಪನಹಳ್ಳಿಯ ಬಾಣಗೆರೆ ಪ್ರಸಿದ್ಧ ಬಾಣ ತಯಾರಿಸುವ, ಮಾಡ್ಲಗೆರೆ ಖಡ್ಗ ತಯಾರಿಸುವ, ಗುಂಡಗತ್ತಿ, ಗುಂಡು ಮತ್ತು ಕತ್ತಿ ತಯಾರಿಸುವ, ಅಲಗಿಲವಾಡ ಅರಗಿನ ಖಡ್ಗ ತಯಾರಿಸುವ ಕೇಂದ್ರಗಳಾಗಿದ್ದು ಇತಿಹಾಸ ಪ್ರಸಿದ್ಧವಾಗಿದ್ದವು. ಕಾಲಾಳುಗಳು, ಕುದುರೆ ಸವಾರರು, ಕುದುರೆ, ಎತ್ತಿನಬಂಡಿ, ಇತ್ಯಾದಿ ಇವರ ಸೇವಾ ವ್ಯವಸ್ಥೆಯಲ್ಲಿದ್ದವು. ಗೇರಿಲ್ಲಾ ಯುದ್ಧ ತಂತ್ರದಲ್ಲಿಯೂ ಈ ಸೈನಿಕರು ಪಳಗಿದವರಾಗಿದ್ದರು ಒಮ್ಮೆ ಹನಸಿಕೋಟೆಯನ್ನು ವಶಪಡಿಸಿಕೊಳ್ಳಲು ಪಾಳೆಯಗಾರ ಭರಮಣ್ಣ ನಾಯಕನು ಮುತ್ತಿಗೆ ಹಾಕಿದಾಗ ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆಗ ಈತನ ಸೈನಿಕರು ಕೋಟೆಯ ಪಕ್ಕದ ನವಣಿ ಪೈರಿಗೆ ಬೆಂಕಿಹಚ್ಚಿ ಕೋಟೆಯ ಸೈನಿಕರ ಗಮನವನ್ನು ಈ ಕಡೆ ಸೆಳೆದು ಹನಸಿಕೋಟೆ ವಶಪಡಿಸಿಕೊಂಡರು[೧೨] ಇದು ಈ ಪಾಳೆಯಗಾರರ ಯುದ್ಧ ತಂತ್ರವನ್ನು ಪರಿಚಯಿಸುತ್ತದೆ. ಕೋಟೆಯನ್ನು ಶತೃಪಡೆ ಹತ್ತುವ ಪ್ರಯತ್ನದಲ್ಲಿದ್ದಾಗ ಮೇಲಿನಿಂದ ಬಿಸಿ ಎಣ್ಣೆ, ರಾಗಿ ಅಂಬಲಿ ಸುರಿದು ಹಿಮ್ಮೆಟ್ಟಿಸುವ ತಂತ್ರ ಇವರದಾಗಿತ್ತು.

### ೬.೫ ಕುಸ್ತಿ ಹಾಗೂ ಗರಡಿ ಮನೆಗಳು

ಪ್ರಾಚೀನ ಭಾರತೀಯರ ಜೀವನದಲ್ಲಿ ದೈಹಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಪ್ರಾಮುಖ್ಯತೆ ನೀಡಲಾಗಿತ್ತು. ದೈಹಿಕ ಬಲಶಾಲಿಗಳಾದ ಗಟ್ಟಿಗರನ್ನು ರಾಜ ಮಹಾರಾಜರು ತಮ್ಮ ಅಂಗರಕ್ಷಕರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಇವರನ್ನು 'ಜಟ್ಟಿ' ಎಂದು ಕರೆಯಲಾಗುತ್ತಿತ್ತು. ಇವರು ಬಲಶಾಲಿಗಳೂ, ಧೈರ್ಯವಂತರೂ, ಒದಗಿ ಬಂದ ಯಾವುದೇ ಸನ್ನಿವೇಶಗಳನ್ನು ಎದುರಿಸಬಲ್ಲವರೂ, ಆಗಿದ್ದು ಅರಸರ ಅಂಗರಕ್ಷಕ ಪಡೆಯಲ್ಲಿ ಇರುತ್ತಿದ್ದರು. ಇವರನ್ನು ಪೈಲ್ವಾನರೆಂದೂ ಸಹ ಕರೆಯಲಾಗುತ್ತಿತ್ತು. ಪ್ರಾಚೀನ ಭಾರತೀಯ ಸಾಹಿತ್ಯ ಕೃತಿಗಳಲ್ಲಿ ಮಲ್ಲಯುದ್ಧ ಕುರಿತು ವಿವರಣೆಗಳು ಇವೆ. ಅಹವಮಲ್ಲ, ತ್ರಿಭುವನ ಮಲ್ಲ, ಎಂಬ ಬಿರುದುಗಳು ಕಂಡುಬರುತ್ತವೆ. ರಾಜನಾದವನು ಮಲ್ಲಯುದ್ಧ ಪ್ರವೀಣನಾಗಿರಬೇಕಾದುದು ಅಂದಿನ ಅವಶ್ಯಕತೆಯಾಗಿತ್ತು. ಈ ಮಲ್ಲಯುದ್ಧವೇ ಕುಸ್ತಿ. ವಿಜಯನಗರ ದೊರೆ ಶ್ರೀಕೃಷ್ಣದೇವರಾಯ ಕುಸ್ತಿ ಆಡುತ್ತಿದ್ದನೆಂದು ವಿದೇಶಿ ಪ್ರವಾಸಿಗರು ವರದಿ ಮಾಡಿದ್ದಾರೆ. ಇದೊಂದು ಜನಪದ ಕ್ರೀಡೆಯಾಗಿ ಗ್ರಾಮಾಂತರ ಪರಿಸರದಲ್ಲಿ ಬೆಳೆದು ಬಂದಿತು. ವಾರ್ಷಿಕ ವಿಶೇಷ ಹಬ್ಬ, ರಥೋತ್ಸವ, ದಸರಾ ಆಚರಣೆ ಮುಂತಾದ ವಿಶೇಷ ದಿನಗಳಂದು ಕುಸ್ತಿ ಕಾಳಗ, ಜಟ್ಟಿ

ಕಾಳಗಗಳನ್ನು ಏರ್ಪಡಿಸಿ ವಿಜಯಿ ಪಟುಗಳಿಗೆ ಗೌರವಾದಾರಗಳನ್ನು ನೀಡಲಾಗುತ್ತಿತ್ತು. ಮೆರವಣಿಗೆ ಮಾಡಲಾಗುತ್ತಿತ್ತು.

ವಿಜಯನಗರೋತ್ತರ ಕಾಲದಲ್ಲಿಯೂ ಸಹ ಇಂತಹ ಕುಸ್ತಿ ತರಬೇತಿಗೆ ಪ್ರೋತ್ಸಾಹ ನೀಡಲಾಗಿತ್ತು. ಹರಪನಹಳ್ಳಿ ಪಾಳೆಯಗಾರರು ಕುಸ್ತಿ ತರಬೇತಿಗೆ, ಈ ತರಬೇತಿ ನೀಡುವ ಗರಡಿ ಮನೆಗಳಿಗೆ ಪ್ರೋತ್ಸಾಹಿಸಿದರು. ಅರಸರೂ ಸಹ ಗರಡಿ ಮನೆಯಲ್ಲಿ ತರಬೇತಿ ಪಡೆಯುತ್ತಿದ್ದರು. ದಾದೇನಾಯಕ ಹರಪನಹಳ್ಳಿಯಲ್ಲಿ ೧೨ ಗರಡಿ ಮನೆಗಳನ್ನು ನಿರ್ಮಿಸಿದನೆಂದು ಉಲ್ಲೇಖಗಳಿವೆ. ನಂತರ ಬಂದ ಹೊಂಬಣ್ಣನಾಯಕ, ವೀರಮುಮ್ಮಡಿ ನಾಯಕ ಮುಂತಾದವರು ಈ ಕುಸ್ತಿ ಕ್ರೀಡೆಗೆ ಬಹಳ ಪ್ರಾಮುಖ್ಯತೆ ನೀಡಿದ್ದರು. ಇಂತಹ ತರಬೇತಿ ಪಡೆದ ಕುಸ್ತಿ ವೀರರನ್ನು ತಮ್ಮ ಸೇನೆಗೆ ನೇಮಕ ಮಾಡಿಕೊಳ್ಳುತ್ತಿದ್ದರು. ಇಂದಿನ ಹರಪನಹಳ್ಳಿ, ದಾವಣಗೆರೆ, ಚಿತ್ರದುರ್ಗ ಭಾಗಗಳಲ್ಲಿ ಕುಸ್ತಿ ಜನಪ್ರಿಯ ಕ್ರೀಡೆಯಾಗಿದ್ದು ಇಲ್ಲಿಯ ಕುಸ್ತಿ ವೀರರು ರಾಜ್ಯ, ರಾಷ್ಟ್ರಮಟ್ಟದಲ್ಲಿ ಹೆಸರಾಗಿದ್ದಾರೆ.[೧೩] ಈ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಪರಿಶೀಲನೆಯಲ್ಲಿ ಹಳ್ಳಿಗಳಲ್ಲಿ ನೂರಾರು ಗರಡಿ ಮನೆಗಳು ಕಂಡುಬಂದಿವೆ. ಬಹಳಷ್ಟು ವಿನಾಶದ ಅಂಚಿನಲ್ಲಿವೇ ಇನ್ನು ಕೆಲವು ಕಾಲ ಕಾಲಕ್ಕೆ ಜೀರ್ಣೋದ್ಧಾರಗೊಂಡಿವೆ. ಆಧುನಿಕ ಸಿಮೆಂಟ್, ಇಟ್ಟಿಗೆ ಕಬ್ಬಿಣದ ಬಾಗಿಲು ಹೊಂದಿರುವ ಗರಡಿ ಮನೆಗಳು ಸಹ ಕಾಣುತ್ತವೆ. ಹರಪನಹಳ್ಳಿಯಲ್ಲಿ ೧೨ ಉಕ್ಕಡಗಳು, ಪ್ರತಿ ಉಕ್ಕಡಗಳಿಗೊಂದರಂತೆ ಒಂದೊಂದು ಆಂಜನೇಯ ದೇವಾಲಯ ಮತ್ತು ಒಂದೊಂದು ಗರಡಿಮನೆಗಳು ಕಂಡು ಬರುತ್ತವೆ. ಅವುಗಳೆಂದರೆ ಚಿತ್ತಾರ ಗರಡಿ, ಬಾಣಗೇರಿ ಗರಡಿ, ಹುಲಿಬೆಂಚಿಉಕ್ಕಡದ ಗರಡಿ, ಹಯಲುಗರಡಿ, ಗೌಳೇರಕೇರಿ ಗರಡಿ, ದೊಡ್ಡಗರಡಿ, ತೆಕ್ಕದಕೇರಿ ಗರಡಿ, ಸೈತಾನ್ ಗರಡಿ, ಗೌಡರ ಗರಡಿ, ಕೌತರಕಿಗರಡಿ, ಕುರುಬರಕೇರಿ ಗರಡಿ, ಗುಡೇಕೋಟಿಕೇರಿ ಗರಡಿ, ಇಂದು ಇಲ್ಲಿ ೧೮ ಗರಡಿ ಮನೆಗಳು ಕಂಡುಬರುತ್ತವೆ. ಪಾಳೆಯಗಾರರ ಕಾಲದ ಈ ಕುಸ್ತಿ ಮತ್ತು ಗರಡಿಮನೆ ಪರಂಪರೆ ಈ ಆಧುನಿಕ ಕಾಲದಲ್ಲಿ ಮುಂದುವರೆದಿರುವುದು ಒಂದು ವೈಶಿಷ್ಟವಾಗಿದೆ. ಇಂತಹ ಗರಡಿ ಮನೆಯಲ್ಲಿ ತರಬೇತಿ ಪಡೆದ ಹೆಸರಾಂತ ಕುಸ್ತಿ ಪೈಲ್ವಾನ್‌ರಗಳೆಂದರೆ ಚಮನ್‌ಮಲ್ಲೀ ಸಾಹೇಬ್, ಗೌಳಿ ಮಹದೇವಪ್ಪ, ಗೌಳಿ ಲಕ್ಷ್ಮಪ್ಪ, ಸ್ಟಾರ್ ನಾಗಪ್ಪ, ಮ್ಯಾಕಿ ಹನುಮಂತಪ್ಪ, ಬೋಲ ಪೈಲ್ವಾನ್ ಮುಂತಾದವರನ್ನು ಹೆಸರಿಸಬಹುದು. ಪಾಳೆಯಗಾರರ ಹರಪನಹಳ್ಳಿ ಕೋಟೆಯ ಒಳಗಡೆಯೇ ಅರಸರಿಗಾಗಿ ಒಂದು ಗರಡಿ ಮನೆ ಇತ್ತೆಂದು ಸ್ಥಳೀಯರು ಹೇಳುತ್ತಾರೆ. ಇವುಗಳನ್ನು ದಾದೇನಾಯಕನೇ ನಿರ್ಮಿಸಿರಬಹುದೆಂದು ತಿಳಿಯಲಾಗಿದೆ. ಹಿಂದೆ ಈ ಪ್ರದೇಶದಲ್ಲಿ ಉರುಸು ಜಾತ್ರೆಗಳು ನಡೆಯುತ್ತಿದ್ದವು. ಆ ಸಂದರ್ಭದಲ್ಲಿ ಕೆಲವು ದಿನಗಳ ಕಾಲ ಕುಸ್ತಿ ಆಟಗಳು ನಡೆಯುತ್ತಿದ್ದವು. ಆಗ ಬೇರೆ ಬೇರೆ ಪ್ರದೇಶಗಳಿಂದ ಕುಸ್ತಿಪಟುಗಳು ಆಗಮಿಸುತ್ತಿದ್ದರು. ಎದುರಾಳಿಯನ್ನು ಸೋಲಿಸಿದವರಿಗೆ ಬೆಳ್ಳಿಕಡೆ, ಬೆಳ್ಳಿಗದೆ, ಹಣ ನೀಡುವುದು ಮುಂತಾದ ಬಹುಮಾನಗಳನ್ನು ನೀಡುತ್ತಿದ್ದರು. ಜಯಶಾಲಿಯಾದವರನ್ನು ಮೆರವಣಿಗೆ

ಮಾಡುತ್ತಿದ್ದರೆಂದು ತಿಳಿಯಲಾಗಿದೆ. ಗರಡಿ ಮನೆಯಲ್ಲಿ ಪ್ರಮುಖವಾಗಿ ಮರದ ಗದೆಗಳು, ಕಲ್ಲಿನ ಗುಂಡುಗಳು, ಸಾಂಬ್ರಾಣಿ ಕಲ್ಲು, ಮಲ್ಲಕಂಬಗಳು ಮುಂತಾದ ಸಾಮಗ್ರಿಗಳನ್ನು ಬಳಸುತ್ತಿದ್ದರು. ಹಾಗೆಯೇ ಕುಸ್ತಿಯಲ್ಲಿ ಪಟ್ಟ ಹಾಕುವ ಟಾಂಗ್, ಬಾಹರ್‌ಟಾಂಗ್, ದೋಬಿಚಟ್, ಕಾಚ್, ಕಾಲಾರ್ ಜಂಗ್, ಉಖಾಡ್, ಹುಕ್ತಿ, ಡುಮಿಕಿ, ನಿಖಾಲ್‌ಗಳೆಂಬ ಕೆಲವು ಪಟ್ಟುಗಳು ಹೆಚ್ಚು ಜನಪ್ರಿಯವಾಗಿದ್ದವು.[೧೪] ಇಂದೂ ಸಹ ಕಲ್ಲುಗುಂಡುಗಳು ಕಂಡುಬರುತ್ತವೆ.

ಪಟುಗಳಿಗೆ ಒಂದೊಂದು ಕೇರಿಯವರು ಗೋಧಿ, ಹಾಲು, ಹಣ ಕೊಟ್ಟು ಸಾಕುತ್ತಿದ್ದರು. ಗೆದ್ದುಬಂದ ಪಟುಗಳಿಗೆ ಆರತಿ ಎತ್ತಿ ಗೌರವಿಸುತ್ತಿದ್ದರು. ಹರಪನಹಳ್ಳಿಯಲ್ಲಿರುವ ಚಿತ್ತಾರಗೇರಿ ಗರಡಿ ಮನೆಯಿದೆ. ಈ ಮನೆಯ ಎದುರು ವಿಶಾಲವಾದ ಬಯಲು ಪ್ರದೇಶದಲ್ಲಿ ನೂರಾರು ಹಗೇವುಗಳಿದ್ದು ಅವುಗಳಲ್ಲಿ ಜೋಳಗಳನ್ನು ತುಂಬುತ್ತಿದ್ದರಂತೆ. ಪ್ರತಿ ಹಗೇವಿಗೆ ಹತ್ತು ಸೇರು ಜೋಳವನ್ನು ಜೋಳ ಹಾಕಿದ ಬಾಡಿಗೆಯಾಗಿ ಗರಡಿ ಮನೆಗೆ ಕೊಡಬೇಕಾಗಿತ್ತು. ಈ ಪರಂಪರೆ ಪಾಳೆಯಗಾರರ ಕಾಲದಿಂದಲೂ ನಡೆದು ಬಂದಿದೆ. ಇಂದು ಹಗೇವುಗಳು ಇರುವುದಿಲ್ಲ.

**೬.೬ ಅರಮನೆಗಳು**

ಪ್ರಾಚೀನ ಕಾಲದಿಂದಲೂ ರಾಜ್ಯದ ಆಡಳಿತಗಾರರಿಗೆ, ಅರಸರಿಗೆ, ದೊಡ್ಡ ದೊಡ್ಡ ವಾಸದ ಮನೆಗಳನ್ನು ನಿರ್ಮಿಸುವ ಪರಿಪಾಠವಿತ್ತು ಇವುಗಳನ್ನು ದೊಡ್ಡಮನೆ, ಅರಮನೆ, ವಾಡೇ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಬಹುತೇಕ ಶಿಲೆ, ಮಣ್ಣು, ಕಟ್ಟಿಗೆ ಮುಂತಾದವುಗಳನ್ನು ಉಪಯೋಗಿಸಿ ನಿರ್ಮಿಸಲಾಗುತ್ತಿತ್ತು. ಅರಮನೆಗಳು ರಾಜನ ಗಾಂಭೀರ್ಯ, ಘನತೆ, ಗೌರವ, ಪ್ರತಿಷ್ಠೆ, ಸ್ಥಾನಮಾನಗಳ ಪ್ರತೀಕವಾಗಿದ್ದವು ಇಂತಹ ಅರಮನೆಗಳು ಬಹುತೇಕ ಕಾಲಗರ್ಭದಲ್ಲಿ ಸಿಲುಕಿ ನಾಶಗೊಂಡಿವೆ. ವಿಜಯನಗರ ಕಾಲದ ಅರಮನೆ ಸಂಕೀರ್ಣ ಹಂಪಿಯಲ್ಲಿ ಗೋಚರಿಸಿದೆ. ವಿಜಯನಗರೋತ್ತರ ಕಾಲದ ನಾಡಿನ ಇತಿಹಾಸದಲ್ಲಿ ಮೈಸೂರು ಅರಮನೆ ವಿಶ್ವಪ್ರಸಿದ್ಧಿಯಾಗಿದೆ. ಹರಪನಹಳ್ಳಿ ಪಾಳೆಯಗಾರರೂ ಸಹ ತಮ್ಮ ಗೌರವ ಪ್ರತಿಷ್ಠೆ ಸ್ಥಾನಮಾನಗಳಿಗನುಗುಣವಾಗಿ ಅರಮನೆಗಳನ್ನು ನಿರ್ಮಿಸಿಕೊಂಡಿದ್ದರೆಂದು ಸಾಂದರ್ಭಿಕ ಆಧಾರಗಳಿಂದ ತಿಳಿದು ಬರುತ್ತದೆ. ಶಾಸನಗಳಲ್ಲಿ ಇಂತಹ ಅರಮನೆಗಳ ಉಲ್ಲೇಖಗಳಿವೆ. ೧ನೇ ಸೋಮಶೇಖರ ನಾಯಕನ ಕಾಲದಲ್ಲಿ ಅರಮನೆ ವೈದ್ಯ ಕೃಷ್ಣಾಚಾರ್ಯರ ಉಲ್ಲೇಖ, ಮೈದೂರು ಶಾಸನದಲ್ಲಿ ಅರಮನೆಯ ದಾರಿಯಲ್ಲಿಯ ಭೂಮಿಯನ್ನು ದಾನ ನೀಡಿದ ಉಲ್ಲೇಖ, ಕಸವನಹಳ್ಳಿ ಶಾಸನವು ಅರಮನೆ ಪುರವರ್ಗ ಜೀರ್ಣೋದ್ಧಾರ, ಚಿಗಟೇರಿ ಶಿವನಪ್ಪ ನಾಯಕನ ಉಲ್ಲೇಖಗಳಲ್ಲಿ ಅರಮನೆ ವಿಚಾರಗಳು ಕಂಡುಬರುತ್ತವೆ. ಪುರಾತತ್ವ ಆಧಾರಗಳನ್ನು ಗಮನಿಸಿ ಈ ಪಾಳೆಯಗಾರರ ಅರಮನೆಗಳು ಇವರ ರಾಜಧಾನಿ ಕೇಂದ್ರಗಳಾದ ಉಚ್ಚಂಗಿದುರ್ಗ, ಹರಪನಹಳ್ಳಿ, ಕೂಲಹಳ್ಳಿ, ನಾರಾಯಣದೇವರಕೆರೆ ಮುಂತಾದ ಪ್ರದೇಶಗಳಲ್ಲಿ ಇದ್ದವೆಂದು ಕಂಡುಬರುತ್ತದೆ. ಆದರೆ ಹರಪನಹಳ್ಳಿ ಮತ್ತು

ನಾರಾಯಣದೇವರಕೆರೆಗಳಲ್ಲಿದ್ದಿರಬಹುದಾದ ಅರಮನೆಗಳು ಸಂಪೂರ್ಣ ನೆಲಸಮಗೊಂಡಿವೆ ಕೇವಲ ಪಳೆಯುಳಿಕೆಗಳನ್ನು ಇಂದು ನಾವು ಗುರ್ತಿಸಬಹುದಾಗಿದೆ. ಆದರೆ ಉಚ್ಚಂಗಿದುರ್ಗ ಮತ್ತು ಕೂಲಹಳ್ಳಿಯಲ್ಲಿ ಕಂಡುಬರುವ ಅರಮನೆ ಸ್ಮಾರಕಗಳನ್ನು ನಾವು ಗುರ್ತಿಸಬಹುದಾಗಿವೆ.[೧೫]

**ಉಚ್ಚಂಗಿದುರ್ಗ ಅರಮನೆ**

ಉಚ್ಚಂಗಿದುರ್ಗ ಇಂದು ದಾವಣಗೆರೆ ಜಿಲ್ಲಾ ವ್ಯಾಪ್ತಿಯಲ್ಲಿರುವ ಪಾಳೆಯಗಾರರ ಪ್ರಮುಖ ರಾಜಕೀಯ, ಆಡಳಿತಾತ್ಮಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರ. ಇಲ್ಲಿ ಇತಿಹಾಸ ಪ್ರಸಿದ್ಧ ಬಲವಾದ ಗಿರಿದುರ್ಗವಿದೆ. ಇಲ್ಲಿಯ ಕೋಟೆಯು ಇತಿಹಾಸ ಪ್ರಾಚೀನವಾದುದಾದರೂ ಹರಪನಹಳ್ಳಿ ಪಾಳೆಯಗಾರ ಸ್ಥಾಪಕ ದಾದೇನಾಯಕನು ಚಿತ್ರದುರ್ಗದ ಪಾಳೆಯಗಾರ ಮತ್ತಿ ತಿಮ್ಮಣ್ಣ ನಾಯಕನ ಮಗಳು ಹೊನ್ನೇನಾಗತಿಯನ್ನು ವಿವಾಹವಾದ ನಂತರ ಈ ಉಚ್ಚಂಗಿದುರ್ಗವನ್ನು ಬಳವಳಿಯಾಗಿ ಪಡೆದು ಇಲ್ಲಿಯ ಕೋಟೆಯನ್ನು ಜೀರ್ಣೋದ್ಧಾರಗೊಳಿಸಿ ಬಲಿಷ್ಠಪಡಿಸಿಕೊಂಡನು. ಈ ಕೋಟೆಯ ಆವರಣದ ಬೆಟ್ಟದ ತುದಿಯಲ್ಲಿ ಅರಮನೆಯಂತಿರುವ ಎರಡು ಬೃಹತ್ ಕಟ್ಟಡಗಳಿವೆ ಇವುಗಳನ್ನೇ ಸ್ಥಳೀಯರು ಹರಪನಹಳ್ಳಿ ಪಾಳೆಯಗಾರರ ಅರಮನೆಗಳೆಂದು ಹೇಳುತ್ತಾರೆ. ಇವುಗಳ ನಿರ್ಮಾಣ, ಲಕ್ಷಣಗಳು, ಇತ್ಯಾದಿಗಳನ್ನು ಗಮನಿಸಿದರೆ ಇವು ಅರಮನೆ ಕಟ್ಟಡಗಳೆಂದು ವೇದ್ಯವಾಗುತ್ತದೆ.

ಉಚ್ಚಂಗೆಮ್ಮ ದೇವಾಲಯದ ಎದುರಿಗೆ ಇರುವ ಬೃಹತ್ ಕಟ್ಟಡವೇ ರಾಜನ ಅರಮನೆ, ಇದಕ್ಕೆ ಉತ್ತರ ದಿಕ್ಕಿನಿಂದ ಪ್ರವೇಶ ದ್ವಾರವಿದೆ. ಸುತ್ತಲೂ ಎತ್ತರವಾದ ರಕ್ಷಣಾ ಗೋಡೆ ಇದ್ದು ಸುಮಾರು ೫ ಅಡಿ ದಪ್ಪವಾಗಿದೆ. ಈ ರಕ್ಷಣಾ ಗೋಡೆಯ ೪ ದಿಕ್ಕಿನಲ್ಲಿ ಪ್ರತಿ ಮೂಲೆಯಲ್ಲಿಯೂ ಒಂದೊಂದು ಚೌಕಾಕಾರದ ಕಾವಲು ಗೋಪುರಗಳಿವೆ, ಇಟ್ಟಿಗೆ ಗಾರೆಗಳಿಂದ ನಿರ್ಮಿಸಲಾಗಿದೆ. ವೈರಿಗಳ ಚಲನವಲನಗಳನ್ನು ಈ ಕಾವಲು ಗೋಪುರಗಳಿಂದ ವೀಕ್ಷಿಸಲು ಕಿಂಡಿಗಳಿವೆ. ಈ ಬುರುಜುಗಳು ಕನಿಷ್ಠ ಮಟ್ಟದ ಅಲಂಕಾರ ಹೊಂದಿವೆ. ಪ್ರಸ್ತುತ ಇರುವ ಅರಮನೆಗೆ ಯಾವುದೇ ಮೇಲ್ಛಾವಣಿ ಇಲ್ಲ ಬಿದ್ದು ಹೋಗಿರಬಹುದು ಆದರೆ ಇದರ ಒಳಭಾಗದಲ್ಲಿ ಎಲ್ಲಾ ರೀತಿಯ ಸುಸಜ್ಜಿತ ಸೌಕರ್ಯಗಳಿದ್ದವೆಂದು ತಿಳಿದುಬರುತ್ತದೆ. ಅಡುಗೆ ಮನೆ, ದೇವರ ಮನೆ, ಸಂಗ್ರಹಾಗಾರಗಳು, ಶೌಚಾಲಯಗಳು, ಹಜಾರ, ಇತ್ಯಾದಿ ಕಂಡುಬರುತ್ತವೆ. ಈ ಲಕ್ಷಣಗಳನ್ನು ಗಮನಿಸಿಯೇ ಈ ಅರಮನೆ ಸುಸಜ್ಜಿತ ಹಾಗೂ ವೈಭವಯುತವಾಗಿತ್ತೆಂದು ವೇದ್ಯವಾಗುತ್ತದೆ. ಇಲ್ಲಿ ಅಪಾರ ಸಂಖ್ಯೆಯಲ್ಲಿ ಗುಂಡುಕಲ್ಲು (ಭರಮಪ್ಪ) ಗಳು ಕಂಡುಬರುತ್ತವೆ. ಈ ಕಟ್ಟಡವೇ ಇವರ ಮುಖ್ಯ ಅರಮನೆ ಆಗಿತ್ತೆಂದು ಡಾ. ಎಂ. ಕೊಟ್ರೇಶ್‌ರವರು ಅಭಿಪ್ರಾಯ ಪಡುತ್ತಾರೆ. ನನ್ನ ಕ್ಷೇತ್ರಕಾರ್ಯ ಪರಿಶೀಲನೆಯಿಂದ ಗಮನಿಸಿದಾಗ ಡಾ. ಕೊಟ್ರೇಶ್‌ರವರ ಅಭಿಪ್ರಾಯವನ್ನು ಸಮರ್ಥಿಸಬಹುದಾಗಿದೆ. ಸ್ಥಳೀಯರು ಇದನ್ನು ರಾಜನ ಅರಮನೆ ಎನ್ನುತ್ತಾರೆ.

ಈ ಅರಮನೆಯಿಂದ ಕೆಳಭಾಗದಲ್ಲಿ ಇನ್ನೊಂದು ಅರಮನೆ ಇದೆ ಸ್ಥಳೀಯರು ಇದನ್ನು ರಾಣಿಯ ಅರಮನೆ, ಹೊನ್ನೇನಾಗತಿ ಅರಮನೆ ಎಂದೆಲ್ಲಾ ಗುರುತಿಸುತ್ತಾರೆ. ಈ ವಿಶಾಲ ಕಟ್ಟಡವೂ ಸಹ ಸುಮಾರು ೫ ಅಡಿ ದಪ್ಪನೆಯ ಗೋಡೆಯಿಂದ ನಿರ್ಮಿತವಾಗಿದ್ದು ನಾಲ್ಕು ದಿಕ್ಕಿನಲ್ಲಿಯೂ ಬುರುಜುಗಳಿದ್ದವೆಂದು ತಿಳಿದುಬರುತ್ತದೆ. ಒಳಾಂಗಣವು ರಾಜನ ಅರಮನೆಯಷ್ಟು ಸುಸಜ್ಜಿತವಾಗಿರುವುದಿಲ್ಲ. ಈ ಕಟ್ಟಡ ವಾಸ್ತುಶಿಲ್ಪ ದೃಷ್ಟಿಯಿಂದ ಮಹತ್ವದ್ದಾಗಿದೆ ಈ ಎರಡೂ ಕಟ್ಟಡಗಳನ್ನು ಬೇರೆ ಬೇರೆ ಕಾಲಾವಧಿಯಲ್ಲಿ ಕಟ್ಟಿರಬಹುದೆಂದು ಡಾ. ಎಂ. ಕೊಟ್ರೇಶ್‌ರವರು ಅಭಿಪ್ರಾಯ ಪಡುತ್ತಾರೆ. ಸ್ಥಳೀಯರು ಇದನ್ನು ಹೊನ್ನೇನಾಗತಿ ಹೂಡೇವು ಎಂದು ಸಹ ಕರೆಯುತ್ತಾರೆ.

**ಕೂಲಹಳ್ಳಿ ಅರಮನೆ**

ಹರಪನಹಳ್ಳಿ ಪಾಳೆಯಗಾರರ ಅರಮನೆ ಎಂದೇ ಗುರುತಿಸಲ್ಪಡುವ ಇನ್ನೊಂದು ಸುಸಜ್ಜಿತ, ವಾಸ್ತುಕೃತಿಯೊಂದು ಕೂಲಹಳ್ಳಿಯಲ್ಲಿ ಕಂಡುಬರುತ್ತದೆ. ಈ ಪಾಳೆಯಗಾರರು ತಮ್ಮ ಆಳ್ವಿಕೆಯನ್ನು ಬಾಗಳಿಯಿಂದ ಆರಂಭಿಸಿದರು ಇಲ್ಲಿಗೆ ೨ ಕಿ.ಮಿ. ದೂರದಲ್ಲಿರುವ ಕೂಲಹಳ್ಳಿ ವಿಶಾಲ ಬಯಲು ಪ್ರದೇಶವಾಗಿದ್ದು, ತಮ್ಮ ಆಡಳಿತದ ಕುರುಹಾಗಿ ಇಲ್ಲಿ ಕೋಟೆ, ಅರಮನೆ, ಬುರುಜುಗಳನ್ನು ನಿರ್ಮಿಸಿಕೊಂಡಿರಬೇಕೆಂದು ವೇದ್ಯವಾಗುತ್ತದೆ. ಸುಮಾರು ಹತ್ತಾರು ಎಕರೆ ಪ್ರದೇಶದಲ್ಲಿ ಈ ಕೋಟೆ ಪ್ರದೇಶವಿದೆ ಸುತ್ತಲೂ ದಪ್ಪ ಗಾತ್ರದ ರಕ್ಷಣಾ ಗೋಡೆ ಇದ್ದು ಇಂದು ಸಂಪೂರ್ಣ ಹಾಳಾಗಿದ್ದು ಅಲ್ಲಲ್ಲಿ ತುಂಡು ತುಂಡು ಉಳಿದುಕೊಂಡಿದೆ. ಕೋಟೆ ಪ್ರದೇಶಕ್ಕೆ ಪ್ರವೇಶದ್ವಾರವಿದೆ. ಈ ಪ್ರದೇಶದ ಮಧ್ಯಭಾಗದಲ್ಲಿ ಸುಮಾರು ನೂರು ಅಡಿ ಉದ್ದ ಅಗಲದ ಸದೃಢ ಕಟ್ಟಡವಿದೆ ಇದನ್ನು ಈಗ ಮದ್ದಾನೇಶ್ವರರ ಮಠ ಎಂದು ಕರೆಯಲಾಗುತ್ತದೆ. ಈ ಕಟ್ಟಡದ ಲಕ್ಷಣಗಳನ್ನು ನೋಡಲಾಗಿ ಇದೊಂದು ಧಾರ್ಮಿಕ ಕಟ್ಟಡ ಎಂದು ಭಾಸವಾಗುವುದಿಲ್ಲ. ವಿಶಾಲ ಹಜಾರ, ಕಂಬಗಳು, ನೆಲಮಾಳಿಗೆ, ಗುಹೆ, ಧಾನ್ಯ ಸಂಗ್ರಹಗಳಿಗೆ ವಾಡೇವುಗಳು, ಗುಪ್ತ ಮಾರ್ಗಗಳು, ನೀರಿನ ಬಾವಿಗಳು, ಕಂಡುಬರುತ್ತವೆ. ಈ ಕಟ್ಟಡದ ಮೇಲ್ಭಾಗದಲ್ಲಿ ಒಂದು ದೊಡ್ಡ ವೀಕ್ಷಣಾ ಗೋಪುರವಿದೆ. ಇವೆಲ್ಲವುಗಳನ್ನು ಗಮನಿಸಿ ಇದು ಈ ಪಾಳೆಯಗಾರರ ಕಾಲದ ಅರಮನೆ, ಆಡಳಿತ ಕೇಂದ್ರ, ರಾಜಕೀಯ ಶಕ್ತಿ ಕೇಂದ್ರ ಆಗಿತ್ತೆಂದು ಹೇಳಬಹುದು. ಕುಂಬಾ ಸದಾಶಿವಪ್ಪನವರು ಪಾಳೆಯಗಾರರ ಈ ಅರಮನೆಯೇ ಮದ್ದಾನೇಶ್ವರರ ಗುರುಮನೆ ಆಯಿತೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಪರಿಶೀಲನೆ ಕೈಗೊಂಡಾಗ ಕೂಲಹಳ್ಳಿಗೆ ಸಮೀಪದ ನಾಲ್ಕರು ಕಿ.ಮಿ.ಗಳ ಅಂತರದ ಚಿಕ್ಕಹಳ್ಳಿಯಲ್ಲಿ ಹೂಡೇವು, ಬಂಡ್ರಿಯಲ್ಲಿ ಹೂಡೇವುಗಳನ್ನು ಹೊಂದಿದ ಬೃಹತ್‌ಕೋಟೆ, ಕೋಟೆಯೊಳಗೆ ದಾದೇನಾಯಕ, ರಂಗನಾಯಕ ಗುಡಿಗಳು, ಹುಲಿಕಟ್ಟೆ, ಮೀನಳ್ಳಿ ಹೂಡೇವು, ಮುಂತಾದವುಗಳನ್ನು ಗಮನಿಸಿ ಕೂಲಹಳ್ಳಿಯ ಈ ಮದ್ದಾನೇಶ್ವರರ ಮಠ ಎಂದು ಕರೆಯಲ್ಪಡುವ ಈ

ವಾಸ್ತು ರಚನೆ ಹರಪನಹಳ್ಳಿ ಪಾಳೆಯಗಾರರ ಆರಂಭ ಕಾಲದ ಆಡಳಿತ ಕೇಂದ್ರ, ರಾಜಕೀಯ ಶಕ್ತಿ ಕೇಂದ್ರ, ಅರಮನೆ, ಪಾಳೆಯಗಾರರ ವಾಸಸ್ಥಳ ಆಗಿತ್ತೆನ್ನಬಹುದಾಗಿದೆ.

ಒಟ್ಟಾರೆ ಹರಪನಹಳ್ಳಿ ಪಾಳೆಯಗಾರರು ತಮ್ಮ ಅಧಿಕಾರ, ಗಾಂಭೀರ್ಯ, ಪ್ರತಿಷ್ಠೆ, ಗೌರವದ ಪ್ರತೀಕವಾಗಿ ಇಂತಹ ಕಟ್ಟಡಗಳನ್ನು ಹೊಂದಿದ್ದರೆಂದು ತಿಳಿದುಬರುತ್ತದೆ.

## ಅಡಿ ಟಿಪ್ಪಣಿಗಳು

೧. ಕೊಟ್ರೇಶ್ .ಎಂ, ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಕ.ವಿ.ವಿ., ಹಂಪಿ, ಪುಟ ೧೩.

೨. ಅದೇ, ಪುಟ ೨೩.

೩. ಕೊಟ್ರೇಶ್ .ಎಂ, ೨೦೧೦, ಹರಪನಹಳ್ಳಿ ತಾಲೂಕಿನ ರಕ್ಷಣಾ ಸ್ಮಾರಕಗಳು, ಕ.ವಿ.ವಿ., ಹಂಪಿ, ಪುಟ ೬.

೪. ಕ್ಷೇತ್ರಕಾರ್ಯ ವರದಿ.

೫. ಹರಪನಹಳ್ಳಿ ಪಾಳೆಯಗಾರರ ಕಾಲದ ಬಂಡ್ರಿ ಒಂದು ಪರಿಶೀಲನೆ – ಲೇಖನ.

೬. ಕ್ಷೇತ್ರ ಕಾರ್ಯ ವರದಿ.

೭. ಸದಾಶಿವಪ್ಪ ಕುಂಬಾ ೨೦೦೬, ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ–೬೭.

೮. ಕ್ಷೇತ್ರಕಾರ್ಯ ವರದಿ.

೯. ಕ್ಷೇತ್ರಕಾರ್ಯ ವರದಿ.

೧೦. ಸದಾಶಿವಪ್ಪ ಕುಂಬಾ, ೨೦೧೧, ರಾಯ ಸಂಸ್ಕೃತಿ, ಹರಪನಹಳ್ಳಿ, ಪುಟ–೧೧೩

೧೧. ಕ್ಷೇತ್ರಕಾರ್ಯ.

೧೨. ಸದಾಶಿವಪ್ಪ ಕುಂಬಾ, ೨೦೦೬, ಪೂರ್ವೋಕ್ತ, ಪುಟ–೩೩

೧೩. ಕ್ಷೇತ್ರಕಾರ್ಯ ಮಾಹಿತಿ.

೧೪. ಸದಾಶಿವಪ್ಪ ಕುಂಬಾ, ೨೦೦೬, ಪೂರ್ವೋಕ್ತ, ಪುಟ ೧೧೩

೧೫. ಕ್ಷೇತ್ರಕಾರ್ಯ ವರದಿ.

## ಅಧ್ಯಾಯ - ೭

# ಹರಪನಹಳ್ಳಿ ಪಾಳೆಯಗಾರರು: ವಸಾಹತುಶಾಹಿ ಪ್ರಭಾವ ಮತ್ತು ಪರಿಣಾಮಗಳು

ಅಧ್ಯಾಯ – ೭

# ಹರಪನಹಳ್ಳಿ ಪಾಳೆಯಗಾರರು : ವಸಾಹತುಶಾಹಿ ಪ್ರಭಾವ ಮತ್ತು ಪರಿಣಾಮಗಳು

ಹರಪನಹಳ್ಳಿ ಪಾಳೆಯಪಟ್ಟು ವಿಜಯನಗರೋತ್ತರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಗಾರರ ಚಿಕ್ಕರಾಜ್ಯ ಕ್ರಿ.ಶ. ೧೫೦೦ ರಿಂದ ೧೮೦೦ರ ಕಾಲಾವಧಿಯಲ್ಲಿ ಇಂದಿನ ಹರಪನಹಳ್ಳಿ, ಕೂಡ್ಲಿಗಿ, ಹೂವಿನಹಡಗಲಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ ಹಾಗೂ ದಾವಣಗೆರೆ, ಹರಿಹರ, ಜಗಳೂರು ತಾಲೂಕಿನ ಕೆಲ ಭೂಪ್ರದೇಶಗಳನ್ನೊಳಗೊಂಡು ನಾಡಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದನ್ನು ಆರಂಭಿಸಿತು. ಈ ಕಾಲಘಟ್ಟವನ್ನು ಪಾಳೆಯಗಾರರ ಕಾಲ ಎನ್ನಲಾಗಿದೆ. ಸಮಕಾಲೀನ ನೆರೆಹೊರೆಯ ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ಕೆಂಚನಗುಡ್ಡ, ವಡ್ಡು–ದರೋಜಿ, ಕುಡುತಿನಿ, ಉಜ್ಜಿನಿ, ತರೀಕೆರೆ ಮುಂತಾದ ಪಾಳೆಯಗಾರರ ರಾಜ್ಯಗಳೊಂದಿಗೆ ಸಮಯೋಚಿತ ರಾಜಕೀಯ ಮತ್ತು ಸಾಂಸ್ಕೃತಿಕ ಸಂಪರ್ಕಗಳನ್ನು ಸ್ಥಾಪಿಸಿ ವಿಜಯನಗರೋತ್ತರ ಕಾಲ ಹಾಗೂ ಪ್ರಸ್ತುತ ಇಂದಿನ ಕಾಲದ ನಡುವೆ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಕೊಂಡಿಯನ್ನು ಈ ಪಾಳೆಯಗಾರರು ನಿರ್ಮಿಸಿದರು. ಈ ಮಧ್ಯೆ ಕ್ರಿ.ಶ. ೧೮೦೦ ರಿಂದ ೧೯೪೭ರವರೆಗಿನ ಕಾಲವನ್ನು ವಸಾಹತು ಕಾಲ ಎಂದು ಗುರ್ತಿಸಲಾಗಿದೆ. ಪ್ರಸ್ತುತ ವಿಷಯದ ಅಧ್ಯಯನ ಕಾಲಘಟ್ಟವು ಕ್ರಿ.ಶ. ೧೫೦೦ ರಿಂದ ೧೮೦೦ ರವರೆಗೆ ಆಗಿದ್ದರೂ ಸಹ ಆನಂತರದ ಐತಿಹಾಸಿಕ ಸಾಂಸ್ಕೃತಿಕ ಬೆಳವಣಿಗೆಗಳು ಯಾವ ಆಯಾಮದೊಂದಿಗೆ ಸಾಗಿ ಆಧುನಿಕ ಕಾಲದೊಂದಿಗೆ ಸಂಯೋಜನೆಗೊಂಡವು ಎಂಬುದನ್ನು ಹೊರನೋಟದೊಂದಿಗೆ ನೋಡುವ ಉದ್ದೇಶದಿಂದ "ಹರಪನಹಳ್ಳಿ ಪಾಳೆಯಗಾರರು : ವಸಾಹತುಶಾಹಿ ಪ್ರಭಾವ ಮತ್ತು ಪರಿಣಾಮಗಳು" ಎಂಬ ಈ ಅಧ್ಯಾಯವನ್ನು ಸೇರಿಸಿಕೊಂಡು ವಿಜಯನಗರ ಕಾಲ, ವಿಜಯನಗರೋತ್ತರ ಪಾಳೆಯಗಾರರ ಕಾಲ, ವಸಾಹತುಶಾಹಿ ಕಾಲ, ಸ್ವತಂತ್ರ ಭಾರತ ಆಧುನಿಕ ಕಾಲ ಎಂದು ವಿವಿಧ ಕಾಲಘಟ್ಟಗಳಲ್ಲಿರುವ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಕೊಂಡಿಗಳು ಸಾಗಿಬಂದ ದಾರಿಯಲ್ಲಿಯ ಹೆಜ್ಜೆಗುರುತುಗಳನ್ನು ಅವಲೋಕಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೭.೧ ಪಾಳೆಯಗಾರರ ಪೂರ್ವ ಕಾಲದ ಪ್ರಭಾವ

ಒಂದು ರಾಜ್ಯ ಇನ್ನೊಂದು ರಾಜ್ಯವನ್ನು ರಾಜಕೀಯವಾಗಿ, ಆರ್ಥಿಕವಾಗಿ ವಶಪಡಿಸಿಕೊಂಡು ಪರಂಪರಾಗತವಾಗಿ ಸಾಗಿಬಂದ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ, ಬೌದ್ಧಿಕ ಮುಂತಾದ ಕ್ಷೇತ್ರಗಳಲ್ಲಿಯ ದೇಶೀಯ ಮೂಲಾಂಶಗಳನ್ನು ಸೈನಿಕ ಮತ್ತು ನ್ಯಾಯಿಕ ಬಲಪ್ರಯೋಗದ ಮೂಲಕ ದಮನಗೊಳಿಸಿ ಜನಾಂಗವನ್ನು ಶೋಷಣೆಗೆ ಒಳಪಡಿಸಿ

ಅವರವರ ತಾಯ್ನಾಡಿನ ಹಿತ ರಕ್ಷಣೆ ಮಾಡುವ, ಸಂಪತ್ತನ್ನು ದೋಚುವ, ಒಂದು ವ್ಯವಸ್ಥಿತ, ಪಟ್ಟಭದ್ರ, ಒಳಸಂಚಿನ ಹಾಗೂ ಗುಪ್ತ ಗುರಿ-ಉದ್ದೇಶ ಇಟ್ಟುಕೊಂಡಿರುವ ನೀತಿಯನ್ನು ವಸಾಹತುಶಾಹಿ ಎನ್ನುತ್ತಾರೆ. ಈ ನೀತಿಯ ಬಲಪ್ರಯೋಗದ ಅನುಷ್ಠಾನವನ್ನು ವಸಾಹತೀಕರಣ, ಅನುಷ್ಠಾನ ಕ್ರಮವನ್ನು ವಸಾಹತು ವ್ಯವಸ್ಥೆ ಎನ್ನಬಹುದು. ಪಾಶ್ಚಾತ್ಯರ ಆಗಮನದೊಂದಿಗೆ ಭಾರತಕ್ಕೆ ಈ ಶಾಹಿ, ನೀತಿ, ವ್ಯವಸ್ಥೆ ಕಾಲಿಟ್ಟಿತು. ಈ ಹಂತದ ಪ್ರಥಮ ಹೆಜ್ಜೆಯೇ ಕ್ರಿ.ಶ. ೧೪೯೮ರಲ್ಲಿ ಪೋರ್ಚುಗಲ್ ನಾವಿಕ ವಾಸ್ಕೋಡಿಗಾಮನ ಆಗಮನ ಮತ್ತು ಭಾರತಕ್ಕೆ ಜಲಮಾರ್ಗದ ಶೋಧನೆ ಯುರೋಪಿಯನ್ ರಾಷ್ಟ್ರಗಳಾದ ಪೋರ್ಚುಗಲ್‌ನ ಪೋರ್ಚಗೀಸರು, ಇಂಗ್ಲೆಂಡ್‌ನ ಇಂಗ್ಲೀಷರು, ಪ್ರಾನ್ಸ್‌ನ ಪ್ರೆಂಚರು, ಹಾಲೆಂಡಿನ ಡಚ್ಚರು ಭಾರತದಲ್ಲಿ ವಸಾಹತುಶಾಹಿ, ವಸಾಹತು ನೀತಿ, ವಸಾಹತು ವ್ಯವಸ್ಥೆ ಒಳಗೊಂಡ ವಸಾಹತೀಕರಣವನ್ನು ಅನುಷ್ಠಾನಗೊಳಿಸಿ ಸುಮಾರು ೨೫೦-೩೦೦ ವರ್ಷಗಳ ಕಾಲ ಭಾರತೀಯರನ್ನು ಗುಲಾಮಗಿರಿಗೆ ಒಳಪಡಿಸಿ ಭಾರತವನ್ನು ಎಲ್ಲಾ ರಂಗಗಳಲ್ಲಿ ವಸಾಹತೀಕರಣಕ್ಕೆ ಒಳಪಡಿಸಿದರು. ಇದರ ಪರಿಣಾಮವೇ ದಾಸ್ಯ. ಇದಕ್ಕೆ ಕಾರಣ ಭಾರತದಲ್ಲಿ ಬಲಿಷ್ಠ ರಾಜಕೀಯ ಇಚ್ಛಾಶಕ್ತಿಯ ಕೊರತೆ, ರಾಜಕೀಯ ಅನೈಕ್ಯತೆ ಹಾಗೂ ಆಗತಾನೇ ಅವನತಿ ಹೊಂದಿದ್ದ ವಿಜಯನಗರ ಸಾಮ್ರಾಜ್ಯದಂತಹ ಬಲಿಷ್ಠ ರಾಜ್ಯ ಶಕ್ತಿಯ ಅನುಪಸ್ಥಿತಿ ಮತ್ತು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ವಿಜಯನಗರೋತ್ತರ ಕಾಲದಲ್ಲಿ ಏಳಿಗೆಗೆ ಬಂದ ಚಿಕ್ಕ ಚಿಕ್ಕ ರಾಜಮನೆತನಗಳಾದ ಒಡೆಯರು, ಪಾಳೆಯಗಾರರು, ನಾಯಕರು, ಪ್ರಭುಗಳು, ದೇಸಾಯಿಗಳು, ಮುಂತಾದವರು ಅಪ್ರತ್ಯಕ್ಷವಾಗಿ ವಸಾಹತೀಕರಣಕ್ಕೆ ನಾಂದಿ ಹಾಡಿದರು.

ಕ್ರಿ.ಶ. ೧೪೯೮ರಲ್ಲಿ ವಾಸ್ಕೋಡಿಗಾಮ ಭಾರತಕ್ಕೆ ಬಂದ ನಂತರದ ಕಾಲದಿಂದ ಪೋರ್ಚಗೀಸರು ಗೋವಾದಲ್ಲಿ ನೆಲೆಗೊಳ್ಳುವವರೆಗೆ ಅನೇಕ ವಾಣಿಜ್ಯ ಮತ್ತು ರಾಜಕೀಯ ನಿಯೋಗಗಳು ಭಾರತಕ್ಕೆ ವಿಶೇಷವಾಗಿ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದವು. ದು ಅರ್ತೆ ಬಾರ್ಬೋಸಾ (೧೫೧೫-೧೬)[೧], ಡೊಮಿಂಗೋ ಪ್ಯಾಸ್ (೧೫೨೦)[೨], ಫರ್ನಾಓ ನ್ಯೂನಿಜ್ (೧೫೩೬-೩೭)[೩] ಮುಂತಾದವರ ವರದಿಗಳು ಇಲ್ಲಿಯ ವಾಣಿಜ್ಯ ವ್ಯವಹಾರ, ರಾಜಕೀಯ ಸಾಮಾಜಿಕ ಸ್ಥಿತಿಗಳ ಮೇಲೆ ಬೆಳಕುಚೆಲ್ಲುತ್ತವೆ. ಕ್ರಿ.ಶ. ೧೫೬೩-೬೭ರಲ್ಲಿ ಭೇಟಿ ನೀಡಿದ ಇಟಲಿಯ ಸೀಜರ್ ಫ್ರೆಡರಿಕ್ ಮತ್ತು ಈ ಭಾಗದ ಪೋರ್ಚುಗಲ್ ವರ್ತಕರ ಮತ್ತು ತಾಳಿಕೋಟೆ ಯುದ್ಧ ಕುರಿತು ಮಾಹಿತಿ ನೀಡುತ್ತಾನೆ. ಪಾಳೆಯಗಾರರ ಪೂರ್ವಕಾಲದ ವಸಾಹತುಶಾಹಿ ವಾಣಿಜ್ಯ ವಸಾಹತುಶಾಹಿಯಾಗಿದ್ದು ಇದರ ಪ್ರಭಾವ ವಿಜಯನಗರ ಸಾಮ್ರಾಜ್ಯದೊಂದಿಗೆ ಸಮೀಕರಣಗೊಂಡಿದೆ. ಹರಪನಹಳ್ಳಿ ಪಾಳೆಯಪಟ್ಟು ಪ್ರದೇಶದ ಮೇಲೆ ಅಪ್ರತ್ಯಕ್ಷವಾಗಿ ಆಗಿರಬಹುದು. ಇದನ್ನು ಪೋರ್ಚುಗೀಸ್ ವಾಣಿಜ್ಯ ವಸಾಹತು ಶಾಹಿ ಎನ್ನಬಹುದು.

## ೭.೨ ಪಾಳೆಯಗಾರರ ಕಾಲದ ಪ್ರಭಾವ

ಹರಪನಹಳ್ಳಿ ಪಾಳೆಯಗಾರರ ಏಳಿಗೆ ಕ್ರಿ.ಶ. ೧೫೬೫ರ ತಾಳಿಕೋಟೆ ಕದನ ನಂತರ ಎಂದು ಗುರುತಿಸಲಾಗಿದೆ. ವಿಜಯನಗರ ಸಾಮ್ರಾಜ್ಯದ ಅವನತಿ ಪ್ರಾದೇಶಿಕವಾಗಿ ಅನೇಕ ಪಾಳೆಯಪಟ್ಟುಗಳ, ಚಿಕ್ಕ ಚಿಕ್ಕ ರಾಜಮನೆತನಗಳ ಉದಯಕ್ಕೆ ಕಾರಣವಾಯಿತು. ವಿಜಯನಗರ ಶಕ್ತಿ ಪೆನುಗೊಂಡೆ ಮತ್ತು ಚಂದ್ರಗಿರಿಗೆ ಸ್ಥಳಾಂತರಗೊಂಡಿತು. ಕ್ರಿ.ಶ. ೧೫೬೫ ರಿಂದ ೧೬೧೫ ರ ಕಾಲಾವಧಿಯಲ್ಲಿ ಬ್ಯಾರಡಸ್[೫] (೧೬೧೪), ಲೆಫ್ಟಿನಂಟ್ ಎಮಿಟ್[೬] (೧೬೧೬) ಮುಂತಾದವರ ವರದಿಗಳು ಚಂದ್ರಗಿರಿಯಿಂದ ಆಳಿದ ವಿಜಯನಗರದ ಅರಸರಾದ ವೆಂಕಟಪತಿರಾಯ, ಶ್ರೀರಂಗರಾಯ, ಮುಂತಾದವರ ಹೆಸರುಗಳನ್ನು ಈ ಕಾಲದ ಕೆಲ ಪಾಳೆಯಗಾರರ ಉಲ್ಲೇಖಗಳನ್ನು ಮಾಡುತ್ತವೆ. ಹರಪನಹಳ್ಳಿ ಪಾಳೆಯಗಾರರ ಶಾಸನಗಳಲ್ಲಿಯೂ ಈ ಉಲ್ಲೇಖಗಳಿವೆ. ಈ ಕಾಲಾವಧಿಯಲ್ಲಿಯೇ ಹೈದರಾಲಿ, ಟಿಪ್ಪುಸುಲ್ತಾನ್ ಮೈಸೂರು ರಾಜ್ಯದಲ್ಲಿ ಪ್ರಬಲರಾಗಿ ಚಿಕ್ಕ ಚಿಕ್ಕ ಪಾಳೆಯಗಾರರ ಪಾಳೆಯಪಟ್ಟುಗಳ ಮೇಲೆ ದಾಳಿ ಮಾಡುತ್ತಾ ತಮ್ಮ ರಾಜ್ಯವನ್ನು ವಿಸ್ತರಿಸಿದರು. ಈ ವಿಸ್ತರಣೆ ಈಗಾಗಲೇ ಭಾರತದಲ್ಲಿ ಪ್ರಬಲರಾಗುತ್ತಿದ್ದ ಬ್ರಿಟಿಷರ ಗಮನ ಮದ್ರಾಸ್‌ನಿಂದ ಕರ್ನಾಟಕದ ಮೈಸೂರು, ಮಂಗಳೂರು, ಮಡಿಕೇರಿ, ಕೆನರಾ ಮುಂತಾದ ಪ್ರದೇಶಗಳ ಕಡೆ ತಿರುಗುವಂತೆ ಮಾಡಿತು. ಚಿಕ್ಕ-ಪುಟ್ಟ ಪಾಳೆಯಗಾರರ ಸಂಸ್ಥಾನಗಳನ್ನು ಹೈದರಾಲಿ, ಟಿಪ್ಪುಸುಲ್ತಾನ್ ದಮನಗೊಳಿಸಿ ತಮ್ಮ ಪ್ರಭುತ್ವ ವಿಸ್ತರಿಸಿದರು. ಹರಪನಹಳ್ಳಿ ಪಾಳೆಯಪಟ್ಟು ಮೇಲೆ ಹೈದರಾಲಿ, ಟಿಪ್ಪುಸುಲ್ತಾನ್ ಅನೇಕ ಬಾರಿ ಆಕ್ರಮಣ ನಡೆಸಿ ಹರಪನಹಳ್ಳಿ, ವೀರನದುರ್ಗ, ನಾರಾಯಣದೇವರಕೆರೆ, ಕೊಪ್ಪಳ, ಹಗರಿಬೊಮ್ಮನಹಳ್ಳಿ ಮುಂತಾದ ಪ್ರದೇಶಗಳ ಮೇಲೆ ದಾಳಿ ಮಾಡಿ ಪಾಳೆಯಗಾರರ ಸಂಪತ್ತನ್ನು ದೋಚಿಕೊಂಡು ಹೋದರು. ಹರಪನಹಳ್ಳಿಯ ಪಾಳೆಯಗಾರ ಬಾಗುಳಿಬಸಪ್ಪ ನಾಯಕ ಮತ್ತು ರಾಜ ಕುಟುಂಬವರ್ಗವನ್ನು ಬಂಧಿಸಿ ಕಬ್ಬಾಳದುರ್ಗ ಅನಂತರ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಟ್ಟನು.[೭] ಇದರೊಂದಿಗೆ ಈ ಪಾಳೆಯಗಾರರ ಪ್ರದೇಶದ ಮೇಲೆ ಬ್ರಿಟೀಷ್ ವಸಾಹತೀಕರಣದ ಛಾಯೆ ಗೋಚರಿಸಿತು. ಈ ಪ್ರಭಾವ ೨ನೇ ಸೋಮಶೇಖರ ನಾಯಕನ ಕಾಲದಲ್ಲಿ ದೃಢಗೊಂಡಿತು.

## ೭.೩ ಪಾಳೆಯಗಾರರೋತ್ತರ ಕಾಲದ ಪ್ರಭಾವ

ಕ್ರಿ.ಶ. ೧೭೯೯ರ ಶ್ರೀರಂಗಪಟ್ಟಣದ ಮುತ್ತಿಗೆಯ ೪ನೆಯ ಆಂಗ್ಲೋ-ಮೈಸೂರು ಯುದ್ಧ ಮತ್ತು ಟಿಪ್ಪು ಪತನ ಹಾಗೂ ಬ್ರಿಟೀಷರ ವಿಜಯದೊಂದಿಗೆ ವಿಜಯನಗರೋತ್ತರ ಕಾಲದ ಕರ್ನಾಟಕ ಇತಿಹಾಸದ ಬಹು ದೊಡ್ಡ ಅಧ್ಯಾಯ ಕೊನೆಗೊಂಡಿತು. ಇದರೊಂದಿಗೆ ಪಾಳೆಯಗಾರರ ಇತಿಹಾಸವೂ ಅಸ್ತಂಗತವಾಯಿತು ಇದಕ್ಕೆ ಹರಪನಹಳ್ಳಿ ಪಾಳೆಯಗಾರರ ಸಂಸ್ಥಾನವೂ ಹೊರತಾಗಿರಲಿಲ್ಲ. ೪ನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಬ್ರಿಟಿಷರಿಗೆ ಹೈದರಾಬಾದ್ ನಿಜಾಮ ಮತ್ತು ಮರಾಠರು ಸಹಕರಿಸಿದರೆಂಬ ಕಾರಣಕ್ಕಾಗಿ ಬ್ರಿಟಿಷರು ತಮಗೆ ರಾಜಕೀಯ ಮತ್ತು ವಾಣಿಜ್ಯಕ್ಕೆ

ಅನುಕೂಲವಾಗುವ ರೀತಿಯಲ್ಲಿ ಈ ರಾಜ್ಯವನ್ನು ಹಂಚಿ ಕರ್ನಾಟಕ ರಾಜ್ಯದ ಈಶಾನ್ಯ ಭಾಗಗಳನ್ನು ಹೈದರಾಬಾದ್ ನಿಜಾಮನಿಗೂ, ವಾಯುವ್ಯ ಭಾಗಗಳನ್ನು ಮರಾಠರಿಗೂ ಹಂಚಿದರು. ಈ ಪ್ರಕ್ರಿಯೆಯಲ್ಲಿ ಹರಪನಹಳ್ಳಿ ಪಾಳೆಯಪಟ್ಟಿನ ಕೊನೆಯ ಪಾಳೆಯಗಾರ ೨ನೇ ಸೋಮಶೇಖರ ನಾಯಕ ಮತ್ತು ದಿವಾನ ಹಂಪರಸಪ್ಪನನ್ನು ಹರಿಹರಕ್ಕೆ ಕರೆಸಿಕೊಂಡು ಆಂಗ್ಲ ಅಧಿಕಾರಿ ಜನರಲ್ ಹ್ಯಾರಿಸ್ ಮತ್ತು ಮೈಸೂರು ಸಂಸ್ಥಾನದ ದಿವಾನ ಪೂರ್ಣಯ್ಯ ಸಂಸ್ಥಾನದಲ್ಲಿ ಪಾಳೆಯಗಾರರ ಅಧಿಕಾರ ಮೊಟಕಗೊಳಿಸಿ ೨ನೇ ಸೋಮಶೇಖರ ನಾಯಕ ಬ್ರಿಟೀಷರಿಂದ ರೂ. ೬೦೦೦೦ ಗಳ ಜಹಗೀರು ಪಡೆದು ನಿವೃತ್ತನಾಗಬೇಕೆಂದು ಆದೇಶಿಸಿದರು. ೨ನೇ ಸೋಮಶೇಖರ ನಾಯಕ ಇದನ್ನು ಒಪ್ಪದೆ ತಿರಸ್ಕರಿಸಿದನು.[೮] ಆಗ ಈತನನ್ನು ಬಂಧಿಸಿ ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಟ್ಟರು. ೧೮೨೫ ರಲ್ಲಿ ಇಲ್ಲಿಯೇ ನಾಯಕ ಮರಣ ಹೊಂದಿದನು. ಬ್ರಿಟೀಷರು ಹರಪನಹಳ್ಳಿ ಪಾಳೆಯಪಟ್ಟನ್ನು ಬಳ್ಳಾರಿ ಜಿಲ್ಲೆಗೆ ಸೇರಿಸಿ ಬ್ರಿಟೀಷ್ ಆಡಳಿತಕ್ಕೆ ಒಳಪಡಿಸಿದರು. ಕ್ರಿ.ಶ. ೧೮೦೦ ರಿಂದ ೧೯೪೭ರವರೆಗೆ ಈ ಪ್ರದೇಶ ಬ್ರಿಟೀಷ್ ವಸಾಹತೀಕರಣಕ್ಕೆ ಒಳಪಟ್ಟು ಪಾಳೆಯಗಾರರ ಆಡಳಿತ ವ್ಯವಸ್ಥೆಯಿಂದ ಆಧುನಿಕ ಯುರೋಪಿಯನ್ ಆಂಗ್ಲ ಮಾದರಿಗೆ ವರ್ಗಾವಣೆಗೊಂಡಿತು. ಇಲ್ಲಿಯ ರಾಜಕೀಯ, ಆಡಳಿತ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ನ್ಯಾಯಾಂಗ ಮುಂತಾದ ಎಲ್ಲಾ ಕ್ಷೇತ್ರಗಳ ಮೇಲೆ ಬ್ರಿಟೀಷ್ ವಸಾಹತೀಕರಣದ ಪ್ರಭಾವವನ್ನು ಈ ಪ್ರದೇಶದಲ್ಲಿ ಗುರ್ತಿಸಬಹುದು. ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಪ್ರದೇಶ ಒಂದು ಜಿಲ್ಲೆಯಾಗಿ ರಚನೆಯಾಗಿ ಈ ಭಾಗದಲ್ಲಿ ಬ್ರಿಟೀಷರ ರಾಜ್ಯಾಡಳಿತ ಪ್ರಾರಂಭಗೊಂಡು ಸರ್ ಥಾಮಸ್ ಮೆನ್ರೋ ಪ್ರಥಮ ಜಿಲ್ಲಾ ಕಲೆಕ್ಟರ್ ಆಗಿ ತನ್ನ ಆಡಳಿತ ಪ್ರಾರಂಭಿಸಿದನು.[೯] ಈ ಭಾಗದಲ್ಲಿ ಪಾಳೆಯಗಾರರ ದಂಗೆ, ಅಶಾಂತಿ, ಅಸಮಧಾನಗಳನ್ನು ಹತ್ತಿಕ್ಕಿ, ಕೃಷಿ, ಕಂದಾಯ, ಸುಧಾರಣೆಗಳನ್ನು ಜಾರಿಗೊಳಿಸಿದನು. ಭೂ ಸರ್ವೇಕ್ಷಣೆ, ಆಂಗ್ಲ ಮಾದರಿ ಶಿಕ್ಷಣ ಪರಿಚಯಿಸಿದನು. ರಸ್ತೆ, ಕೆರೆ-ಕಾಲುವೆಗಳ ನಿರ್ಮಾಣ, ರೈಲು ಮಾರ್ಗ ನಿರ್ಮಾಣ, ಕೋರ್ಟುಗಳ ಸ್ಥಾಪನೆ ಮುಂತಾದ ಸಾರ್ವಜನಿಕ ಕಾರ್ಯಕ್ರಮಗಳು ಜಾರಿಗೊಂಡವು. ವಸಾಹತೀಕರಣದಿಂದ ಕೈಗಾರಿಕಾ ಮತ್ತು ಶೈಕ್ಷಣಿಕ ಕ್ರಾಂತಿ ಈ ಭಾಗದಲ್ಲಿ ಉಂಟಾಯಿತು. ಕಬ್ಬಿಣ, ಎಣ್ಣೆ, ಹತ್ತಿ ಬಟ್ಟೆ, ಕೈಗಾರಿಕೆಗಳು ಹೊಸಪೇಟೆ, ನಾರಾಯಣದೇವರಕೆರೆ, ಹಗರಿಬೊಮ್ಮನಹಳ್ಳಿ, ಹರಪನಹಳ್ಳಿ, ದಾವಣಗೆರೆ ಮುಂತಾದೆಡೆ ಬೆಳೆದು ಬಂದವು. ಬ್ರಿಟೀಷ್ ವಸಾಹತೀಕರಣ, ದುರಾಡಳಿತ ಹೆಚ್ಚಾದಂತೆ ಬಳ್ಳಾರಿ, ಕೊಪ್ಪಳ, ಮುಂಡರಗಿ, ಮುಂತಾದೆಡೆ ಪ್ರತಿಭಟನೆಗಳು ವ್ಯಕ್ತವಾದವು. ೨೦ನೇ ಶತಮಾನ ಆರಂಭಗೊಂಡಂತೆ ಬ್ರಿಟೀಷರ ವಿರುದ್ಧ ಭಾರತೀಯ ರಾಷ್ಟ್ರೀಯತೆಯು ಜಾಗೃತಗೊಂಡು ಈ ಭಾಗದಿಂದ ಸ್ವಾತಂತ್ರ್ಯ ಚಳುವಳಿ ಬಲಗೊಂಡಿತು. ದೇಶದ ಸ್ವಾತಂತ್ರ್ಯ ಹೋರಾಟದ ಅನೇಕ ಘಟನೆಗಳು ಇಲ್ಲಿ ಜರುಗಿದವು ಈ ಭಾಗದ ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪ, ಹರಪನಹಳ್ಳಿಯ ಇಜಾರಿ ವಸುಪಾಲಪ್ಪ, ಬಳ್ಳಾರಿ ಸಿದ್ದಮ್ಮ ಒಳಗೊಂಡಂತೆ ಸಾವಿರಾರು ದೇಶಪ್ರೇಮಿಗಳು ಈ ವಸಾಹತುಶಾಹಿ ವಿರುದ್ಧ ಹೋರಾಡಿದರು. ಆಗಸ್ಟ ೧೫ ೧೯೪೭ರಂದು ದೇಶ ಸ್ವತಂತ್ರಗೊಂಡಿತು ಆದರೂ ಸಹ ಹೈದರಾಬಾದ-ಕರ್ನಾಟಕ ಪ್ರದೇಶಗಳು

ಸ್ವತಂತ್ರ್ಯಗೊಳ್ಳದೆ ನಿಜಾಮನ ವಶದಲ್ಲಿ ಉಳಿದವು. ರಾಷ್ಟ್ರದ ಏಕತೆಯ ನೇತಾರ ಸರ್ದಾರ್ ಪಟೇಲರ ದೃಢ ನಿರ್ಧಾರ ಮತ್ತು ಕ್ರಮದಿಂದ ನಿಜಾಮನಿಂದ ವಿಮೋಚನೆ ಗೊಂಡು ಸ್ವತಂತ್ರಗೊಂಡು ಹರಪನಹಳ್ಳಿ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಯಿತು. ೧೯೯೮ರಲ್ಲಿ ರಾಜ್ಯ ಪುನರ್ ವಿಂಗಡಣೆ ಭಾಗವಾಗಿ ಇಲ್ಲಿಯ ಜನರ ಭಾವನಾತ್ಮಕ ವಿರೋಧದ ನಡುವೆಯೂ ದಾವಣಗೆರೆ ಜಿಲ್ಲಾ ವ್ಯಾಪ್ತಿಗೆ ಸೇರಿಸಲ್ಪಟ್ಟಿತು. ಸರ್ಕಾರ ಹೈದರಾಬಾದ್-ಕರ್ನಾಟಕದ ಜನತೆಗೆ ಶೈಕ್ಷಣಿಕ ಉದ್ಯೋಗ ಮೀಸಲಾತಿ ನೀಡಿದೆ. ಈ ಪ್ರಭಾವದಿಂದ ಹರಪನಹಳ್ಳಿ ತಾಲೂಕು ಜನತೆ ಇಂದು ಈ ಸೌಲಭ್ಯಕ್ಕಾಗಿ ಹೋರಾಟಕ್ಕೆ ಇಳಿದಿದೆ. ಇಂದು ಹರಪನಹಳ್ಳಿ, ಹ್ಯಾರಡ, ಗಡಿ ಗುಡಾಳ್, ಹೊಸಪೇಟೆ, ಬಳ್ಳಾರಿ, ಮುಂತಾದೆಡೆ ವಸಾಹತುಕಾಲೀನ ಪ್ರಭಾವದ ವಾಸ್ತುಶಿಲ್ಪ, ಕಟ್ಟಡಗಳನ್ನು, ವಸಾಹತು ಕಾಲದ ಅಧಿಕಾರಿಗಳ ಹೆಸರುಗಳನ್ನು ಹೊಂದಿದ ರಸ್ತೆ, ಕಟ್ಟಡ ಇತ್ಯಾದಿಗಳನ್ನು ಕಾಣಬಹುದಾಗಿದೆ.[೧೦]

### ೭.೪ ವಸಾಹತುಶಾಹಿ ಪರಿಣಾಮಗಳು

ಕ್ರಿ.ಶ. ೧೮೦೦ ರಿಂದ ೧೯೪೭ರ ಕಾಲಾವಧಿಯಲ್ಲಿ ಈ ಪ್ರದೇಶದ ಮೇಲೆ ಬ್ರಿಟೀಷ್ ವಸಾಹತುಶಾಹಿ ಪ್ರಭಾವ ಮತ್ತು ಪರಿಣಾಮಗಳನ್ನು ಇಲ್ಲಿಯ ರಾಜಕೀಯ, ಆಡಳಿತ, ನ್ಯಾಯಾಂಗ, ಕೃಷಿ, ಕಂದಾಯ, ಶಿಕ್ಷಣ, ಸಾರಿಗೆ ಸಂಪರ್ಕ ಮುಂತಾದ ಎಲ್ಲಾ ಕ್ಷೇತ್ರಗಳ ಮೇಲುಂಟಾಗಿರುವುದನ್ನು ಗಮನಿಸಬಹುದು.

೧. ಕ್ರಿ.ಶ. ೧೮೦೦ ರಿಂದ ಈ ಪ್ರದೇಶ ಬ್ರಿಟಿಷರ ವಶಕ್ಕೆ ಬಂದು ಸರ್ ಥಾಮಸ್ ಮೆನ್ರೊನನ್ನು ಕಲೆಕ್ಟರ್‌ನನ್ನಾಗಿ ನೇಮಿಸಿ ಇಲ್ಲಿಯ ಆಡಳಿತವನ್ನು ಆತನ ನಿಯಂತ್ರಣಕ್ಕೆ ವಹಿಸಲಾಯಿತು. ಜನರಲ್ ಡುಗಾಲ್ಸ್ ಕಾಂಪ್‌ಬೆಲ್ ಸೇನಾಮುಖ್ಯಸ್ಥನಾಗಿ ನೇಮಕಗೊಂಡನು. ಪಾಳೆಯಗಾರರ ಪ್ರದೇಶಗಳಾದ ಹರಪನಹಳ್ಳಿ, ಹೂವಿನಹಡಗಲಿ, ಕೂಡ್ಲಿಗಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ ಭಾಗಗಳನ್ನು ಬಳ್ಳಾರಿ ಜಿಲ್ಲೆಗೆ ಸೇರಿಸಲಾಯಿತು. ಕಲೆಕ್ಟರ್ ಅಧೀನದಲ್ಲಿ ಉಪ ವಿಭಾಗಾಧಿಕಾರಿಗಳನ್ನು (Deputy Collectors) ನೇಮಿಸಿ ಹರಪನಹಳ್ಳಿ ಒಂದು ಉಪವಿಭಾಗವಾಗಿ ಹರಪನಹಳ್ಳಿ, ಕಂಪ್ಲಿ, ಹಡಗಲಿ, ಕೂಡ್ಲಿಗಿ ಇದರಲ್ಲಿ ಸೇರಿದವು. ಜೇಮ್ಸ್ ಕ್ರೋಚೆನ್ ವಿಭಾಗೀಯ ಕಲೆಕ್ಟರ್‌ನಾಗಿ, ಇಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದನು. ಸರ್ ಥಾಮಸ್ ಮೆನ್ರೊ ಈ ಪ್ರದೇಶದ ಆಡಳಿತದ ಮುಖ್ಯಸ್ಥನಾಗಿ ಕಂದಾಯ, ಶಾಂತಿ ಪಾಲನೆ, ಸಾರ್ವಜನಿಕ ಅಭಿವೃದ್ಧಿ, ನ್ಯಾಯವ್ಯವಸ್ಥೆ, ಶಿಕ್ಷಣ, ಮುಂತಾದವುಗಳನ್ನು ಯುರೋಪಿಯನ್ ಮಾದರಿಗೆ ಒಳಪಡಿಸಿದನು.[೧೧]

೨. ಈ ವಸಾಹತೀಕರಣದಿಂದಾಗಿ ಈ ಭಾಗದಲ್ಲಿ ದೋಂಡಿಯ ವಾಘ, ಬೇಲೂರಿನ ಕೃಷ್ಣಪ್ಪ ನಾಯಕ, ಕೊಪ್ಪಳದ ವೀರಪ್ಪ[೧೨], ಹರಪನಹಳ್ಳಿ ಪಾಳೆಯಗಾರರು, ಮುಂಡರಗಿಯ ಭೀಮರಾವ್, ಪಿಂಡಾರಿಗಳು, ಬಳ್ಳಾರಿ ಜಿಲ್ಲೆಯ ಇತರ ಪಾಳೆಯಗಾರರು[೧೩] ದಂಗೆ ಎದ್ದರು

ಸರ್. ಥಾಮಸ್ ಮೆನ್ರೊ ಈ ಎಲ್ಲಾ ದಂಗೆಗಳನ್ನು ಅಡಗಿಸಿ ಶಾಂತಿ ಸುವ್ಯವಸ್ಥೆ ಕಾಪಾಡಿದನು. ಪಾಳೆಯಗಾರರ ಮನೆತನಗಳಿಗೆ ಸೇರಿದ ಯುವಕರನ್ನು ತನ್ನ ಮಿಲಿಟರಿಗೆ ಸೇರಿಸಿಕೊಂಡು ವ್ಯವಸ್ಥೆ ಕಲ್ಪಿಸಿದನು. ಇವರಿಗೆ ಇತರ ಪರ್ಯಾಯ ವೃತ್ತಿಗಳಲ್ಲಿ ತೊಡಗಲು ಆದೇಶಿಸಲಾಯಿತು. ಇದು ಪ್ರಾದೇಶಿಕ ಸ್ವಾಭಿಮಾನಕ್ಕೆ ಧಕ್ಕೆ ತಂದಿತು.

೩. ಈ ಪ್ರದೇಶದ ಸಾರ್ವಜನಿಕ ಆಡಳಿತ ಗವರ್ನರ್ ಜನರಲ್, ಕಲೆಕ್ಟರ್, ಸಬ್ ಕಲೆಕ್ಟರ್ ಡೆಪ್ಯುಟಿ ಕಲೆಕ್ಟರ್, ತಹಶೀಲ್ದಾರ್, ಪಟೇಲ, ಕರಣಂ, ರೆವಿನ್ಯೂ ಪಿವನ್ಸ್ ಮುಂತಾದ ಅಧಿಕಾರಿ ಶ್ರೇಣಿಗಳಲ್ಲಿ ಹಂಚಿಕೆಯಾಯಿತು.

೪. ವಸಾಹತುಶಾಹಿ ಪರಿಣಾಮದಿಂದ ಈ ಪ್ರದೇಶದಲ್ಲಿ ಕಂದಾಯ ಸುಧಾರಣೆಗಳು ಜಾರಿಗೊಂಡವು ಊಳಿಗಮಾನ್ಯ ವ್ಯವಸ್ಥೆ ಸರ್ ಥಾಮಸ್ ಮೆನ್ರೊ ಪರಿಚಯಿಸಿದ ರೈತವಾರಿ ಪದ್ಧತಿಗೆ ಪರಿವರ್ತನೆಗೊಂಡಿತು. ಭೂಮಾಪನ ಕ್ರಮ ಜಾರಿಗೊಂಡು ಕಂದಾಯ ಸುಧಾರಣೆಗಳು ಕಂಡುಬಂದವು ಇದರ ಪ್ರಭಾವವನ್ನು ಈಗಲೂ ಗುರ್ತಿಸಬಹುದು. ಈ ಭಾಗದಲ್ಲಿ ಭೂಮಿಯನ್ನು ಎಕರೆ ಮತ್ತು ಸೆಂಟ್ಸ್‌ಗಳಲ್ಲಿ ಗುರ್ತಿಸಲಾಗುತ್ತದೆ. ರೈತರಿಗೆ ಭೂ ಪಟ್ಟಾಗಳನ್ನು ನೀಡಲಾಯಿತು.

೫. ಬ್ರಿಟೀಷ್ ವಸಾಹತುಶಾಹಿ ಎಷ್ಟು ಪರಿಣಾಮಕಾರಿಯಾಗಿತ್ತೆಂದರೆ ದೇಶೀಯ ಆಡಳಿತ ಪುನಃ ತಲೆಯೆತ್ತಿದಂತಾಯಿತು. ಚಿಕ್ಕೇರೂರು ಗೋವಿಂದಾಚಾರ್ಯರು ತಮ್ಮ ಅಪ್ರಕಟಿತ ಹಸ್ತಪ್ರತಿಯಲ್ಲಿ "ಕ್ಷಯ ಸಂವತ್ಸರ ಪುಷ್ಯಶುದ್ಧ ೧೦ಯಲ್ಲು ಕಂಪನಿ ಸರ್ಕಾರದ ಅಪ್ಪಣೆ ಪ್ರಕಾರ ಸರ್ದಾರ್ ರವುಡಲ್ ಸಾಹೇಬರು ಬಂದು ಪಾಳೆಯಗಾರರ ಕುರೆದಗಡ್ಡೆ ಕಲ್ಲೆ (ಕೋಟೆ) ಕೆಡವಿಸಿ ಇಲ್ಲಿಯ ಬತೇರಿಗಳಿಗೆ ಮದ್ದಿನ ಪೆಟೇರಿಗೆ ಹುರಿ ಹಾಕಿಸಿ ಯಾವತ್ತೂ ತೋಪು ಸಾಮಾನು ಸಂಪತ್ತು ಬಳ್ಳಾರಿಗೆ ವೈದರು"[೧೪] ಎಂದು ಬರೆದಿರುತ್ತಾರೆ. ಇದನ್ನು ಗಮನಿಸಿದಲ್ಲಿ ಬ್ರಿಟಿಷರು ತಮ್ಮ ವಸಾಹತುಶಾಹಿ ಅಧಿಕಾರವನ್ನು ಬಲ ಪ್ರಯೋಗಿಸಿ ಎಷ್ಟು ಗರಿಷ್ಠ ಪ್ರಮಾಣದಲ್ಲಿ ಸಾಧ್ಯವೋ ಅಷ್ಟು ಪ್ರಮಾಣದಲ್ಲಿ ಸ್ಥಾಪಿಸಿದರು. ೧೮೭೧ರಲ್ಲಿ ಪಾಳೆಯಗಾರರ ರಾಜಧಾನಿ ನಾರಾಯಣದೇವರಕೆರೆಯ ಪಾಳೆಯಗಾರರ ದರ್ಬಾರು ಭವನದಲ್ಲಿ ಸರ್ಕಾರಿ ನ್ಯಾಯಾಲಯ ಸ್ಥಾಪಿಸಲ್ಪಟ್ಟಿತು.[೧೫]

೬. ವಸಾಹತುಶಾಹಿ ಆಡಳಿತ ಕಾರಣದಿಂದಾಗಿ ಈ ಪ್ರದೇಶದಲ್ಲಿ ಸಾಮಾಜಿಕ ಅನಿಷ್ಟ ಪದ್ಧತಿಗಳು, ಸತಿಸಹಗಮನ, ಬಾಲ್ಯವಿವಾಹ ನಿಷೇಧ, ವಿಧವಾ ವಿವಾಹ, ಅಂತರ್‌ಜಾತಿ ವಿವಾಹ, ಸಹಭೋಜನ, ಪ್ರೋತ್ಸಾಹ ಮುಂತಾದ ಸಾಮಾಜಿಕ ಸುಧಾರಣೆಗಳು ಜಾರಿಗೊಂಡವು ಇಲ್ಲಿಯ ಸಾಮಾಜಿಕ ವ್ಯವಸ್ಥೆ ಬದಲಾಯಿತು. ಮತಾಂತರವೂ ಬೆಳೆದು ಬಂದಿತು. ಕ್ರಿಶ್ಚಿಯನ್ ಧರ್ಮ ನೆಲೆಗೊಂಡಿತು.

೭. ವಸಾಹತುಶಾಹಿ ಮುಖ್ಯ ಉದ್ದೇಶವೇ ವಾಣಿಜ್ಯ ವ್ಯವಹಾರ, ಆರ್ಥಿಕ ವಶೀಕರಣ ಇದರ ಪ್ರಭಾವದಿಂದ ಈ ಪ್ರದೇಶದ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಸಾರಿಗೆ ಸಂಪರ್ಕ ಮುಂತಾದವುಗಳು ವಸಾಹತೀಕರಣಕ್ಕೆ ಪೂರಕವಾಗುವಂತೆ ರೂಪಿಸಲ್ಪಟ್ಟವು. ನೂತನ ರಸ್ತೆಗಳು, ರೈಲು ಸಂಪರ್ಕ, ಬಳ್ಳಾರಿ-ಗುಂತಕಲ್ (೧೮೭೧) ಬಳ್ಳಾರಿ ಹೊಸಪೇಟೆ, ಹೊಸಪೇಟೆ-ಧಾರವಾಡ. ಹೊಸಪೇಟೆ ಕೊಟ್ಟೂರು ರೈಲು ಮಾರ್ಗಗಳು ಸ್ಥಾಪನೆಯಾದವು. ಕಂಪ್ಲಿ, ಹೊಸಪೇಟೆ, ಬಳ್ಳಾರಿ, ಕೊಟ್ಟೂರು, ದಾವಣಗೆರೆ, ಕೈಗಾರಿಕಾ ಕೇಂದ್ರಗಳಾಗಿ ಬೆಳೆದು ಬಂದವು. ತಂಬಾಕು ಉದ್ದಿಮೆ ಬೆಳೆಯಿತು. ಈ ಭಾಗದಲ್ಲಿ ಇಂದಿಗೂ ರೈತರು ತಂಬಾಕು ಬೆಳೆಯುತ್ತಾರೆ. ಇದಕ್ಕೆ ಪೂರಕವಾಗಿ ಅಂಚೆ-ತಂತಿ-ದೂರವಾಣಿ ಕಛೇರಿಗಳು ಸ್ಥಾಪಿಸಲ್ಪಟ್ಟವು. ಆಧುನಿಕ ಅಂಚೆ ಪದ್ಧತಿ ಜಾರಿಗೊಂಡಿತು. ಹರಪನಹಳ್ಳಿ ಬಳ್ಳಾರಿ ಜಿಲ್ಲೆಯ ಒಂದು ಅಂಚೆ ವಿಭಾಗವಾಗಿತ್ತು.

೮. ಸಾರ್ವಜನಿಕ ಶಾಂತಿ-ಸುವ್ಯವಸ್ಥೆ ರಕ್ಷಣೆಗಾಗಿ ಆಧುನಿಕ ಪದ್ಧತಿ ಅನುಸರಿಸಿದರು. ತಳವಾರರನ್ನು ಗ್ರಾಮಾಧಿಕಾರಿಗಳ ವ್ಯಾಪ್ತಿಗೆ ತಂದರು. ಪೊಲೀಸ್ ಕಾಯ್ದೆಗಳು ಜಾರಿಗೊಂಡವು. ಪೊಲೀಸರಿಗೆ ಸಮವಸ್ತ್ರ, ಆಯುಧ, ವೇತನ ನೀಡಲಾಯಿತು.

೯. ಸಾರ್ವಜನಿಕವಾಗಿ ಅನುಕೂಲವಾಗುವಂತೆ ಅನೇಕ ಕೆಲಸ ಕಾರ್ಯಗಳನ್ನು ಕೈಗೊಂಡರು ರಸ್ತೆ, ಕೆರೆ-ಕಾಲುವೆ ನಿರ್ಮಾಣ, ದುರಸ್ತಿ ಐತಿಹಾಸಿಕ ಮಹತ್ವದ ಸ್ಮಾರಕಗಳ ರಕ್ಷಣೆ, ಛತ್ರಗಳ ನಿರ್ಮಾಣ. ಸಾರ್ವಜನಿಕ ಆರೋಗ್ಯ ಸಿಡುಬು ರೋಗಕ್ಕೆ ಚುಚ್ಚುಮದ್ದು ಹಾಕುವುದನ್ನು ಬ್ರಿಟಿಷರು ಆರಂಭಿಸಿದರು. ಬರ-ಕ್ಷಾಮ ಪರಿಹಾರ, ಮುಂತಾದವು ವಸಾಹತುಶಾಹಿ ಪರಿಣಾಮವಾಗಿದೆ. ದೇವರ ತಿಮ್ಮಲಾಪುರದ ಪುಷ್ಕರಣೆಯನ್ನು ಹರಪನಹಳ್ಳಿ ಮ್ಯಾಜಿಸ್ಟ್ರೇಟ್ ದುರಸ್ತಿ ಮಾಡಿಸಿದ ಶಾಸನ ಉಲ್ಲೇಖವಿದೆ. ಹಂಪಿ ಸ್ಮಾರಕಗಳ ರಕ್ಷಣೆಯಲ್ಲಿ ಬ್ರಿಟಿಷ ಅಧಿಕಾರಿಗಳಾದ ಈರಲ್ ಮಿಂಟೋ, ಮಾರ್ಕಿಸ್ ಹೇಸ್ಟಿಂಗ್ಸ್ ಮಾರ್ಕ್ವಿಸ್ ಹೇಸ್ಟಂಗ್ಸ್, ಲಾರ್ಡ ಅಮ್‌ರೆಷ್ಟ್, ಲಾರ್ಡ್ ಕ್ಯಾನಿಂಗ್, ಮುಂತಾದವರ ಪಾತ್ರದೊಡ್ಡದಾಗಿದೆ.

೧೦. ಶೈಕ್ಷಣಿಕವಾಗಿ ಒಂದು ಸಾರ್ವತ್ರಿಕ ವ್ಯವಸ್ಥೆ ಜಾರಿಗೊಂಡಿತು. ಪಾರಂಪರಿಕ ಶಿಕ್ಷಣಕ್ಕೆ ಮಹತ್ವ ನೀಡಲಾಯಿತು. ಇಂಗ್ಲೀಷ್ ಮಾದರಿ ಶಿಕ್ಷಣ ಪರಿಚಯಿಸಲಾಯಿತು. ಬಳ್ಳಾರಿ ಶಿಕ್ಷಣ ಕೇಂದ್ರವಾಯಿತು. ಮಹಿಳಾ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಲಾಯಿತು. ಕ್ರೈಸ್ತ ಮಿಷನರಿಗಳು ಶಿಕ್ಷಣ ಪ್ರಚಾರದಲ್ಲಿ ಪ್ರಮುಖ ಪಾತ್ರ ವಹಿಸಿದವು.

೧೧. ವಸಾಹತುಶಾಹಿ ಆಡಳಿತದ ಪರಿಣಾಮವನ್ನು ಈ ಕಾಲದ ಸಾರ್ವಜನಿಕ ಆಡಳಿತ ಕಛೇರಿ, ಆಸ್ಪತ್ರೆ, ನ್ಯಾಯಾಲಯ, ಶಾಲಾ ಕಾಲೇಜು ಕಟ್ಟಡ ಮುಂತಾದವುಗಳು ನಿರ್ಮಾಣದ ಮೇಲೆ ಉಂಟಾಯಿತು. ಈ ತರಹದ ವಾಸ್ತುಶಿಲ್ಪ ಕಟ್ಟಡಗಳನ್ನು ಬಳ್ಳಾರಿ, ಹರಪನಹಳ್ಳಿ, ಹೊಸಪೇಟೆ, ಮುಂತಾದೆಡೆ ಈಗಲೂ ಕಾಣಬಹುದು.

೧೨. ವಸಾಹತುಶಾಹಿ ಆಡಳಿತ ಪರಿಣಾಮಗಳನ್ನು ಈ ಪ್ರದೇಶದ ಹಾಡು, ಲಾವಣಿ, ಜನಪದ ಸಾಹಿತ್ಯದಲ್ಲಿ ಕಾಣಬಹುದು.

೧೩. ಸರ್ಕಾರದ ಅಧಿಕಾರಿಗಳು ಪ್ರವಾಸ, ತಪಾಸಣೆ, ಅಭಿವೃದ್ಧಿ ಪರಿಶೀಲನೆ ಮುಂತಾದ ಉದ್ದೇಶಕ್ಕಾಗಿ ಪ್ರವಾಸಿ ಮಂದಿರ, ಪರಿವೀಕ್ಷಣಾಲಯಗಳು ನಿರ್ಮಾಣಗೊಂಡವು.

೧೪. ಸಾರ್ವಜನಿಕ ಅನುಕೂಲಕ್ಕೆ ಛತ್ರಗಳು ನಿರ್ಮಾಣಗೊಂಡವು. ಹಡಗಲಿ, ಮೊದಲಗಟ್ಟ ಹಗರಿಬೊಮ್ಮನಹಳ್ಳಿ, ತಂಬ್ರಹಳ್ಳಿ, ಹಂಪಾಪಟ್ಟಣ, ಇಟಗಿ, ಮುಂತಾದೆಡೆ ನಿರ್ಮಿಸಲಾಯಿತು.

೧೫. ವಸಾಹತುಶಾಹಿ ಅಧಿಕಾರಿಗಳ ಆಡಳಿತ, ಸೇವೆ, ಇತ್ಯಾದಿಗಳನ್ನು ಸ್ಮರಿಸಿ ಅವರ ಸಮಾಧಿ ಅವರ ಹೆಸರಿನಲ್ಲಿ ರಸ್ತೆ, ನಗರಗಳನ್ನು ನಿರ್ಮಿಸಲಾಗಿದೆ. ಉದಾಹರಣೆ ಹರಪನಹಳ್ಳಿಯಲ್ಲಿ ಬ್ರೂಸ್ ರಸ್ತೆ, ಬಳ್ಳಾರಿಯಲ್ಲಿ ಮಿಲ್ಲರ್ಸ್ ರಸ್ತೆ, ಇತ್ಯಾದಿ ಕಂಡುಬರುತ್ತವೆ. ಹೀಗೆ ವಸಾಹತುಶಾಹಿ ಪರಿಣಾಮಗಳನ್ನು ಈ ಪ್ರದೇಶದ ರಾಜಕೀಯ, ಆಡಳಿತ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಕಲೆ ವಾಸ್ತುಶಿಲ್ಪ, ಮುಂತಾದ ಕ್ಷೇತ್ರಗಳಲ್ಲಿ ಗುರ್ತಿಸಬಹುದು. ಈ ಪ್ರದೇಶ ಪಾಳೆಯಗಾರರ ವ್ಯವಸ್ಥೆಯಿಂದ ವಸಾಹತೀಕರಣಗೊಂಡು ಆಧುನಿಕ ಸಮಕಾಲೀನತೆಗೆ ಸಾಗಿಬಂದಿರುವುದನ್ನು ನಿರಂತರವಾಗಿ ಗುರ್ತಿಸಬಹುದು. ವಸಾಹತುಶಾಹಿ ವಿರುದ್ಧ ಇಲ್ಲಿ ಆರಂಭಿಸಿದ ಭಾರತ ರಾಷ್ಟ್ರೀಯತೆಯ ಹೋರಾಟ ಪ್ರಮುಖ ಹೆಜ್ಜೆಗುರುತಾಗಿದೆ. ಇಂದು ಬಳ್ಳಾರಿ, ದಾವಣಗೆರೆ ಜಿಲ್ಲಾ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಾ ಕೃಷಿ, ಕೈಗಾರಿಕೆ, ಶಿಕ್ಷಣ ನಾಡಿನ ಭಾಷೆ, ಸಾಹಿತ್ಯ, ಚರಿತ್ರೆ ಸಂಶೋಧನೆಗಳಿಗೆ ಕನ್ನಡ ವಿಶ್ವವಿದ್ಯಾಲಯ, ಉನ್ನತ ಶಿಕ್ಷಣಕ್ಕೆ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ದಾವಣಗೆರೆ ವಿಶ್ವವಿದ್ಯಾಲಯ, ವಿಜಯನಗರ ವೈದ್ಯಕೀಯ ಶಿಕ್ಷಣ ಸಂಸ್ಥೆ ಮುಂತಾದವು ಬೆಳೆದು ಬಂದಿವೆ.

## ಅಡಿ ಟಿಪ್ಪಣಿಗಳು

೧. ರಾಬರ್ಟ್‌ಸಿವೆಲ್, ಸದಾನಂದ ಕನವಳ್ಳಿ (ಅನು) ೨೦೦೬, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಕ.ವಿ.ವಿ., ಹಂಪಿ, ಪುಟ ೧೪೧.

೨. ವಿವೇಕ ರೈ ಬಿ.ವಿ. ಮತ್ತು ಇತರರು: ೨೦೧೦, ಪ್ರವಾಸಿಕಂಡ ವಿಜಯನಗರ, ಕ.ವಿ.ವಿ., ಹಂಪಿ, ಪುಟ ೫೩.

೩. ಅದೇ., ಪುಟ ೧೦೪.

೪. ಅದೇ., ಪುಟ ೧೯೫.

೫. ಅದೇ., ಪುಟ ೨೧೧.

೬. ಅದೇ., ಪುಟ ೨೨೫.

೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲಾ ಪಾಳೆಯಗಾರರು, ಕ.ವಿ.ವಿ. ಹಂಪಿ, ಪುಟ ೭೮.

೮. ಅದೇ., ಪುಟ ೭೯.

೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಕ.ವಿ.ವಿ., ಹಂಪಿ, ಪುಟ ೧೯.

೧೦. ಕ್ಷೇತ್ರಕಾರ್ಯ ವರದಿ

೧೧. ವಿರೂಪಾಕ್ಷಿ ಪೂಜಾರಹಳ್ಳಿ, ಪುರ್ವೋಕ್ತ, ಪುಟ ೧೯.

೧೨. ಚಿನ್ನಸ್ವಾಮಿ ಸೋಸಲೆ, ೨೦೧೦, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಕ.ವಿ.ವಿ., ಹಂಪಿ, ಪುಟ ೧೨.

೧೩. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪುಟ ೩೬.

೧೪. ಚಿಕ್ಕೇರೂರು ಗೋವಿಂದಾಚಾರ್ಯ, ಅಪ್ರಕಟಿತ ಹಸ್ತಪ್ರತಿ, ಪುಟ. ೧೪೯.

೧೫. ವಿರೂಪಾಕ್ಷಿ ಪೂಜಾರಹಳ್ಳಿ, ಪೂರ್ವೋಕ್ತ, ಪುಟ. ೨೨.

## ಅಧ್ಯಾಯ – ೮

## ಸಮಾರೋಪ

ಭಾರತದಂತಹ ಬಹುಭಾಷಾ ದೇಶಕ್ಕೆ 'ಪ್ರಾದೇಶಿಕ ಇತಿಹಾಸ' ಎಂಬ ಪದ ಅನ್ವಯಿಸುವುದಿಲ್ಲ ಎನ್ನುವ ಅಪವಾದವಿದ್ದರೂ ಅದನ್ನೆ ನಾವು 'ಸ್ಥಳೀಯ ಇತಿಹಾಸ'ವೆಂದು ಅನ್ವಯಿಸಿಕೊಳ್ಳುವುದೇ ಸೂಕ್ತ. ಏಕೆಂದರೆ ಭಾರತದಲ್ಲಿ ಚಾರಿತ್ರಿಕವಾಗಿ ಬೆಳದಂತಹ ಎಲ್ಲಾ ಪ್ರದೇಶಗಳು ಸಂಪೂರ್ಣವಾಗಿ ಕೇಂದ್ರಾಡಳಿತಕ್ಕೆ ಒಳಪಟ್ಟಿರುವುದಿಲ್ಲ. ಅಂದರೆ ಭಾರತದ ಇತಿಹಾಸವೆಂದರೆ ವಿವಿಧ ರಾಜ್ಯಗಳ, ಪ್ರದೇಶಗಳ ಇತಿಹಾಸವೇ ಹೊರತು ಕೆಲವೇ ರಾಜವಂಶಗಳ ಇತಿಹಾಸವಲ್ಲ ಎಂಬುದು ಸ್ಪಷ್ಟ. ಇಂತಹ ಸ್ಥಳೀಯ ಇತಿಹಾಸ ಚರಿತ್ರೆಕಾರನಿಗೆ ಅವಶ್ಯಕ ಹಾಗೂ ಬಹುಮುಖ್ಯವೆನಿಸುವ ದಾಖಲೆಗಳನ್ನು ಆ ಪ್ರದೇಶದ ಇತಿಹಾಸ ರಚನೆಗೆ ಒಂದು ಚೌಕಟ್ಟನ್ನು ಒದಗಿಸಿಕೊಡುತ್ತದೆ. ಅಲ್ಲದೇ ಎಲ್ಲಾ ವಿಧದ ಅಧ್ಯಯನದ ವಿಧಾನಗಳನ್ನು ಚರಿತ್ರೆಯ ಮಾದರಿಗಳನ್ನು ಮೌಖಿಕ, ಸಾಂಖ್ಯಿಕ ಮತ್ತು ಸಾಹಿತ್ಯಿಕ ಆಕರಗಳನ್ನು ಹೊಂದಿದ್ದು ಜನಪದ ಮತ್ತು ಜಾನಪದ ಜೀವನಕ್ಕೆ ಸಂಬಂಧಿಸಿದ ವಸ್ತು ವಿಶೇಷತೆ ವಿವಿಧ ಸಮುದಾಯಗಳ ರಾಜಕೀಯ, ಆರ್ಥಿಕ, ಬೌದ್ಧಿಕ, ಸಾಮಾಜಿಕ, ಕಲೆ, ವಾಸ್ತುಶಿಲ್ಪ, ಸಾಹಿತ್ಯ ಮುಂತಾದವುಗಳನ್ನು ಅರಿಯುವಲ್ಲಿ ಸ್ಥಳೀಯ ಇತಿಹಾಸ ಸಹಾಯಕವಾಗುತ್ತದೆ. ಇತ್ತೀಚಿನ ಅಧ್ಯಯನದ ದೃಷ್ಟಿಕೋನಗಳು ಬದಲಾಗಿ ರಾಜ್ಯದ ಅನೇಕ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ಪ್ರಾದೇಶಿಕ ಸಂಶೋಧನೆಗಳು ನಡೆಯುತ್ತಿವೆ. ಇದರಿಂದ ಅನೇಕ ಹೊಸ ಹೊಸ ಐತಿಹಾಸಿಕ ಅಂಶಗಳು ಬೆಳಕಿಗೆ ಬಂದು ಸ್ಥಳೀಯ ಅಥವಾ ಪ್ರಾದೇಶಿಕ ಇತಿಹಾಸದ ಪುನರ್ರಚನೆಗೆ ಅಗತ್ಯವಾದ ಆಕರಗಳು ಲಭ್ಯವಾಗಿ ಪರಿಪೂರ್ಣ ಇತಿಹಾಸ ರಚನೆಗೆ ಸಹಾಯಕವಾಗಿದೆ. ಈ ನಿಟ್ಟಿನಲ್ಲಿ ಏಷ್ಯಾಖಂಡದಲ್ಲೇ ಅತ್ಯಂತ ಪ್ರಾಚೀನ ನೆಲೆಯಾದ ಬಳ್ಳಾರಿ–ದಾವಣಗೆರೆ, ಹರಪನಹಳ್ಳಿ ಪ್ರದೇಶವೂ ಸಹ ಈ ಸಾಲಿಗೆ ಸೇರಿರುವ ಒಂದು ಮಹತ್ವದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪ್ರದೇಶವಾಗಿದೆ. ಬಳ್ಳಾರಿ ಪ್ರದೇಶದಲ್ಲಿದ್ದ ಹರಪನಹಳ್ಳಿ ಅತ್ಯಂತ ಮಹತ್ವದ ಐತಿಹಾಸಿಕ ಹಿನ್ನೆಲೆಯ ಘನ ಚರಿತ್ರೆಯನ್ನು ಹೊಂದಿದೆ. ಪ್ರಸ್ತುತ ಕ್ರಿ.ಶ. ೧೯೯೭ ಆಗಸ್ಟ್ ೧೫ರಂದು ದಾವಣಗೆರೆ ಜಿಲ್ಲೆಗೆ ಸೇರಿದೆ.

ಅನಾದಿಕಾಲದಿಂದಲೂ ಮಾನವನ ನೆಲೆಯಾಗಿದ್ದು ಚರಿತ್ರೆಯ ವಿವಿಧ ಮಜಲುಗಳನ್ನು ಹೊಂದಿರುವ ಈ ಪ್ರದೇಶ ಕರ್ನಾಟಕದ ಇತಿಹಾಸದಲ್ಲಿ ವಿಶಿಷ್ಟಸ್ಥಾನವನ್ನು ಪಡೆದುಕೊಂಡಿದೆ. ಕರ್ನಾಟಕದ ಬದುಕಿನ ಸಂಸ್ಕೃತಿಯಲ್ಲಿ ಹೆಜ್ಜೆ ಇರಿಸಿದ ಎಲ್ಲಾ ರಾಜಮನೆತನಗಳು ಇಲ್ಲಿನ ಐತಿಹಾಸಿಕ ಸಾಂಸ್ಕೃತಿಕ ಪರಂಪರೆಯನ್ನು ಅನುಸರಿಸಿ, ಪೋಷಿಸಿ ಬೆಳೆಸಿದ್ದಾರೆ. ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಹೊಯ್ಸಳರು, ನೊಳಂಬರು, ಸೇವುಣರು, ಉಚ್ಚಂಗಿಪಾಂಡ್ಯರು, ವಿಜಯನಗರದ ಅರಸರು, ಪಾಳೆಯಗಾರರ, ಆಳ್ವಿಕೆಗೆ ಒಳಪಟ್ಟಿದ ಈ ಪ್ರದೇಶ ಕರ್ನಾಟಕ ಇತಿಹಾಸದೈತಿಹಾಸಿಕ ಸಾಂಸ್ಕೃತಿಕ ತಾಣವಾಗಿದೆ. ಇವರುಗಳು ಅನೇಕ

ಶಾಸನಗಳನ್ನು ಹಾಕಿಸಿದ್ದಲ್ಲದೇ ದೇವಾಲಯ, ಅರಮನೆ, ಕೋಟೆ–ಕೊತ್ತಲುಗಳು, ಕೆರೆ–ಕಟ್ಟೆಗಳು, ಮಠಗಳನ್ನು ನಿರ್ಮಿಸಿ ಇಲ್ಲಿಯ ಇತಿಹಾಸ ರಚನೆಗೆ ಪ್ರಮುಖ ಆಕರಗಳನ್ನು ಬಿಟ್ಟು ಹೋಗಿದ್ದಾರೆ. ಈ ಆಕರಗಳಿಂದ ಆಯಾಯ ಕಾಲದ ಮನೆತನಗಳ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ದಾನ, ಧರ್ಮ, ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.

ವಿಜಯನಗರದ ಅರಸರ ನಂತರ ಆಳ್ವಿಕೆಗೆ ಬಂದ ಪಾಳೆಯಗಾರರು ಸಹ ತಮ್ಮ ದೊರೆಗಳನ್ನೆ ಅನುಸರಿಸಿ ತಮ್ಮ ತಮ್ಮ ಆಡಳಿತ ಕೇಂದ್ರಗಳ (ರಾಜಧಾನಿ)ಲ್ಲಿ ಇತಿಹಾಸವನ್ನು ಸೃಷ್ಟಿಸಿದ್ದಾರೆ. ಅಂತಹವರಲ್ಲಿ ಹರಪನಹಳ್ಳಿ ಪಾಳೆಯಗಾರರೂ ಪ್ರಮುಖರಾಗಿದ್ದಾರೆ. ಇವರು ಹರಪನಹಳ್ಳಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುದೀರ್ಘವಾಗಿ (೨೩೪) ವರ್ಷಗಳ ಆಳ್ವಿಕೆಯನ್ನು ನಡೆಸಿದ್ದಾರೆ. ವಿಜಯನಗರೋತ್ತರ ಕಾಲದ ಕರ್ನಾಟಕದ ಇತಿಹಾಸವನ್ನು ಕುರಿತು ಅಧ್ಯಯನ ನಡೆಸಬೇಕಾದರೆ ಈ ಪಾಳೆಯಗಾರರು ಪ್ರಮುಖ ಶಿಲ್ಪಿಗಳಾಗಿ ನಿಲ್ಲುತ್ತಾರೆ. ಇವರುಗಳು ತಮ್ಮ ತಮ್ಮ ಇತಿಮಿತಿಯಲ್ಲೇ ಪ್ರಮುಖ ಕೊಡುಗೆಗಳನ್ನು ನೀಡಿದ್ದಾರೆ. ಇದನ್ನು ನಾವು ತಿಳಿಯಬೇಕಾದರೆ ಅವರ ಬಗೆಗಿನ ಅಧ್ಯಯನ, ಸಂಶೋಧನೆ ಕೈಗೊಳ್ಳಬೇಕು. ಅಂತಹದೊಂದು ಚಿಕ್ಕ ಪ್ರಯತ್ನವೇ ನನ್ನ ಪಿಹೆಚ್.ಡಿ.ಯ ಅಧ್ಯಯನವಾಗಿದೆ ಹಾಗೂ ಸಂಶೋಧನಾ ಮಾಧ್ಯಮವಾಗಿದೆ ಎಂದು ಹೇಳಬಹುದು. ಈ ಅಧ್ಯಯನದ ಸಾರವನ್ನು ಅಧ್ಯಯನದಲ್ಲಿ ಕಂಡುಕೊಂಡ ವೈಶಿಷ್ಟ್ಯಗಳನ್ನು ಮತ್ತು ಫಲಿತಗಳನ್ನು ಈ ಕೆಳಗಿನಂತೆ ಗಮನಿಸಬಹುದು.

**ಫಲಿತಗಳು**

೧. ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ನಿರ್ಧರಿಸಲಾಗಿದ್ದು ಈ ಮೂಲಕ ಪ್ರಸ್ತುತ ಅಧ್ಯಯನದ ಒಟ್ಟು ಆಶಯವನ್ನು ಸೂಚಿಸಲಾಗಿದೆ. ಕರ್ನಾಟಕದ ಮಧ್ಯಭಾಗದಲ್ಲಿರುವ ಹರಪನಹಳ್ಳಿ ಪ್ರದೇಶವನ್ನು ಮತ್ತು ಇಲ್ಲಿ ಆಡಳಿತ ನಡೆಸಿದ ಪಾಳೆಯಗಾರರ ಕುರಿತಾಗಿ ಸಣ್ಣಮಟ್ಟ ಅಧ್ಯಯನಗಳು ನಡೆದಿವೆ. ಬಿಡಿ ಲೇಖನಗಳು ರಚನೆಯಾಗಿವೆ ಹಾಗೂ ವಿಚಾರ ಸಂಕಿರಣಗಳಲ್ಲಿ ಪ್ರಬಂಧಗಳು ಮಂಡನೆಯಾಗಿವೆ. ಕೆಲವು ಪ್ರಬಂಧಗಳು ಪ್ರಕಟವೂ ಆಗಿವೆ. ಆದರೆ ಹರಪನಹಳ್ಳಿ ಪಾಳೆಯಗಾರರ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಕುರಿತಾದ ಅಧ್ಯಯನ ಸಮಗ್ರವಾಗಿಲ್ಲ ಎಂಬ ಕೊರತೆಯನ್ನು ಅನುಲಕ್ಷಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಯಿತು. ಆ ಮೂಲಕ ಸಾಂಸ್ಕೃತಿಕ ಕ್ಷೇತ್ರದ ಕೆಲವು ಅಂಶಗಳಾದ ಶಾಸನಗಳು, ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ಸಾಹಿತ್ಯ, ಶಿಕ್ಷಣ, ಧರ್ಮ, ರಾಜಕೀಯ, ಆರ್ಥಿಕ, ವ್ಯಾಪಾರ–ವಾಣಿಜ್ಯ ಮುಂತಾದ ಅಂಶಗಳನ್ನು ಕುರಿತಾಗಿ ಇಲ್ಲಿ ಅಧ್ಯಯನ ನಡೆಸಲಾಯಿತು. ಪ್ರಸ್ತುತ ಅಧ್ಯಯನದ ಮೂಲಕ ಹರಪನಹಳ್ಳಿ ಪಾಳೆಯಗಾರರ ಸಾಂಸ್ಕೃತಿಕ ಕೊಡುಗೆಗಳನ್ನು ಗುರುತಿಸಿ ಅವುಗಳ ಮಹತ್ವವನ್ನು ಬಿಂಬಿಸಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಮತ್ತಷ್ಟು ತಿಳಿಗೊಳಿಸುವ

ಉದ್ದೇಶವನ್ನು ಹೊಂದಲಾಗಿತ್ತು. ಅಧ್ಯಯನದ ನಂತರ ಬಹುಮಟ್ಟಿಗೆ ಈ ಉದ್ದೇಶವನ್ನು ಈಡೇರಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಹರಪನಹಳ್ಳಿ ಪಾಳೆಯಗಾರರ ಐತಿಹಾಸಿಕ ಮತ್ತು ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿರುವುದರಿಂದ ಅದರ ಪ್ರತೀಕಗಳಾಗಿರುವ ಶಾಸನಗಳು, ದೇವಾಲಯಗಳು, ಅರಮನೆ ಕಟ್ಟಡಗಳು, ಮಠಗಳು, ಕೋಟೆ–ಕೊತ್ತಲಗಳು, ಹೊಂಡ–ಪುಷ್ಕರಣಿಗಳು, ಕೆರೆ–ಕಟ್ಟೆಗಳು, ಸಾಹಿತ್ಯ, ವ್ಯಾಪಾರ ಮತ್ತಿತರ ವಿಷಯಗಳನ್ನು ಕುರಿತು ಅನುಲಕ್ಷಿಸಲಾಗಿದೆ. ಆದರೆ ಇವುಗಳಲ್ಲಿ ಅನೇಕ ಸ್ಮಾರಕಗಳು ಹಾಳಾಗಿವೆ. ಕೆಲವು ಅಳಿವಿನ ಅಂಚಿನಲ್ಲಿವೆ. ಮತ್ತೆ ಕೆಲವು ರೂಪಾಂತರಗೊಂಡಿರುವುದರಿಂದ ಅವುಗಳ ಬಗೆಗಿನ ಮಾಹಿತಿ ಸಾಕಷ್ಟು ಲಭ್ಯವಾಗಲಿಲ್ಲ. ಉಳಿದಂತೆ ನಿರೀಕ್ಷಿತ ಉದ್ದೇಶವನ್ನು ಸಾಧಿಸಲಾಗಿದೆ. ಆದರೆ ಇವುಗಳ ಅಧ್ಯಯನ ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಅಪೇಕ್ಷಿಸಿದ್ದರಿಂದ ವಿಸ್ತೃತವಾದ ಕ್ಷೇತ್ರಕಾರ್ಯ ಮತ್ತು ವ್ಯವಸ್ಥಿತ ಮಾಹಿತಿ ಸಂಗ್ರಹದ ಅಧ್ಯಯನದ ಕ್ರಮವನ್ನು ಯೋಜಿಸಿಕೊಂಡಂತೆ ನಡೆಸಲಾಗಿದೆ. ಹೀಗೆ ಅಧ್ಯಯನದ ಮೊದಲ ಅಧ್ಯಾಯದಲ್ಲಿ ವ್ಯಕ್ತವಾದ ಒಟ್ಟು ಆಶಯಕ್ಕೆ ತಕ್ಕಂತೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ನಿರೀಕ್ಷಿತ ಫಲವನ್ನು ಪಡೆಯಲಾಗಿದೆ.

೨. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಹರಪನಹಳ್ಳಿ ಪ್ರದೇಶದ ಭೌಗೋಳಿಕ ವೈಶಿಷ್ಟ್ಯ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಅವಲೋಕಿಸಲಾಗಿದೆ. ಯಾವುದೇ ದೇಶದ ಜನಾಂಗದ ನಾಗರೀಕತೆಗಳ ಜೀವನ ಸಂಸ್ಕೃತಿ ರೂಪುಗೊಳ್ಳುವಲ್ಲಿ ಅಲ್ಲಿನ ಭೌಗೋಳಿಕ ಪರಿಸರದ ಪ್ರಭಾವ ದಟ್ಟವಾಗಿರುವುದನ್ನು ಗುರುತಿಸಬಹುದು. ಹಾಗಾಗಿ ಯಾವುದೇ ಸಾಂಸ್ಕೃತಿಕ ಅಂಶಗಳ ಅಧ್ಯಯನಕ್ಕೆ ಅಲ್ಲಿನ ಭೌಗೋಳಿಕ ಲಕ್ಷಣಗಳನ್ನು ಅವಲೋಕಿಸುವುದು ಅಧ್ಯಯನದ ದೃಷ್ಟಿಯಿಂದ ಅವಶ್ಯಕವಾದ ಅಂಶವಾಗಿದೆ. ಹರಪನಹಳ್ಳಿ ಪ್ರದೇಶವು ಇದಕ್ಕೆ ಹೊರತಾಗಿಲ್ಲ. ಇಲ್ಲಿನ ಬೆಟ್ಟ–ಗುಡ್ಡಗಳ ಸಾಲು, ಜಲಸಂಪತ್ತು, ಸಸ್ಯಸಂಪತ್ತು, ಖನಿಜ ಸಂಪತ್ತು ಮುಂತಾದ ಭೌಗೋಳಿಕ ಸಂಪತ್ತುಗಳು ಇಲ್ಲಿನ ಚರಿತ್ರೆಯನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಹಿಸಿರುವುದನ್ನು ಗಮನಿಸಬಹುದಾಗಿದೆ. ವಿರಳ ಮಳೆಯಿಂದ ಕೂಡಿರುವ ಈ ಪ್ರದೇಶ ಬಹುಮುಖಿ ಜೀವನ ಸಂಸ್ಕೃತಿಗೆ ಬಹು ಪ್ರಾಚೀನ ಕಾಲದಿಂದಲೂ ತಾಣವಾಗಿರುವುದು ಮಹತ್ವದ ಸಂಗತಿಯಾಗಿದೆ.

ಸಾಮಾನ್ಯವಾಗಿ ನೀರಿನ ಸೌಲಭ್ಯಗಳ ಪ್ರದೇಶಗಳಲ್ಲಿಯೇ ಪ್ರಾಚೀನ ನಾಗರೀಕತೆಗಳು ಬೆಳೆದು ಬಂದಿರಿವುದನ್ನು ಇತಿಹಾಸದುದ್ದಕ್ಕೂ ಕಾಣುತ್ತಾ ಬಂದಿದ್ದೇವೆ. ಆದರೆ ಇದಕ್ಕೆ ವ್ಯತಿರಿಕ್ತವಾದ ಸನ್ನಿವೇಶ ಹರಪನಹಳ್ಳಿ ಪರಿಸರ ಇದೆಯಾದರೂ ಪ್ರಾಚೀನ ಕಾಲದಿಂದಲೂ ಇಲ್ಲಿನ ಮಾನವ ಕೃತಕವಾಗಿ ನೀರನ್ನು ಸಂಗ್ರಹಿಸುವ ವಿಧಾನಗಳನ್ನು ಕಂಡುಕೊಂಡಿದ್ದಾನೆಂದು

ಪ್ರಾಗೈತಿಹಾಸಿಕ ಕಾಲದ ಕುಂಟೆಗಳು ಹಾಗೂ ಇತಿಹಾಸ ಕಾಲದ ಕೆರೆ–ಕಟ್ಟೆಗಳು ಸಾಕ್ಷಿಯಾಗಿವೆ. ಪಾಳೆಯಗಾರರ ಕಾಲದಲ್ಲೂ ಇವು ಮುಂದುವರೆದಿದ್ದು ವ್ಯವಸ್ಥಿತ ರೂಪ ಪಡೆದುಕೊಂಡಿದ್ದನ್ನು ಇಲ್ಲಿ ದೊರಕಿದ ಕೆರೆ, ಬಾವಿ, ಪುಷ್ಕರಣಿ ಹಾಗೂ ಹೊಂಡಗಳ ಮೂಲಕ ಗುರುತಿಸಬಹುದಾಗಿದೆ. ಏಕೆಂದರೆ ಈ ಪ್ರದೇಶದ ನೀರಾವರಿಗೆ ಈ ಸಂಗ್ರಹಾಕಗಳೇ ಜೀವಾಳವಾಗಿದ್ದವು.

ಹರಪನಹಳ್ಳಿ ಪ್ರದೇಶದ / ಪರಿಸರದ ಪ್ರಾಗೈತಿಹಾಸಿಕ ಕಾಲದ ಸಂಸ್ಕೃತಿಯನ್ನು ಕುರಿತು ಇಲ್ಲಿ ಅವಲೋಕಿಸಲಾಗಿದೆ. ಈವರೆಗೆ ನಡೆದ ಸಂಶೋಧನೆಗಳಿಂದ ಈ ಪ್ರದೇಶದಲ್ಲಿ ಹಳೆಶಿಲಾಯುಗ, ಮಧ್ಯಶಿಲಾಯುಗ, ನೂತನಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗ, ಆದಿಶಿಲಾಯುಗ, ಆದಿಚಾರಿತ್ರಿಕಯುಗದ ಸಂಸ್ಕೃತಿಗಳು ಬೆಳೆದು ಬಂದಿರುವುದನ್ನು ಗುರುತಿಸಲಾಗಿದೆ. ಈ ಎಲ್ಲಾ ಸಾಂಸ್ಕೃತಿಕ ಕಾಲಘಟ್ಟಗಳ ಸುಮಾರು ೫೦ಕ್ಕೂ ಹೆಚ್ಚಿನ ಪುರಾತತ್ವ ನೆಲೆಗಳು ಈ ಪರಿಸರದಲ್ಲಿ ಪತ್ತೆಯಾಗಿರುವುದು ಪ್ರಾಚ್ಯ ಸಂಸ್ಕೃತಿಯು ಇಲ್ಲಿ ವಿಸ್ತೃತವಾಗಿ ಬೆಳೆದಿರುವುದಕ್ಕೆ ಸಾಕ್ಷಿಯಾಗಿದೆ.

ಚಾರಿತ್ರಿಕ ಕಾಲಘಟ್ಟಗಳಲ್ಲಿ ಮೌರ್ಯರಿಂದ ಹಿಡಿದು ಪ್ರಸ್ತುತ ಕಾಲದವರೆಗಿನ ಜೀವನ ಸಂಸ್ಕೃತಿಯ ನಿರಂತರತೆ ಇರುವುದನ್ನು ಗುರುತಿಸಲಾಗಿದೆ. ಅದರಲ್ಲೂ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಪಾಳೆಯಗಾರರ ಕಾಲದವರೆಗಿನ ಚರಿತ್ರೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ. ಅಶೋಕನ ಶಾಸನಗಳನ್ನು ಬೌದ್ಧಧರ್ಮದ ನೆಲೆಗಳನ್ನು ಹೊಂದಿರುವ ಈ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರಮುಖ ಭಾಗವಾಗಿತ್ತು. ನಂತರದಲ್ಲಿ ಶಾತವಾಹನ, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳ ಹಾಗೂ ಸೇವುಣರ ಆಳ್ವಿಕೆಯ ಕಾಲಾವಧಿಯಲ್ಲಿ ಅವರುಗಳ ಪ್ರಭುತ್ವವನ್ನು ಹೊಂದಿ ಆಯಾಯ ರಾಜಕೀಯ ಶಕ್ತಿಗಳ ಸಾಂಸ್ಕೃತಿಕ ಮತ್ತು ರಾಜಕೀಯ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸುತ್ತಾ ಬಂದಿವೆ. ಇವರುಗಳ ಕಾಲದ ಅನೇಕ ಶಾಸನಗಳು, ಸ್ಮಾರಕಗಳು ದೊರಕಿದ್ದು ಹೇಗೆ ಆ ಕಾಲದಲ್ಲಿ ಒಂದು ಸಮೃದ್ಧ ಐತಿಹಾಸಿಕ, ರಾಜಕೀಯ ಶಕ್ತಿಯಾಗಿ ಹೊರಹೊಮ್ಮಿತು ಎಂಬುದನ್ನು ಕಂಡುಕೊಳ್ಳಲಾಗಿದೆ. ನಂತರದಲ್ಲಿ ರಾಜ್ಯದ ಶ್ರೇಷ್ಠ ಹಾಗೂ ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಿದ ಪ್ರಸಿದ್ಧ ಮನೆತನವಾದ ವಿಜಯನಗರದ ಅರಸರು ದಕ್ಷಿಣ ಭಾರತದ ಚರಿತ್ರೆಯಲ್ಲೇ ನೂತನ ದಾಖಲೆಯನ್ನು ಬರೆಯಿತು. ಬಹುಮಟ್ಟಿಗೆ ದಕ್ಷಿಣ ಭಾರತದ ಪ್ರದೇಶಗಳು ಅವರ ಸಾರ್ವಭೌಮತ್ವಕ್ಕೆ ಒಳಗೊಂಡಿದ್ದವೆಂದೇ ಹೇಳಬಹುದು. ಹರಪನಹಳ್ಳಿ ಪಾಳೆಯಗಾರರ ಪ್ರದೇಶವೂ ಸಹ ಇವರ ಆಡಳಿತದ ಪ್ರಮುಖ ಭಾಗವಾಗಿತ್ತು. ಈ ಕಾಲಘಟ್ಟದಲ್ಲಿ ವಿಜಯನಗರ ಸಾಮ್ರಾಟರಿಗೆ ನಿಷ್ಠರಾಗಿ ವಿಧೇಯರಾಗಿ, ಅಧೀನ ಸಾಮಂತ ಅಧಿಕಾರಿಗಳಾಗಿ ಅನೇಕ ಪಾಳೆಯಪಟ್ಟುಗಳು ಏಳಿಗೆಗೆ ಬಂದಿದ್ದು ಮಹತ್ವದ ಸಂಗತಿ. ಇವುಗಳಲ್ಲಿ ಹರಪನಹಳ್ಳಿ

ಪಾಳೆಯಪಟ್ಟು ಒಂದಾಗಿದ್ದು ವಿಜಯನಗರೋತ್ತರ ಕಾಲದ ರಾಜ್ಯದ ಇತಿಹಾಸಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿವೆ.

ಹರಪನಹಳ್ಳಿ ಪಾಳೆಯಗಾರರ ಚರಿತ್ರೆಯನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ. ಮೂಲತಃ ಬೇಡ ಜನಾಂಗದವರಾದ ಇವರು ಕ್ರಿ.ಶ.೧೬ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿ ಹರಪನಹಳ್ಳಿ ಪಾಳೆಯಗಾರರೆಂದೇ ಹೆಸರಾಗಿದ್ದಾರೆ. ಕ್ರಿ.ಶ.೧೫೬೬-೧೮೦೦ ರ ಕಾಲಾವಧಿಯಲ್ಲಿ ಈ ಪಾಳೆಯಗಾರರು ಆಳ್ವಿಕೆ ನಡೆಸಿದ್ದು ಇಲ್ಲಿಯ ಸಾಂಸ್ಕೃತಿಕ ಇತಿಹಾಸದಲ್ಲಿ ವೈವಿಧ್ಯತೆಯನ್ನು ಕಾಪಾಡಿಕೊಂಡು ಬರುತ್ತಾ ಕರ್ನಾಟಕದ ಪರಂಪರೆಯನ್ನು ಎತ್ತಿ ಹಿಡಿದರಲ್ಲದೇ ರಾಜಕೀಯ ಕ್ಷೇತ್ರದಲ್ಲೂ ತಮ್ಮನ್ನು ಗುರುತಿಕೊಂಡಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಹರಪನಹಳ್ಳಿ ಪಾಳೆಯಪಟ್ಟನ್ನು ಕಟ್ಟಿದ ಮೂಲಪುರುಷ ದಾದೇನಾಯಕ. ಇವನು ಬೇಡರ ಮಾಚೀನಾಯಕನ ಹಿರಿಯ ಮಗ. ದಾದೇನಾಯಕ ಕಣ್ಣಪ್ಪನ ಕುಲಕ್ಕೆ ಮತ್ತು ಕುಮ್ಮಟದುರ್ಗದ ಗಂಡುಗಲಿ ಕುಮಾರರಾಮನ ಪುವ್ವಲ ವಂಶಕ್ಕೆ ಸೇರಿದವನಾಗಿದ್ದು ಬೇಟೆಯನ್ನು ತನ್ನ ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದನು. ಇವನು ಚಿತ್ರದುರ್ಗದ ನಾಯಕರೊಂದಿಗೂ ವೈವಾಹಿಕ ಸಂಬಂಧ ಹೊಂದಿದ್ದನು. ರಾಯಚೂರು ಬಳಿಯ ಶ್ರೀಚಂದ್ರಕಲಾಪರಮೇಶ್ವರಿಯ ಆಶೀರ್ವಾದ ಪಡೆದು ಕ್ರಿ.ಶ.೧೫೫೮ರಲ್ಲಿ ಹರಪನಹಳ್ಳಿ ಪಾಳೆಯವನ್ನು ಸ್ಥಾಪಿಸಿ ಕ್ರಿ.ಶ.೧೫೬೫ರಲ್ಲಿ ಕೋಟೆ ಕಟ್ಟಿಸಿ ಸಿಂಹಾಸನರೂಢನಾದನು. ಆದರೆ ಹೊನ್ನನಾಗತಿಯ ಮರಣದಿಂದ ಇವರೀರ್ವರ ನಡುವೆ ವೈರುಧ್ಯಗಳು ಬೆಳೆದು ಮುಂದಿನ ಯುದ್ಧಗಳಿಗೆ ಕಾರಣವಾದವು.

ದಾದಯ್ಯನಾಯಕನ ನಂತರ ರಂಗಣ್ಣನಾಯಕ ಅಧಿಕಾರಕ್ಕೆ ಬಂದನು. ಇವನು ಜರಿಮಲೆ ಪಾಳೆಯಗಾರರ ಮಗಳಾದ ಚಂಪನಾಗತಿಯನ್ನು ವಿವಾಹವಾಗಿ ಅವರೊಂದಿಗೆ ಉತ್ತಮ ಸಂಬಂಧವಿರಿಸಿಕೊಂಡಿದ್ದನು. ಅನೇಕ ಕೆರೆ-ಕಾಲುವೆ, ದೇವಾಲಯಗಳನ್ನು ನಿರ್ಮಿಸಿದ್ದಾನೆ. ನಂತರ ಭರಮಣ್ಣನಾಯಕ ಮುದ್ದಾನಾಯಕನೆಂಬ ಹೆಸರಿನೊಂದಿಗೆ ಅಧಿಕಾರಕ್ಕೆ ಬಂದು ಅಳ್ವಿಕೆ ನಡೆಸಿದನು. ತುಂಬಾ ಪರಾಕ್ರಮಿಯಾಗಿದ್ದರಿಂದ ಹೀಗಾಗಲೇ ಇದ್ದ ವಿಶಾಲವಾದ ರಾಜ್ಯವನ್ನು ರಕ್ಷಿಸಿಕೊಂಡು ಹೋಗುವುದರಲ್ಲೇ ಕಾಲ ಕಳೆಯಬೇಕಾಯಿತು. ವಿದ್ಯಾವಂತನಲ್ಲದಿದ್ದರೂ ತುಂಬಾ ಚುರುಕು ಬುದ್ಧಿಯುಳ್ಳವನಾಗಿದ್ದರಿಂದ ಎಲ್ಲರನ್ನು ಗೌರವಿಸುತ್ತಾ ಅಪಾರ ವಿಶ್ವಾಸ ಗಳಿಸಿದ್ದನು. ನಂತರ ಮಗ ಓಬಣ್ಣನಾಯಕ ಅಧಿಕಾರಕ್ಕೆ ಬಂದರೂ ಅಪ್ರಾಪ್ತ ವಯಸ್ಕನಾದ್ದರಿಂದ ತಂದೆಯ ಮರಣದ ಎರಡು ವರ್ಷಗಳ ನಂತರ ಅಧಿಕಾರಕ್ಕೆ ಬಂದನೆಂಬುದು ತಿಳಿದು ಬಂದಿದೆ.

ಈತನ ಹೆಸರಿನಲ್ಲಿನ ಓಬಾಳಪುರವೆಂಬ ಅನೇಕ ಗ್ರಾಮಗಳು ಕಂಡು ಬರುತ್ತವೆ. ಓಬಣ್ಣನಾಯಕನಿಗೆ ಪುತ್ರ ಸಂತಾನವಿಲ್ಲದಿದ್ದರಿಂದ ತಮ್ಮ ವೀರಮುಮ್ಮಡಿನಾಯಕ ಬಸವಂತಪ್ಪನಾಯಕನೆಂಬ ಹೆಸರಿನೊಂದಿಗೆ ಅಧಿಕಾರಕ್ಕೆ ಬಂದನು. ಸೈನ್ಯ ಸಂಘಟನೆಗೆ ಹೆಚ್ಚು ಮಹತ್ವ ನೀಡಿದ ಇವನು ಸೈನಿಕರಿಗೆ ಉತ್ತಮ ತರಬೇತಿ ಕೊಡಿಸುವುದರ ಜೊತೆಗೆ ಪಳಗಿದ

ಕುದುರೆಗಳನ್ನು ತರಿಸಿಕೊಂಡು ಸೈನ್ಯವನ್ನು ಬಲಗೊಳಿಸಿದನು. ಇವನಿಗೂ ಪುತ್ರ ಸಂತಾನವಿಲ್ಲದ ಕಾರಣ ದಾದೇನಾಯಕನ ವಂಶ ಇವನೊಂದಿಗೆ ಕೊನೆಗೊಂಡಿತು. ವೀರಮುಮ್ಮಡಿನಾಯಕನಿಗೆ ಪುತ್ರ ಸಂತಾನವಿಲ್ಲದಿದ್ದರಿಂದ ಓಬಣ್ಣನಾಯಕನ ಮೊಮ್ಮಗ ಮುಮ್ಮಡಿನಾಯಕ ಅಧಿಕಾರಕ್ಕೆ ಬರುವಾಗ ಸ್ವಲ್ಪ ಸ್ಪರ್ಧೆಯುಂಟಾಯಿತು. ಇವನೂ ಕೂಡ ಸೈನ್ಯದ ಬಲವರ್ಧನೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಹರಪನಹಳ್ಳಿ ಸೀಮೆಯನ್ನು ವಿಸ್ತರಿಸಿದನು. ಕುಮಾರರಾಮನ ಅಜ್ಜನ ಹೆಸರು ಮುಮ್ಮಡಿಸಿಂಗನಾದದರಿಂದ ಹರಪನಹಳ್ಳಿ ಪಾಳೆಯಗಾರರನ್ನು ಕುಮಾರರಾಮನ ವಂಶಸ್ಥರೆಂದು ಹೇಳಲಾಗಿದೆ. ಏಕೆಂದರೆ 'ಮುಮ್ಮಡಿ' ಎಂಬ ಹೆಸರು ಅನೇಕ ದೊರೆಗಳ ಹೆಸರಿನೊಂದಿಗೆ ಸೇರಿದೆ.

ಮುಮ್ಮಡಿನಾಯಕನಿಗೂ ಪುತ್ರ ಸಂತಾನವಿಲ್ಲದಿದ್ದರಿಂದ ಇವನ ಕೊನೆಯ ತಮ್ಮ ಒಂದನೆಯ ಬಸವಂತನಾಯಕ ಪಟ್ಟಕ್ಕೆ ಬಂದನು. ಇವನಿಗೆ ಶ್ರೀಕರ ಬಸಪ್ಪನಾಯಕ, ಇಕ್ಕಡಿ ಬಸಪ್ಪನಾಯಕ, ಕೊಟ್ರಬಸಪ್ಪನಾಯಕನೆಂತಲೂ ಕರೆಯಲಾಗಿದೆ. ಗಂಗಾಧರಸ್ವಾಮಿ ಒಡೆಯರು ಇವನಿಗೆ ಲಿಂಗದೀಕ್ಷೆ ನೀಡಿ 'ಕೊಟ್ರಬಸಪ್ಪನಾಯಕ'ನೆಂದು ಹೆಸರಿಟ್ಟರಂತೆ. ಇದರಿಂದ ಹರಪನಹಳ್ಳಿ ಪಾಳೆಯಗಾರರು ವೀರಶೈವರಾಗಿರಬೇಕೆಂದು ಕೆಲವು ವಿದ್ವಾಂಸರ ವಾದವಾಗಿದೆ. ದೇವಾಲಯಗಳಿಗೆ ಅನೇಕ ದಾದದತ್ತಿಗಳನ್ನು ನೀಡಿದ್ದಾನೆ. ಮಹಾಪರಿವರ್ತನೆಯ ಹರಿಕಾರನೆಂದೂ ಕರೆಯಬಹುದು. ಇವನಾ ನಂತರ ಮರಿಕೊಟ್ರಪ್ಪನಾಯಕ ಆಡಳಿತದಲ್ಲಿ ಆಸಕ್ತಿ ಕಳೆದುಕೊಂಡು ಜೂಜು ಹಾಗೂ ಸ್ತ್ರೀ ವ್ಯಾಮೋಹಗಳಿಗೆ ಒಳಗಾಗಿ ಪ್ರಜೆಗಳ ಹಿತರಕ್ಷಣೆಯನ್ನು ಮರೆತನು. ಈ ಸಂದರ್ಭದಲ್ಲಿ ಚಿತ್ರದುರ್ಗದ ಭರಮಣ್ಣನಾಯಕ ತನ್ನ ಗೂಢಾಚಾರರನ್ನು ಕಳುಹಿಸಿ ಹರಪನಹಳ್ಳಿಯಲ್ಲಿ ಇಲ್ಲದೇ ಇರುವುದನ್ನು ತಿಳಿದುಕೊಂಡು ಅಪಾರ ಸೈನ್ಯದೊಂದಿಗೆ ಹರಪನಹಳ್ಳಿ ಪಟ್ಟಣವನ್ನು ಮುತ್ತಿ ವಶಪಡಿಸಿಕೊಂಡನು. ಇದರಿಂದ ಅಪಾರ ನಷ್ಟವುಂಟಾಯಿತು. ಇವನ ನಂತರ ಮಗ ೩ನೆಯ ಬಸವಂತನಾಯಕ ಅಧಿಕಾರಕ್ಕೆ ಬಂದನು. ಇವನು ಅಶೋಕ ಮಹಾಶಯನಂತೆ ದಯಾಶೀಲನಾಗಿದ್ದು ಸಾಲು ಮರಗಳನ್ನು ನೆಡುವುದು, ಅರವಟ್ಟಿಗೆಗಳ ನಿರ್ಮಾಣ, ಕೆರೆ, ಕಟ್ಟೆ, ಕಾಲುವೆ, ಬಾವಿಗಳ ನಿರ್ಮಾಣ ಮುಂತಾದ ಸಾರ್ವಜನಿಕ ಉಪಯೋಗ ಕಾರ್ಯಗಳನ್ನು ಮಾಡಿದನು.

ತನ್ನ ಪತಿ ೨ನೆಯ ಬಸವಂತನಾಯಕನ ಅಕಾಲ ಮರಣದಿಂದ ಬಾಗಳಿ ಹರಿಯಮ್ಮಾಜಿ ಅಧಿಕಾರಕ್ಕೆ ಬಂದಳು. ಇವಳು ಕೆಲವು ಶಾಸನಗಳನ್ನು ಹಾಕಿಸಿ ತನ್ನ ಶಾಸನಗಳಲ್ಲಿ 'ಬಾಗಳಿಹರಿಯಮ್ಮಾಜಿ' ಎಂದು ಕರೆದುಕೊಂಡಿದ್ದಾಳೆ. ವಿಜಯನಗರದ ರಾಮದೇವ ಮಹಾಶಯರಾಯರು 'ರಾಣಿ' ಎಂದು ಮಾನ್ಯ ಮಾಡಿದ್ದಾರೆ. ಉತ್ತಮ ಆಡಳಿತಗಾರಳೂ ಶೂರಳೂ ಆಗಿದ್ದು ಸೈನ್ಯದಲ್ಲಿ ಶಿಸ್ತುನ್ನುಂಟು ಮಾಡಿದ್ದಳು. ನೆರೆಹೊರೆಯ ಅರಸರೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿ ರಾಜ್ಯದಲ್ಲಿ ಶಾಂತಿ ಮತ್ತು ನೆಮ್ಮದಿಯನ್ನು ತಂದಿದ್ದಳು. ಉಚ್ಚಂಗಿದುರ್ಗದ ಮಾರ್ಗದಲ್ಲಿ 'ಹರೇನಹಳ್ಳಿ ಮತ್ತು ಹರಿಯಮ್ಮನಹಳ್ಳಿ' ಎಂಬ ಹಳ್ಳಿಗಳನ್ನು

ಇವಳ ಹೆಸರನಲ್ಲಿ ನಿರ್ಮಿಸಲಾಗಿದೆ. ಈಕೆಗೂ ಮಕ್ಕಳಿಲ್ಲದ ಕಾರಣ ಓಬಣ್ಣನಾಯಕನ ಸಂತತಿಯವನಾದ ಮುದಿಬಸಪ್ಪನಾಯಕನನ್ನು ದತ್ತು ತೆಗೆದುಕೊಂಡಿದ್ದಳು. ಇವನು ಹೊಳಲು ಗ್ರಾಮಕ್ಕೆ ಕುಂಚೂರು ಗ್ರಾಮದ ಬಸವ ಎಂಬುವವನನ್ನು ದಳವಾಯಿಯನ್ನಾಗಿ ನೇಮಿಸಿದ್ದನು. ಇವನೂ ಕೂಡ ಅನೇಕ ದಾನದತ್ತಿಗಳನ್ನು ನೀಡಿದನು.

ಮುದಿಬಸಪ್ಪನಾಯಕನ ನಂತರ ಹಿರಿಯ ಮಗ ಮೊದಲ ವೀರಬಸಪ್ಪನಾಯಕ ಅಧಿಕಾರಕ್ಕೆ ಬಂದನು. ಬಿದುರಹಳ್ಳಿ ಕೋಟೆ ಮುತ್ತಿಗೆ ಮತ್ತು ಚಿತ್ರದುರ್ಗದ ಹಿರೇಮದಕರಿನಾಯಕನೊಂದಿಗಿನ ಯುದ್ಧಗಳು ಇವನ ಕಾಲದ ಪ್ರಮುಖ ಘಟನೆಗಳು. ಇವನೂ ಸಹ ಅಕಾಲ ಮರಣಕ್ಕೆ ತುತ್ತಾದನು. ಇವನ ಸಮಾಧಿ ಕುರುಬರ ಕೇರಿಯಲ್ಲಿದ್ದು 'ಅರಸಿನಮಠ' ಎಂದು ಕರೆಯಲ್ಪಟ್ಟಿದೆ. ನಂತರ ಮೊದಲ ಸೋಮಶೇಖರನಾಯಕ ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಹರಪನಹಳ್ಳಿ ಮಹಾಪರಿವರ್ತನೆಯ ಸ್ಥಿತ್ಯಂತರವನ್ನು ಕಂಡಿತು. ಹಾಗಾಗಿ ಇವನ ಹೆಸರು ಹರಪನಹಳ್ಳಿ ನಾಯಕರ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದೆ. ಮಾಯಕೊಂಡ, ಹಾಲಘಟ್ಟ, ಕೂಲಹಳ್ಳಿ ಯುದ್ಧಗಳು ಇವನ ಕಾಲದ ಪ್ರಮುಖ ಘಟನೆಗಳಾಗಿವೆ. ಇವನ ಏಳಿಗೆಯನ್ನು ಸಹಿಸಿದ ಚಿತ್ರದುರ್ಗದ ನಾಯಕರು ಇವನ ವಿರುದ್ಧ ಪಿತೂರಿ ನಡೆಸಿದರು. ಆದರೆ ಅವರೆನ್ನೆಲ್ಲ ಹಿಮ್ಮೆಟ್ಟಿಸಿ ದಿಗ್ವಿಜಯವನ್ನು ಸಾಧಿಸಿದನು. ತನ್ನ ಮಗ ಪುಟ್ಟರಸನ ಅಕಾಲ ಮರಣದಿಂದ ಚೇತರಿಸಿಕೊಳ್ಳದ ಸೋಮಶೇಖರನಾಯಕ ಕ್ರಿ.ಶ.೧೭೬೬ರಲ್ಲಿ ಮರಣ ಹೊಂದಿದನು. ಆಗ ಪಟ್ಟದರಸಿ ಸೋಮಮ್ಮಾಜಿ ಪತಿಯ ಹತ್ತಿರದ ಸಂಬಂಧಿಯ ಮಗನಾದ ಅಡವಿ ಬೊಮ್ಮಣ್ಣನನ್ನು ದತ್ತು ತೆಗೆದುಕೊಂಡು 'ವೀರಬಸಪ್ಪ' ಎಂದು ಹೆಸರಿಟ್ಟಳು. ಇವನೇ ಎರಡನೆಯ ವೀರಬಸಪ್ಪ.

ಎರಡನೆಯ ವೀರಬಸಪ್ಪ ಅಸಮರ್ಥನೂ ಸುಖಲೋಲಪನೂ ಆಗಿದ್ದು ರಾಜ್ಯದ ಅಭಿವೃದ್ಧಿಯ ಕಡೆಗೆ ಗಮನ ಹರಿಸಲಿಲ್ಲ. ಜೊತೆಗೆ ಇವನು ಕೂಡ ಅಕಾಲ ಮರಣಕ್ಕೆ ತುತ್ತಾದ. ಇವನ ನಂತರ ಬಸಪ್ಪನಾಯಕ ಅಧಿಕಾರಕ್ಕೆ ಬಂದನು. ಶಾಸನಗಳು ಈತನನ್ನು ಬಾಗುಳಿ ಬಸಪ್ಪ ನಾಯಕ ಎಂದು ಉಲ್ಲೇಖಿಸುತ್ತವೆ. ಇವನಿಗೆ ಕಲಿಯುಭೋಜ ಎಂಬ ಬಿರುದು ಇತ್ತು. ಇವನ ಶೌರ್ಯವೇ ಇವನಿಗೆ ಮುಳ್ಳಾಯಿತು. ಇವನ ನಂತರ ದತ್ತುಪುತ್ರ ಎರಡನೆಯ ಸೋಮಶೇಖರನಾಯಕ ಅಧಿಕಾರಕ್ಕೆ ಬಂದನು ಆದರೆ ಅಪ್ರಾಪ್ತ ವಯಸ್ಕನಾದ್ದರಿಂದ ಅರಸೀಕೆರೆಯ ದಿವಾನ ಹಂಪರಸಪ್ಪ ರಾಜಪ್ರತಿನಿಧಿಯಾಗಿ ಕಾರ್ಯ ನಿರ್ವಹಿಸಿದನು. ಇವನ ಕಾಲದಲ್ಲಿ ಟಿಪ್ಪುವಿನ ಉಪಟಳ ಹೆಚ್ಚಾಗಿತ್ತು. ಬಸಪ್ಪನಾಯಕನನ್ನು ಸೆರೆಮನೆಯಲ್ಲಿಟ್ಟಿದ್ದಾಗ ರಾಣಿ ನೀಲಮ್ಮಾಜಿ ಆಡಳಿತ ನಡೆಸುತ್ತಿದ್ದಳು. ಆದರೆ ಬ್ರಿಟೀಷರು ಸ್ತ್ರೀ ಆಡಳಿತವನ್ನು ಒಪ್ಪದೇ ಹರಪನಹಳ್ಳಿಯನ್ನು ಸಂಪೂರ್ಣವಾಗಿ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ನೀಲಮ್ಮಾಜಿ ನೀಲಗುಂದ ಸೇರಿ ಅಲ್ಲಿಯೇ ಕೊನೆಯುಸಿರೆಳೆದಳು. ಹೀಗೆ ಹರಪನಹಳ್ಳಿ ಸಂಸ್ಥಾನ ಬ್ರಿಟೀಷ್‌ರ

ವಶವಾಗಿ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಯಿತು. ಕ್ರಿ.ಶ. ೧೮೦೦ ರಿಂದ ವಸಾಹತುಶಾಹಿ ಆಡಳಿತ ಪ್ರಭಾವ ಪರಿಣಾಮಗಳು ಇಲ್ಲಿ ಉಂಟಾದವು.

೩. ಹರಪನಹಳ್ಳಿ ಪಾಳೆಯಗಾರರ ಆಡಳಿತ ವ್ಯಾಪ್ತಿಯನ್ನು ಗುರುತಿಸಿಕೊಂಡು ವ್ಯವಸ್ಥಿತ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಕೆಲವು ದೇವಾಲಯಗಳು, ಮಠಗಳು, ಕೋಟೆಗಳು, ಕೆರೆ, ಕಾಲುವೆ, ಹೊಂಡ, ಶಾಸನಗಳು ಲಭ್ಯವಾದವು. ಇವೆಲ್ಲವುಗಳ ಸೂಕ್ಷ್ಮ ಅಧ್ಯಯನ ನಡೆಸಿ ಒಂದೆಡೆ ಮಾಹಿತಿಯನ್ನು ಕಲೆ ಹಾಕಿ ನಂತರ ಛಾಯಾ ಚಿತ್ರಗಳನ್ನು ತೆಗೆದು ಅವುಗಳ ಸಹಾಯದಿಂದ ಸಮಗ್ರ ಅಧ್ಯಯನ ನಡೆಸಲಾಯಿತು. ಈ ಅಧ್ಯಯನದಿಂದ ಇವರ ಕಾಲದ ಸ್ಮಾರಕಗಳ ವಾಸ್ತು ಲಕ್ಷಣಗಳು, ಶಾಸನಗಳ ಮಾಧ್ಯಮ ಅವುಗಳಲ್ಲಿನ ಮಹತ್ವದ ವಿಷಯ ಮುಂತಾದ ಅಂಶಗಳು ತಿಳಿದು ಬಂದವು. ಆದರೆ ಕಲಾದೃಷ್ಟಿಯಿಂದ ಅಷ್ಟೇನು ಮಹತ್ವದ ದೇವಾಲಯಗಳು, ಶಿಲ್ಪಗಳು ಹಾಗೂ ಇತರೇ ಸ್ಮಾರಕಗಳು ಕಡಿಮೆ. ಜೊತೆಗೆ ಸಿಕ್ಕಂತಹವುಗಳು ನಾಶದ ಅಂಚಿನಲ್ಲಿವೆ. ಇನ್ನೂ ಕೆಲವು ಸಂಪೂರ್ಣವಾಗಿ ಹಾಳಾಗಿ ತನ್ನ ಮೂಲರೂಪವನ್ನು ಕಳೆದುಕೊಂಡಿವೆ. ಕಂಬಳಿಗಳಿಗೆ ವಿದೇಶದಲ್ಲಿ ಬೇಡಿಕೆಯಿತ್ತೆಂದು ತಿಳಿದು ಬಂದಿದೆ. ಇವರ ಕಾಲದ ಪ್ರಮುಖ ಬೆಳೆಗಳೆಂದರೆ ಭತ್ತ, ರಾಗಿ, ಜೋಳ, ತೆಂಗು, ಅಡಿಕೆ, ಬಾಳೆ, ವೀಳ್ಯದೆಲೆ, ಹಣ್ಣು, ತರಕಾರಿ, ದ್ವಿದಳದಾನ್ಯ, ಎಣ್ಣೆಬೀಜ, ನವಣೆ, ತೊಗರಿ, ಅವರೆ, ಹೆಸರು, ಮಡಕೆಕಾಳು, ಹುರುಳಿ, ಹಲಸಂದಿ, ಕಡಲೆ, ಸಜ್ಜೆ, ಗೋಧಿ, ಹತ್ತಿ, ಕಬ್ಬು ಮುಂತಾದವು. ಹಾಗೆಯೇ ಕೃಷಿ ಆಧಾರಿತ ಕೈಗಾರಿಕೆಗಳಾದ ಎಣ್ಣೆ, ಬೆಲ್ಲ, ಸಕ್ಕರೆ ಮತ್ತು ಬಟ್ಟೆ ಕೈಗಾರಿಕೆಗಳು ಬೆಳವಣಿಗೆಯಾಗಿದ್ದವು. ಈ ಎರಡೂ ತೆರಿಗೆಗಳಿಗೆ ಬದಲಾಗಿ ಉಚಿತ ಸೇವೆಯನ್ನು ಸಲ್ಲಿಸುವ ಪದ್ಧತಿ ಇತ್ತು. ಅಂದರೆ ತೆರಿಗೆ ನೀಡಲು ಸಾಧ್ಯವಾಗದವರು ಅಷ್ಟು ಮೊತ್ತಕ್ಕೆ ಸಮನಾದ ಸೇವೆಯನ್ನು ಸಲ್ಲಿಸುವುದು. ಇದೂ ಸಹ ಪ್ರಾಚೀನ ಕಾಲದ ತೆರಿಗೆ ಪದ್ಧತಿಯ ಒಂದು ಭಾಗವಾಗಿತ್ತು. ಪ್ರಾಚೀನ ಕಾಲದ ಶಾಸನ ಮತ್ತು ಸಾಹಿತ್ಯಿಕ ಗ್ರಂಥಗಳಲ್ಲಿ ಇದನ್ನು 'ವಿಶ್ಟಿ ಅಥವಾ ವಿಸ್ತಿ' ಎಂದು ಉಲ್ಲೇಖಿಸಲ್ಪಟ್ಟಿದೆ. ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ವಿನಿಮಯ  ವಾದ ನಾಣ್ಯ ವ್ಯವಸ್ಥೆಯೂ ಇವರ ಕಾಲದಲ್ಲಿ ಬೆಳವಣಿಗೆ ಹೊಂದಿದ್ದು ಗದ್ಯಾಣ, ಸುವರ್ಣ ಅಥವಾ ಪೊನ್/ಪೊನ್ನ, ಪಣ [ಹಣ, ಕಾಣಿ, ಹೊನ್ನು, ವರಹಾ, ಪಗೋಡ] ಎಂಬ ನಾಣ್ಯಗಳನ್ನು ಚಲಾವಣೆಗೆ ತಂದಿದ್ದರು.

ಇವರ ಕಾಲದ ನ್ಯಾಯಾಡಳಿತ ವ್ಯವಸ್ಥೆಯೂ ಶಿಸ್ತು/ನ್ಯಾಯಬದ್ಧವಾಗಿದ್ದು ಬೇಡರಕಟ್ಟೆ ಮನೆ ನ್ಯಾಯ ಪಂಚಾಯಿತಿ ವ್ಯವಸ್ಥೆಯನ್ನು ಅನುಸರಿಸಿರುವುದು ಕಂಡು ಬರುತ್ತದೆ. ಇವುಗಳು ಇಂದಿನ ತಾಲ್ಲೂಕು ಮತ್ತು ಜಿಲ್ಲಾ ನ್ಯಾಯಾಲಯಗಳನ್ನು ಹೋಲುತ್ತಿದ್ದವು. ಕರ್ನಾಟಕದಲ್ಲಿರುವ ೪೯ ಬುಡಕಟ್ಟುಗಳ ಪೈಕಿ ಬೇಡರ/ನಾಯಕ ಬುಡಕಟ್ಟು ಕಟ್ಟೆ ಮನೆಗಳನ್ನು ಹೊಂದಿರುವುದು ಗಮನಾರ್ಹ. ಸಾಮಾನ್ಯವಾಗಿ ಈ ಕಟ್ಟೆ ಮನೆಗಳು ವಿಜಯನಗರೋತ್ತರ ಕಾಲದಲ್ಲಿ

ಸ್ಥಾಪನೆಯಾದ ನಾಯಕರು ಪಾಳೆಯಗಾರರಾಗಿ ಮುಂದುವರೆದಾಗ ಆನೆಗೊಂದಿ ಅರಸರ ಪ್ರೇರಣೆ ಮತ್ತು ಪ್ರೋತ್ಸಾಹಗಳಿಂದ ಕಾರ್ಯ ನಿರ್ವಹಿಸುತ್ತಿದ್ದವು. ಹಾಗೆಯೇ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲೂ ಮುಂದುವರೆದವು. ಇವರ ಕಲಾ ಸ್ಮಾರಕಗಳು ಸಹ ವಿಜಯನಗರ ಶೈಲಿಯ ಮುಂದುವರಿಕೆಯನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಬಹುದು. ಆದರೆ ಪ್ರಾದೇಶಿಕವಾಗಿ ಹರಪನಹಳ್ಳಿ ಪಾಳೆಯಗಾರರು ತಮ್ಮದೇ ಆದ ಲಕ್ಷಣಗಳನ್ನು ಹೊಂದಿದ ದೇವಾಲಯಗಳನ್ನು ನಿರ್ಮಿಸಿದರು. ಗಾತ್ರ, ವೈಭವ, ಕಲಾತ್ಮಕತೆಯಲ್ಲಿ ಚಿಕ್ಕವು ಇವುಗಳನ್ನು ನೋಡಿದಾಗ ಹರಪನಹಳ್ಳಿ ಪಾಳೆಯಗಾರರು ತಮ್ಮ ಸಮಕಾಲೀನ ಚಿತ್ರದುರ್ಗ ಮುಂತಾದ ಪಾಳೆಯಗಾರರಂತೆ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಹೆಚ್ಚಿನ ಆಸಕ್ತಿ ತೋರಿಲ್ಲವೆಂದೇ ಹೇಳಬಹುದು.

ಐತಿಹಾಸಿಕ ಹಿನ್ನೆಲೆಯಲ್ಲಿ ರಾಜಕೀಯ ಮತ್ತು ಆಡಳಿತ ವ್ಯವಸ್ಥೆಗಳು ಸರಿಯಾದ ಕ್ರಮದಲ್ಲಿರಬೇಕಾದರೆ ಸಹಜವಾಗಿ ಸಾಮಾಜಿಕ ವ್ಯವಸ್ಥೆ ಹಾಗೂ ಸಾಮಾಜಿಕ ಚಟುವಟಿಕೆಗಳು ಮುಖ್ಯವಾಗಿದ್ದು ಸಾಮಾನ್ಯವಾಗಿ ಎಲ್ಲಾ ಕಾಲಗಳಲ್ಲಿದ್ದಂತೆ ಪ್ರಭುವರ್ಗ ಮತ್ತು ಶ್ರಮಿಕವರ್ಗ ಎಂಬ ೨ ವರ್ಗಗಳಿದ್ದವು. ಪ್ರಭುವರ್ಗದಲ್ಲಿ ರಾಜ ಮತ್ತು ಅವನಿಗೆ ಸಹಾಯಕರಾಗಿ ಪುರೋಹಿತರು, ಗೌಡರು, ದಿವಾನರು, ದಳವಾಯಿಗಳು, ತಳವಾರರಿದ್ದರು. ಸಹಜವಾಗಿ ಪುರೋಹಿತರು/ಜೋಯಿಸರು ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆದಿದ್ದರು. ಕರ್ನಾಟಕದ ಅನೇಕ ಪಾಳೆಯಪಟ್ಟುಗಳು ಬ್ರಾಹ್ಮಣರು ಕರ್ನಾಟಕದ ಪ್ರದೇಶಗಳಲ್ಲಿ ನೆಲೆಗೊಳ್ಳುವಂತೆ ಮಾಡಿ ಅವರು ಷಟ್ಕರ್ಮಗಳಲ್ಲಿ ನಿರತರಾಗಿರುವಂತೆ ಸಾಕಷ್ಟು ದಾನದತ್ತಿಗಳನ್ನು ನೀಡಿ ಗೌರವಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಉಳಿದಂತೆ ನಂತರದವರು ೨ನೆಯ ಸ್ಥಾನವನ್ನು ಪಡೆದಿದ್ದರು. ಇವರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಅಚ್ಚುಕಟ್ಟಾಗಿ ಜವಾಬ್ದಾರಿಯಿಂದ ನಿರ್ವಹಿಸುತ್ತಿದ್ದರು.

ತಮ್ಮ ದೊರೆಗಳಂತೆ ಇವರು ಸಹ ಕುಡಿಯಲು ಮತ್ತು ನೀರಾವರಿಗಾಗಿ ಕೆರೆ, ಕಟ್ಟೆ, ಕಾಲುವೆ, ಬಾವಿ ಮುಂತಾದ ನೀರಿನ ಸಂಗ್ರಾಹಕಗಳನ್ನು ನಿರ್ಮಿಸಿದರು. ಈಗಲೂ ಇವುಗಳನ್ನು ಕಾಣಬಹುದು. ಆದರೆ ಅನೇಕ ಕೆರೆಗಳು ಹೂಳು ತುಂಬಿದ್ದು ನೀರಾವರಿಗೆ ಬಳಕೆಯಾಗುತ್ತಿಲ್ಲವೆಂಬುದೇ ವಿಷಾದದ ಸಂಗತಿ. ನಾಯಕನಕೆರೆ. ಅಯ್ಯನಕೆರೆ, ಶೃಂಗಾರತೋಟ, ಅಲಮರಸಿಕೆರೆ. ಸತ್ತೂರು ಕೆರೆ ಮುಂತಾದವುಗಳು ಮುಖ್ಯವಾಗಿವೆ. ಇದಕ್ಕೆ ಪೂರಕವಾದ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಕ್ಷೇತ್ರಗಳೂ ಬೆಳವಣಿಗೆ ಹೊಂದಿದ್ದವು.

ಕಲೆ, ಶಿಲ್ಪಗಳು, ಶಿಕ್ಷಣ, ಸಾಹಿತ್ಯಗಳಿಗೆ ಸಂಬಂಧಪಟ್ಟಂತೆ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ. ಇವರನ್ನು ರಕ್ಷಿಸುವ ಜನಾಂಗವಾದ ವೀರರು ತಮ್ಮ ದೊರೆಗಳಿಗಾಗಿ ಯುದ್ಧದಲ್ಲಿ ವೀರಮರಣ ಹೊಂದಿದವರ ವೀರಗಲ್ಲುಗಳು ಅತಿ ವಿರಳವಾಗಿ ದೊರೆತಿವೆ. ಹಾಗೆಯೇ ಮಠಗಳು ಶಿಕ್ಷಣದ ಪ್ರಮುಖ ಕೇಂದ್ರಗಳಾಗಿದ್ದವು. ನಾರಾಯಣಕೆರೆ, ತಂಬ್ರಹಳ್ಳಿ, ಹಿರೇಮ್ಯಾಗಳಗೆರೆ, ಉಪನಾಯಕನಹಳ್ಳಿ

ಮುಂತಾದೆಡೆಗಳಲ್ಲಿ ದೊರೆತಿವೆ. ಆದರೂ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿರಲಿಲ್ಲವೆಂದೇ ಹೇಳಬಹುದು. ಇನ್ನು ಸಾಹಿತ್ಯಕ್ಕೆ ಬಂದರೆ ದೊರೆಗಳನ್ನು ಕುರಿತಾದ ಲಾವಣಿಗಳು, ಜನಪದ ಹಾಡುಗಳು ರಚನೆಯಾಗಿರುವುದನ್ನು ಬಿಟ್ಟರೆ ಬೇರೆ ಗ್ರಂಥಗಳು ಕೆಲವೇ ಕೆಲವು. ಆದಾಗ್ಯೂ ಸಹ ಆ ಕಾಲದ ಶಿಕ್ಷಣ ಮತ್ತು ಸಾಹಿತ್ಯಕ್ಕೆ ಬೆಂಬಲವಿದ್ದುದು ಇವುಗಳಿಂದ ತಿಳಿಯುತ್ತದೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನದ ಮೂಲಕ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ಒಂದು ಕಾಲಘಟ್ಟದ ಮೇಲೆ ಬೆಳಕು ಬೀರುವ ಪ್ರಯತ್ನವನ್ನು ಮಾಡಲಾಗಿದೆ. ಈ ಪ್ರಯತ್ನ ಕರ್ನಾಟಕದ ಐತಿಹಾಸಿಕ ಪರಂಪರೆಯ ಸಾಂಸ್ಕೃತಿಕ ಇತಿಹಾಸವನ್ನು ವಿಸ್ತರಿಸುವುದೆಂಬ ಆಶಯವಿದೆ. ಆ ಹಿನ್ನೆಲೆಯಲ್ಲಿ ವಿಜಯನಗರ ಪತನಾ ನಂತರ ಪ್ರವರ್ಧಮಾನಕ್ಕೆ ಬಂದ ಇವರು ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ನಿರ್ವಹಿಸಿದ ಪಾತ್ರ ವಿಶೇಷವಾಗಿದೆ. ಚರಿತ್ರೆಯ ರೋಚಕ ಪುಟಗಳಲ್ಲಿ ಸ್ಥಾನ ಪಡೆಯಬಹುದಾದ ರಾಜಕೀಯ ಘಟನಾವಳಿಗಳಿಗೆ ಸಾಕ್ಷಿಯಾಗಿ ನಿಂತ ಈ ಪಾಳೆಯಗಾರರ ಸಂಗತಿಗಳ ಬಗ್ಗೆ ಬಹುಮಟ್ಟಿಗೆ ಅಧ್ಯಯನಗಳು ನಡೆದಿದ್ದರೂ ಸಹ ಅವರ ಸಾಂಸ್ಕೃತಿಕ ಅಧ್ಯಯನ ಕಡಿಮೆ ಎಂದೇ ಹೇಳಬಹುದು. ಹಾಗಾಗಿ ಹರಪನಹಳ್ಳಿ ಪಾಳೆಯಗಾರನ್ನು ಕುರಿತಾದ ಎಲ್ಲಾ ಅಂಶಗಳನ್ನು ವಿವೇಚಿಸಲಾಗಿದೆ. ಇದೊಂದು ಮುಂದಿನ ಸಂಶೋಧಕರುಗಳಿಗೆ ಉತ್ತಮ ಮಾರ್ಗದರ್ಶಕ ಅಥವಾ ಆಕರ ಗ್ರಂಥವಾಗಬಹುದೆಂಬುದು ನನ್ನ ನಂಬಿಕೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿಕ್ಕ ಅವಶೇಷಗಳನ್ನು ಬಿಟ್ಟರೆ ಉಳಿದಂತೆ ಇವರ ಬಗೆಗಿನ ಮೌಖಿಕ ಹೇಳಿಕೆಗಳು ಉತ್ತಮ ಅಭಿಪ್ರಾಯಗಳನ್ನು ನೀಡಲಿಲ್ಲ. ಸ್ಥಳೀಯರಿಗೆ ಇದರ ಬಗ್ಗೆ ಸರಿಯಾದ ಮಾಹಿತಿಯಿಲ್ಲವೋ, ಇಲ್ಲವೇ ದೊರೆಗಳೇ ಪ್ರಜೆಗಳನ್ನು ಸರಿಯಾಗಿ ನಡೆಸಿಕೊಂಡಿರಲಿಲ್ಲವೋ ಗೊತ್ತಿಲ್ಲ. ಅದೇನೆ ಇರಲಿ ಹರಪನಹಳ್ಳಿ ಪಾಳೆಯಗಾರ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಸಮಗ್ರ ಗ್ರಂಥ ಹೊರ ಬರಲಿದೆ ಎನ್ನುವುದೇ ನನಗೆ ಖುಷಿಯ ಸಂಗತಿಯಾಗಿದೆ.

ಒಟ್ಟಾರೆ ವಿಜಯನಗರೋತ್ತರ ಕಾಲ ಕ್ರಿ.ಶ. ೧೫೬೫ರಿಂದ ಇಂದಿನ ಸಮಕಾಲೀನ ಕಾಲದವರೆಗಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಹೆಜ್ಜೆಗಳನ್ನು ಈ ಪ್ರದೇಶದಲ್ಲಿ ಗುರುತಿಸುವ ಚಿಕ್ಕ ಪ್ರಯತ್ನವನ್ನು ಮಾಡಲಾಗಿದೆ. ವಿಜಯನಗರ ಸಾಮ್ರಾಜ್ಯದ ಸಾಂಸ್ಕೃತಿಕ ರಾಜಕೀಯ ಅಂಶಗಳು ಸ್ಥಳೀಯ ಪಾಳೆಯಗಾರರ ನಾಯಕತ್ವದಲ್ಲಿ ಕೆಲ ಪ್ರಾದೇಶಿಕ ಬದಲಾವಣೆಗಳೊಂದಿಗೆ ಸಾಗಿಬಂದಿರುವುದು ವೇದ್ಯವಾಗುತ್ತದೆ. ಪಾಳೆಯಗಾರರಿಗೆ ಪ್ರಾದೇಶಿಕ, ಆರ್ಥಿಕ, ಸಂಪನ್ಮೂಲಗಳ ಇತಿ–ಮಿತಿಗಳಿದ್ದವು. ಜೊತೆಗೆ ಈ ಕಾಲದ ಎಲ್ಲಾ ಪಾಳೆಯಪಟ್ಟುಗಳ ನಡುವೆ ಸ್ಪರ್ಧಾತ್ಮಕ ಮನೋಭಾವ ಇದ್ದಿರುವುದು ಗೊತ್ತಾಗುತ್ತದೆ. ಇದು ಆ ಕಾಲದ ಲಕ್ಷಣವಾಗಿತ್ತು. ಈ ಕಾರಣದಿಂದ ಈ ಪಾಳೆಯಗಾರರ ರಾಜಕೀಯ, ಸಾಂಸ್ಕೃತಿಕ, ಕೊಡುಗೆಗಳಿಗೆ ಮಿತಿ ಹಾಕುವಲ್ಲಿ ಈ ಸ್ಪರ್ಧೆ ಪ್ರಮುಖ ಕೆಲಸ ಮಾಡಿದೆ. ಆದಾಗ್ಯೂ ಸಹ ನಾಡಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ವಿಜಯನಗರ

ನಂತರ ಪಾಳೆಯಗಾರರ ಕಾಲದಿಂದ ವಸಾಹತುಶಾಹಿ ವ್ಯವಸ್ಥೆಯಲ್ಲಿ ಸಾಗಿ ಬಂದು ೧೯೪೭ ಮತ್ತು ೧೯೫೬ರ ದೇಶದ ಸ್ವಾತಂತ್ರ್ಯ ಮತ್ತು ನಾಡಿನ ಏಕೀಕರಣ ಮತ್ತು ಪ್ರಾದೇಶಿಕ ನಾಡು-ನುಡಿ-ಭಾಷೆ-ಸಾಹಿತ್ಯ ಸಂಸ್ಕೃತಿ ಕಡೆ ಸಾಗಿಬಂದುದನ್ನು ಈ ಚಿಕ್ಕ ಪ್ರಯತ್ನದಲ್ಲಿ ಗುರುತಿಸಲಾಗಿದೆ. ಈ ಪ್ರಕ್ರಿಯೆಯಲ್ಲಿ ಕ್ರಿ.ಶ. ೧೫೦೦ ರಿಂದ ೧೮೦೦ರವರೆಗೆ ಹರಪನಹಳ್ಳಿ ಪಾಳೆಯಗಾರರು ತಮ್ಮದೇ ಆದ ಪಾತ್ರವಹಿಸುವ ಮೂಲಕ ನಾಡಿಗೆ ನೀಡಿರುವ ಕೊಡುಗೆಗಳು ಸ್ತುತ್ಯಾರ್ಹವಾಗಿವೆ.

## ಹರಪನಹಳ್ಳಿ ಪಾಳೆಯಗಾರರ ಕಾಲದ ಕೆಲ ವೈಶಿಷ್ಟ್ಯಗಳು

ಕ್ರಿ.ಶ. ೧೫೦೦-೧೮೦೦ ಕಾಲಘಟ್ಟವನ್ನು ಪ್ರಧಾನವಾಗಿಟ್ಟುಕೊಂಡು ಹರಪನಹಳ್ಳಿ ಪಾಳೆಯಗಾರರು ಎಂಬ ಶೀರ್ಷಿಕೆಯಲ್ಲಿ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲಾಯಿತು. ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದ ಅಂಶಗಳನ್ನಾಧರಿಸಿ ಹರಪನಹಳ್ಳಿ ಪಾಳೆಯಗಾರರ ಕಾಲದ ಕೆಲ ವೈಶಿಷ್ಟ್ಯಗಳನ್ನು ಈ ಕೆಳಗಿನಂತೆ ಗುರ್ತಿಸಬಹುದಾಗಿದೆ.

- ಹರಪನಹಳ್ಳಿ ಪಾಳೆಯಗಾರರು ತಮ್ಮ ಇತಿ ಮಿತಿಗಳಲ್ಲಿಯೇ ವಿಜಯನಗರ ಸಾಮ್ರಾಜ್ಯದ ಪರಂಪರೆಯನ್ನು ಕಾಲ ಕಾಲದ ಬದಲಾವಣೆಗಳೊಂದಿಗೆ ಮುಂದುವರೆಸಿರುವುದು ಕಂಡುಬರುತ್ತದೆ.
- ಹರಪನಹಳ್ಳಿ ಪಾಳೆಯಪಟ್ಟು ಸ್ಥಾಪಕ ದಾದೇನಾಯಕ ಮತ್ತು ಚಿತ್ರದುರ್ಗ ಪಾಳೆಯಪಟ್ಟು ಸ್ಥಾಪಕ ಮತ್ತಿ ತಿಮ್ಮಣ್ಣನಾಯಕ ಈರ್ವರೂ ಆರಂಭಕಾಲದಿಂದಲೂ ಸ್ನೇಹಿತರು ಜೊತೆಗಾರರು ವಿಜಯನಗರ ಸಾಮ್ರಾಜ್ಯ ಪತನಾನಂತರ ಸ್ವತಂತ್ರ ಪಾಳೆಯ ಪಟ್ಟುಗಳನ್ನು ಸ್ಥಾಪಿಸಿ ಪರಸ್ಪರರು ಸಹಕಾರದಲ್ಲಿದರು. ವೈವಾಹಿಕ ಸಂಬಂಧಗಳೂ ಏರ್ಪಟ್ಟವು. ಆದರೆ ಕ್ರಮೇಣ ಈ ಎರಡೂ ಮನೆತನಗಳೊಂದಿಗೆ ದ್ವೇಷ, ಈರ್ಶೆ ಅಸೂಯೆಗಳು ಬಂದು ಈರ್ವರ ನಡುವೆ ಅಪಾರ ಸಂಘರ್ಷಗಳುಂಟಾಗಿ ಪರಸ್ಪರರ ಅವನತಿಗೆ ಕಾರಣವಾದವು. ಇದಕ್ಕೆ ರಾಜಕೀಯ ವೃತ್ತಿ ವೈಷಮ್ಯಗಳು, (Professional Political Jeolosy) ರಾಜಕೀಯ ಹಗೆತನ, ಜಿದ್ದಾ-ಜಿದ್ದಿ ಗುಣ ಮುಂತಾದವು ಕಾರಣಗಳು ಎಂದು ಅಂದಾಜಿಸಬಹುದು.
- ಪ್ರಾಚೀನ ಪರಂಪರೆಯಂತೆ ಹರಪನಹಳ್ಳಿ ಪಾಳೆಯಗಾರರು ಇತರ ಸಮಕಾಲೀನ ರಾಜಮನೆತನಗಳೊಂದಿಗೆ ವೈವಾಹಿಕ, ವ್ಯವಹಾರಿಕ, ರಾಜತಾಂತ್ರಿಕ, ಸಂಬಂಧಗಳನ್ನು ಮುಂದುವರೆಸಿದರು. ಕ್ಲಿಷ್ಟ ಸಂದರ್ಭಗಳಲ್ಲಿ ಕೆಳದಿ ನಾಯಕರು ಇವರಿಗೆ ಬೆಂಬಲಿಗರಾಗಿ ನಿಂತರೆಂಬುದನ್ನು ಆಧಾರಗಳಿಂದ ಗುರ್ತಿಸಬಹುದು. ಕೆಳದಿ ಅರಸರ ಸ್ನೇಹ, ವಿಶ್ವಾಸ, ಹರಪನಹಳ್ಳಿ ಪಾಳೆಯಗಾರರ ವೀರಶೈವ ಧರ್ಮಾಚರಣೆ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು. ಪ್ರಾಚೀನ ರಾಜಪರಂಪರೆಯಂತೆ ಹರಪನಹಳ್ಳಿ ಪಾಳೆಯಗಾರರ ನಾಗತಿ(ರಾಣಿ)ಯರೂ ಸಹ ರಾಜಕೀಯ ವ್ಯವಹಾರಗಳಲ್ಲಿ ಸೂಕ್ತವಾಗಿ

ಭಾಗವಹಿಸುತ್ತಿದ್ದರು. ಕ್ಲಿಷ್ಟ ಸಂದರ್ಭಗಳಲ್ಲಿ ಸಂಸ್ಥಾನದ ರಕ್ಷಣೆಗೆ ಸೂಕ್ತ ನಿರ್ಧಾರಗಳನ್ನು ಕೈಗೊಳ್ಳುತ್ತಿದ್ದರು. ಈ ಅಂಶ ರಾಜಕೀಯ ವ್ಯವಹಾರಗಳಲ್ಲಿ ಭಾಗಹಿಸುವುದು ಇವರ ಕಾಲದಲ್ಲಿಯೂ ಮುಂದುವರೆಯಿತು.

- ಪಾಳೆಯಗಾರರು ಸಂಸ್ಥಾನದ ಕೃಷಿ, ಆರ್ಥಿಕ, ಅಭಿವೃದ್ಧಿಗೆ ಪ್ರೋತ್ಸಾಹಿಸಿ ಕೆರೆ, ಬಾವಿಗಳನ್ನು ನಿರ್ಮಿಸಿದ್ದಾರೆ. ಅವು ಇಂದು ನೈಸರ್ಗಿಕ ಹಾಗೂ ಆಧುನಿಕ ನಾಗರಿಕತೆ, ಸಾರ್ವಜನಿಕರ ಐತಿಹಾಸಿಕ ಪ್ರಜ್ಞೆಯ ಕೊರತೆ ಮುಂತಾದ ಕಾರಣಗಳಿಂದಾಗಿ ಸೊರಗಿ ಹೋಗಿವೆ. ಆದರೆ ಸದಾ ಬರಗಾಲ ಪೀಡಿತ ಪ್ರದೇಶವಾಗಿರುವ ಹರಪನಹಳ್ಳಿಯ ಚಿಗಟೇರಿ ಮತ್ತು ದೇವರ ತಿಮ್ಮಲಾಪುರಗಳಲ್ಲಿ ಕಂಡುಬರುವ ಪುಷ್ಕರಣಿಗಳು ಇಂದೂ ನೀರಿನಿಂದ ತುಂಬಿವೆ ಇವುಗಳನ್ನು ಸರಿಪಡಿಸಿಕೊಂಡು ಸಹಕಾರಿ ತತ್ವದ ನೀರಾವರಿ ಮೂಲಕ ರೈತರನ್ನು ಸಮೃದ್ಧಿಗೊಳಿಸಬಹುದಾಗಿದೆ.

- ಹರಪನಹಳ್ಳಿ ಸಮೀಪದ 'ಮಾಡ್ಲಗೆರೆ' ಎಂಬ ಹಳ್ಳಿ ಹರಪನಹಳ್ಳಿ ಪಾಳೆಯಗಾರರ ಕಾಲದ ಪ್ರಸಿದ್ಧ ಲೋಹ ಕೈಗಾರಿಕಾ ಕೇಂದ್ರ, ಖಡ್ಗ ತಯಾರಿಕಾ ಸ್ಥಳವಾಗಿತ್ತು. ಈ ಖಡ್ಗಗಳನ್ನು ಇತರ ಸಂಸ್ಥಾನಗಳಿಗೂ ರಫ್ತು ಮಾಡಲಾಗುತ್ತಿತ್ತು. ನನ್ನ ಕ್ಷೇತ್ರ ಕಾರ್ಯದಲ್ಲಿ ಅನೇಕ ಕಡೆ ಇವುಗಳು ಪತ್ತೆಯಾಗಿವೆ. 'ಮಾಡ್ಲಗೆರೆ ಖಡ್ಗ' ಎಂದೇ ಪ್ರಸಿದ್ಧಿಯಾಗಿದ್ದವು. ಇಲ್ಲಿಯ ವೈಶಿಷ್ಟ್ಯ ಎಂದರೆ ಇವುಗಳನ್ನು ತಯಾರಿಸುವ ಕಮ್ಮಾರಿಕೆ ವೃತ್ತಿಯನ್ನು 'ಸಿಂಪಿ' ಜನಾಂಗದವರು ಮಾಡುತ್ತಾರೆ. ಸಿಂಪಿ ಜನಾಂಗ ಬಟ್ಟೆ ನೇಯ್ಗೆ, ಬಟ್ಟೆ ವ್ಯಾಪಾರ, ಬಟ್ಟೆ ಹೊಲಿಯುವುದು, ಕೌದಿ ತಯಾರಿಸುವುದಾಗಿದೆ. ಆದರೆ ಇಲ್ಲಿ ಇವರು ಕಮ್ಮಾರಿಕೆ ವೃತ್ತಿ ಆಯ್ಕೆಗೆ ಕಾರಣ ಪ್ರಭಾವ ಏನಿರಬಹುದು ಗೊತ್ತಾಗಿಲ್ಲ. ನನ್ನ ವಿಶ್ಲೇಷಣೆ ಪಾಳೆಯಗಾರರ ಕಾಲದಲ್ಲಿಯೂ ಪಾರಂಪರಿಕ ವೃತ್ತಿಯ ಆಯ್ಕೆ, ಬದಲಾವಣೆ ಸ್ವಾತಂತ್ರ್ಯ ಇತ್ತೆನ್ನಬಹುದು. ಈ ಮನೆತನದವರೂ ಈಗಲೂ ಇದೆ ವೃತ್ತಿಯನ್ನು ಮುಂದುವರೆಸಿದ್ದು ಕೃಷಿ ಉಪಕರಣ 'ಕುಡುಗೋಲು' ತಯಾರಿಕೆಯಲ್ಲಿ ಪ್ರಸಿದ್ಧರಾಗಿದ್ದಾರೆ. ಇವರ ಪೂರ್ವಜರಿಗೆ ಕಂಪನಿ ಸರ್ಕಾರದಿಂದ ಗೌರವ ಮಾನ್ಯತೆಗಳು ದೊರೆತಿವೆ. 'ಕುಡುಗೋಲು'ಗಳು ಸುತ್ತ ಮುತ್ತಿಲಿನ ರೈತಾಪಿ ಜನರಲ್ಲಿ ಮಾಡ್ಲಗೆರೆ ಕುಡುಗೋಲು ಎಂದೇ ಪ್ರಸಿದ್ಧಿಯಾಗಿದ್ದು ರೈತರ ಪ್ರಥಮ ಆಯ್ಕೆಯಾಗಿವೆ. ಈ ಪ್ರದೇಶದ ಕುಶಲಕರ್ಮಿಗಳ ಪ್ರಾಮುಖ್ಯತೆಗೆ ಸಾಕ್ಷಿಯಾಗಿದೆ. ಇದು ಆಧುನಿಕತೆಯ ಬದಲಾವಣೆಗೆ ಹೊಂದಿಕೊಳ್ಳುವ ಮನೋಭಾವನೆಯನ್ನು ಸಂಕೇತಿಸುತ್ತದೆ. ಇದೇ ರೀತಿ ಅಲಗಿಲವಾಡ ಅರಗಿನ ಕತ್ತಿ, ಮಕ್ಕಳ ಅಡಿಕೆ ಸಾಮಾನುಗಳ ತಯಾರಿಕೆ ಕೇಂದ್ರವಾಗಿತ್ತೆಂದು ಕ್ಷೇತ್ರಕಾರ್ಯ ಪರಿಶೀಲನೆಯಿಂದ ಗೊತ್ತಾಗುತ್ತದೆ. ಈಗಲೂ ಸಹ ಹಲವಾಗಲು ಕಲಾವಿದರು ತೊಗಲುಗೊಂಬೆ ಆಟದ ಪ್ರದರ್ಶನಕ್ಕೆ ರಾಜ್ಯಾದಾದ್ಯಂತ ಹೆಸರುವಾಸಿಯಾಗಿದ್ದಾರೆ. ಕನ್ನಡ ಸಂಸ್ಕೃತಿ ಇಲಾಖೆಗಳ ಮೂಲಕ ಪ್ರದರ್ಶನ ನೀಡುತ್ತಾರೆ. ಇದು ಪಾಳೆಯಗಾರರ ಶ್ರೇಷ್ಠ ಕೊಡುಗೆಯಾಗಿದೆ. ಸಾಂಸ್ಕೃತಿಕ ಕೊಂಡಿಯನ್ನು ಗುರ್ತಿಸಲು ಸಹಾಯಕವಾಗಿದೆ.

• ಕೃಷಿ ಉಪಕರಣ ರೋಣಗಲ್ಲು ಧಾನ್ಯಗಳನ್ನು ಬೇರ್ಪಡಿಸಲು ಉಪಯೋಗ ಪ್ರಧಾನವಾಗಿದ್ದು ಇತ್ತೀಚೆಗೆ ಆಧುನಿಕ ಟ್ರಾಕ್ಟರ್‌ಗಳು ಬರುವವರೆಗೂ ಮುಂದುವರೆದಿದೆ. ಈಗಲೂ ಕೆಲವು ಹಳ್ಳಿಗಳಲ್ಲಿ ಕಾಣಬಹುದು. ದೊಡ್ಡ ದೊಡ್ಡ ಬೀಸುವ ಕಲ್ಲು ಕಂಡು ಬರುತ್ತವೆ.

• ನನ್ನ ಕ್ಷೇತ್ರ ಕಾರ್ಯ ಕಾಲದಲ್ಲಿ ಕಂಡು ಬಂದ ಒಂದು ಆಯಕಟ್ಟಿನ ಸ್ಥಳ ಅರಸೀಕೆರೆ ಸಮೀಪದ ಯರಬಳ್ಳಿ ಗ್ರಾಮಕ್ಕೆ ಅಂಟಿಕೊಂಡಿರುವ ನರಸಪ್ಪನಬೆಟ್ಟ. ಇದು ಪ್ರಾಗೈತಿಹಾಸಿಕ ಕಾಲದಿಂದಲೂ ಇತಿಹಾಸದ ಘಟನೆಗಳಿಗೆ ಸಾಕ್ಷಿಯಾಗಿದ್ದು, ಶೈವ ವೈಷ್ಣವ–ಜೈನ ಧರ್ಮಾಚರಣೆ ಸಾಕ್ಷಿಗಳಿವೆ. ಇಲ್ಲಿಯ ನರಸಿಂಹ ದೇವರನ್ನು ಜೈನರು ಪೂಜಿಸುತ್ತಾರೆ ಎಂದು ಇಲ್ಲಿಯ ಪೂಜಾರಿ ಹೇಳುತ್ತಾರೆ. ಇದೊಂದು ವಿಶಿಷ್ಟ ಸಂಗತಿಯಾಗಿದೆ.

• ನರಸಪ್ಪನ ಬೆಟ್ಟ ಹರಪನಹಳ್ಳಿ ಪಾಳೆಯಗಾರರ ಸೈನಿಕ ಕೇಂದ್ರ ಆಗಿತ್ತು ಬೆಟ್ಟದ ನೆತ್ತಿಯ ಮೇಲೆ ಪಾಳೆಯಗಾರರು ಕೋಟೆ ಕಟ್ಟಿಸಿದ್ದರು. ವೀಕ್ಷಣಾ ಗೋಪುರಗಳೂ ಇವೆ. ಇಂದು ಅವೆಲ್ಲವು ಅಳಿದು ಹೋಗಿದ್ದು ಇಲ್ಲಿಯ ಪರಿಸರ ಅವಲೋಕಿಸಿದರೆ ಪಾಳೆಯಗಾರರ ಕಾಲದ ನಾಣ್ಯಗಳನ್ನು ತಯಾರಿಸುವ ಟಂಕಶಾಲೆ ಇದಾಗಿತ್ತು ಎಂದು ಹೇಳಬಹುದು. ಬೆಟ್ಟದ ಮೇಲೆ ನಿಧಿ ಚೂರರ ಹಾವಳಿ ಪದೇ ಪದೇ ನಡೆಯುತ್ತಿದೆ ಎಂದು ಸ್ಥಳೀಯರು ಹೇಳುತ್ತಾರೆ. ಒಮ್ಮೆ ಅತಿಯಾದ ಮಳೆಯಾಗಿ ನೀರಿನ ಜೊತೆಗೆ ನಾಣ್ಯಗಳು ಹರಿದು ಬಂದಿದ್ದವೆಂದು ಸ್ಥಳೀಯರು ಹೇಳುತ್ತಾರೆ.

• ಹರಪನಹಳ್ಳಿ ಪಾಳೆಯಗಾರರು 'ಕುಸ್ತಿ'ಗೆ ಆದ್ಯತೆ ನೀಡಿದ್ದರು. ಹೆಚ್ಚಿನ ಗ್ರಾಮಗಳಲ್ಲಿ ತರಬೇತಿ ನೀಡಲು 'ಗರಡಿ' ಮನೆಗಳನ್ನು ನಿರ್ಮಿಸಿದ್ದು ಈಗಲೂ ರೂಪಾಂತರಗಳೊಂದಿಗೆ ಕಂಡು ಬರುತ್ತವೆ. ಈ ಕುಸ್ತಿ ಪರಂಪರೆ ಮುಂದುವರೆದಿದ್ದು ಹರಪನಹಳ್ಳಿ ದಾವಣಗೆರೆ ಸುತ್ತಮುತ್ತಲ ಪ್ರದೇಶಗಳಲ್ಲಿ ವಾರ್ಷಿಕ ಹಬ್ಬ ಜಾತ್ರೆ ಸಮಯದಲ್ಲಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಕುಸ್ತಿ ಸ್ಪರ್ಧೆಗಳು ಏರ್ಪಡಿಸಿ ವಿಜೇತರಿಗೆ ಬೆಳ್ಳಿಗದೆ ನೀಡಿ ಸನ್ಮಾನಿಸಲಾಗುತ್ತದೆ. ಇದರಲ್ಲಿ ವಿಶೇಷವಾಗಿ ನಾಯಕ, ಕುರುಬ, ಮುಸ್ಲಿಂ ಜನಾಂಗದ ಕುಸ್ತಿಪಟುಗಳು ಕಂಡುಬರುತ್ತಾರೆ. ಇಂದೂ ಸಹ ಹರಪನಹಳ್ಳಿಯಲ್ಲಿ ಪ್ರಥಮ ಪಾಳೆಯಗಾರ ಸ್ಥಾಪಿಸಿದ ೧೨ ಗರಡಿ ಮನೆಗಳು ಕಂಡುಬರುತ್ತವೆ.

• ಕ್ಷೇತ್ರಕಾರ್ಯ ಕಾಲದಲ್ಲಿ ಕಂಡು ಬಂದಿರುವಂತೆ ಹರಪನಹಳ್ಳಿ ಪಾಳೆಯಗಾರರು ಸಂಸ್ಥಾನದಾದ್ಯಂತ ಸ್ಥಳೀಯ ರಕ್ಷಣೆಗಾಗಿ ಹೆಚ್ಚಿನ ಗ್ರಾಮಗಳಲ್ಲಿ ಕೋಟೆಗಳನ್ನು ನಿರ್ಮಿಸಿ ಕಾವಲುಗಾರರನ್ನು ನೇಮಿಸಿದ್ದು ಕಂಡುಬರುತ್ತದೆ. ಉಚ್ಚಂಗಿದುರ್ಗ, ಕರಡಿದುರ್ಗ, ಬಂಡ್ರಿ, ಹರಪನಹಳ್ಳಿ, ಹಲವಾಗಿಲು, ನಾರಾಯಣದೇವರಕೆರೆ, ತಂಬ್ರಹಳ್ಳಿ, ಹನಸಿ ಮುಂತಾದಡೆ ಬಲಾಢ್ಯ ಕೋಟೆಗಳನ್ನು ನಿರ್ಮಿಸಿದ್ದರು. ಸ್ಥಳೀಯ ರಕ್ಷಣೆಗೆ

ಹಲವಾಗಲು, ಹ್ಯಾರಡ, ಕುಂಚೂರು, ತಲವಾಗಲು, ಕಂಚೀಕೆರೆ, ಮಾಗಾನಹಳ್ಳಿ, ಹಿರೇಮ್ಯಾಗಳಗೇರಿ, ಚಿಕ್ಕಮ್ಯಾಗಳಗೇರಿ, ಬಸವನಕೋಟೆ, ಹೊಳಲು, ಅಲಮರಸಿಕೆರೆ, ಅರಸೀಕೆರೆ, ಕೊಟ್ಟೂರು, ಮುತ್ತಗಿ, ಮೈದೂರು, ಚಿಗಟೇರಿ, ಉಚ್ಚಂಗಿಪುರ, ಮುಂತಾದಡೆ ಕೋಟೆಗಳನ್ನು ನಿರ್ಮಿಸಿದ್ದು ಕಂಡು ಬರುತ್ತದೆ. ಇವು ಸಂಪೂರ್ಣ ನಶಿಸಿ ಹೋಗಿದ್ದು, ಈ ಸ್ಥಳದಲ್ಲಿ ಸ್ಥಳೀಯರ ಅತಿಕ್ರಮಣ, ಆಶ್ರಯ-ಜನತಾ ಮನೆಗಳ ನಿರ್ಮಾಣ, ರೈತರ ಒಕ್ಕಲು ಚಟುವಟಿಕೆ ಕೇಂದ್ರ ಇತ್ಯಾದಿಗಳುಂಟಾಗಿವೆ ಸ್ಥಳೀಯರ ನಿರ್ಲಕ್ಷ್ಯವು ಸಹ ಪ್ರಮುಖ ಕಾರಣಗಳಾಗಿವೆ. ಇಂತಹ ಕೆಲ ಸ್ಥಳೀಯ ಸಣ್ಣ ಕೋಟೆಗಳ ಉಲ್ಲೇಖ ಕೆಲ ಶಾಸನಗಳಲ್ಲಿ ಬರುತ್ತದೆ. ಕ್ರಿ.ಶ. ೧೭೭೯ರಲ್ಲಿ ಬ್ರಿಟೀಷರ ಆಳ್ವಿಕೆ ಪ್ರಭಾವವಾದಂತೆ ಈ ಕೋಟೆಗಳ ನಿರ್ಮೂಲನೆಯೂ ಸಹ ಅಂದಿನ ಪ್ರಭುತ್ವದ ಸಾಮಾನ್ಯ ಉದ್ದೇಶವಾಗಿತ್ತು.

- ಹರಪನಹಳ್ಳಿ ಪಾಳೆಯಗಾರರ ಕಾಲದ ಇನ್ನೊಂದು ವೈದ್ಯಕೀಯ ವೈಶಿಷ್ಟ್ಯವನ್ನು ಬಾಗಳಿಯ ಪಾರಂಪರಿಕ ಕೀಲು, ಮೂಳೆ, ಮುರಿತದ ಚಿಕಿತ್ಸೆಯಲ್ಲಿ ಗುರುತಿಸಬಹುದು ಪಾಳೆಯಗಾರರು ತಮ್ಮ ಸೈನಿಕರು ಹೋರಾಟದಲ್ಲಿ ಕೈ, ಕಾಲುಗಳು ಮುರಿದಾಗ ಈ ಚಿಕಿತ್ಸೆಗೆ ಪ್ರೋತ್ಸಾಹಿಸಿರಬಹುದು. ಇಂದೂ ಸಹ ಬಾಗಳಿ ಕೀಲು, ಮೂಳೆ ಮುರಿತದ ಚಿಕಿತ್ಸೆಗೆ ಸುತ್ತ ಮುತ್ತ ಪ್ರಸಿದ್ಧಿಯಾಗಿದೆ. ಇದೇ ರೀತಿ ಹರಪನಹಳ್ಳಿ ಪಾಳೆಯಗಾರರ ಅರಮನೆ ವೈದ್ಯ ಕೃಷ್ಣಚಾರ್ಯರು ಅಭಿವೃದ್ಧಿಪಡಿಸಿದ ನೈಸರ್ಗಿಕ ಗಿಡಮೂಲಿಕೆಗಳಿಂದ ತಯಾರಿಸಿದ ಗುಳಿಗೆ (ಔಷಧಿ) ಹರಪನಹಳ್ಳಿ ಗುಳಿಗಿ ಎಂದೇ ಪ್ರಸಿದ್ಧವಾಗಿದ್ದು ಅರೆಕ್ಷಣದಲ್ಲಿಯೇ ರೋಗ ವಾಸಿಯಾಗುತ್ತಿತಂತೆ. ಆದ್ದರಿಂದ 'ಹರಪನಹಳ್ಳಿ ಗುಳಿಗಿ ರೋಗ ಅರೆಗಳಿಗೆ' ಎನ್ನುವ ಮಾತು ಇಲ್ಲಿ ಪ್ರಚಲಿತವಿತ್ತಂತೆ. ಇಂದು ಈ ವೈದ್ಯಕೀಯ ಜ್ಞಾನಸಂಪತ್ತು ಮರೆಯಾಗಿದೆ. ಹುಡುಕಿ ಅಭಿವೃದ್ಧಿಪಡಿಸಿದ್ದಲ್ಲಿ ಇದೊಂದು ವಿಶಿಷ್ಟತೆಯಾಗಲಿದೆ. ಸ್ಥಳೀಯ ಹರಪನಹಳ್ಳಿ ತೆಗ್ಗಿನಮಠ ಪ್ರಕಟಿಸುವ 'ಹಯಾತ್ ಸಾಬ್ ಪಂಚಾಂಗ' ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಆರಂಭಗೊಂಡಿರಬಹುದು. ಇಂದೂ ಸಹ ಶ್ರೀಮಠ ಪ್ರತಿ ವರ್ಷದ ಯುಗಾದಿಯಂದು ಪ್ರಕಟಿಸುತ್ತದೆ. ಈ ಪಂಚಾಂಗ ಕರ್ತೃ ಮುಸ್ಲಿಂ ಧರ್ಮದ ಹಯಾತ್‌ಸಾಬ್‌ವರು, ಇದು ಭಾವೈಕ್ಯತೆಗೆ ಉತ್ತಮ ನಿದರ್ಶನವಾಗಿದೆ. ಅನುಸರಿಸಲು ಯೋಗ್ಯ ಗುಣವಾಗಿದೆ.

# ಅನುಬಂಧ

೧. ಗ್ರಂಥಋಣ

೨. ಪದಕೋಶ

೩. ಹರಪನಹಳ್ಳಿ ಪಾಳೆಯಗಾರರ ಕಾಲದ ಪ್ರಮುಖ ಸ್ಥಳಗಳು,
ರಕ್ಷಣಾ ವಾಸ್ತು ಮತ್ತು ಇತರ ಸ್ಮಾರಕ ಕೇಂದ್ರಗಳು

೪. ಅನಾಮಧೇಯ ಕವಿ ರಚಿಸಿದ ರಾಜ ಸೋಮಶೇಖರ ನಾಯಕನ
ಕೊಟ್ಟೂರು ಕಾಳಗ ಕುರಿತ ಕಾವ್ಯ

೫. ಶಾಸನ ಪಾಠಗಳು ಮತ್ತು ಭೂಪಟ್ಟೇದಗಳು

೬. ಛಾಯಾಚಿತ್ರಗಳು ಮತ್ತು ನಕಾಶೆಗಳು

## ೧. ಗ್ರಂಥಋಣ


- ಅಬ್ದುಲ್ ಸತ್ತಾರ್ .ಪಿ, ೧೯೯೭, ತರೀಕೆರೆಯ ಪಾಳೆಯಗಾರರು, ಲೋಕಪಾವನಿ ಪ್ರಕಾಶನ, ಪಾಂಡವಪುರ.
- ಇಂದೂಬಾಯಿ ಟಿ.ಕೆ., (ಸಂ), 'ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
- ಉಮೇಶ್ .ಎಸ್., ಹಿರೇಮಠ್, 'ಮೂರ್ತಿಶಿಲ್ಪ ಕಲೆ' (ಅಪ್ರಕಟಿತ ಮಹಾಪ್ರಬಂಧ).
- ಕನ್ನಡ ವಿಷಯ ವಿಶ್ವಕೋಶ, ಸಂ-೧ (ಪರಿಷ್ಕೃತ), ೨೦೦೫, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಕರ್ನಾಟಕ ಚರಿತ್ರೆ, ಸಂ-೧, ೧೯೯೭
- ಕಲ್ಬುರ್ಗಿ ಎಂ.ಎಂ., ರಾಮಭಟ್ಟ ಬಿ.ಎಸ್., (ಸಂ), ೧೯೯೪; 'ಕೆಳದಿ ಸಮಗ್ರ ಅಧ್ಯಯನ', ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ.
- ಕಲ್ಬುರ್ಗಿ ಎಂ.ಎಂ., (ಸಂ), 'ಕರ್ಣಾಟಕದ ಕೈಫಿಯತ್ತುಗಳು', ೧೯೯೪, ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಕರಿಯಪ್ಪಮಾಳಿಗೆ., ೨೦೦೮, 'ಬಳ್ಳಾರಿ ಜಿಲ್ಲೆಯ ಅವಧೂತರು', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
- ಕರಿಬಸಪ್ಪ ಎ., ೨೦೦೯, 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು', ಸಾಯಿಮಣಿ ಪ್ರಕಾಶನ, ಹೊಸಪೇಟೆ.
- ಕೃಷ್ಣಮೂರ್ತಿ ಪಿ.ವಿ., ೧೯೯೯, 'ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು', ಕಲ್ಬುರ್ಗಿ ಎಂ.ಎಂ. (ಸಂ).
- ಕೃಷ್ಣಮೂರ್ತಿ ಎಂ.ಎಸ್., 'ವಚನ ಸಾಹಿತ್ಯದಲ್ಲಿ ವೀರರಸ', ಪ್ರಬುದ್ಧ ಕರ್ಣಾಟಕ, ಪ್ರಸಾರಾಂಗ, ಕ.ವಿ.ವಿ., ಧಾರವಾಡ.
- ಕೊಟ್ರಯ್ಯ ಸಿ.ಎಂ., (ಮೂಲ) ಧೃವನಾರಾಯಣ (ಅನು) ೨೦೦೧; 'ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ'. ಪ್ರಸಾರಾಂಗ, ಕ.ವಿ.ವಿ. ಹಂಪಿ.
- ಕೊಟ್ರೇಶ್ ಎಂ., ೨೦೦೬, 'ಐತಿಹಾಸಿಕ-ಧಾರ್ಮಿಕ ಶ್ರೀಕ್ಷೇತ್ರ ಉಚ್ಚಂಗಿ ದುರ್ಗ', ನಮ್ಮೂರು ಪ್ರಕಾಶನ, ಉಚ್ಚಂಗಿದುರ್ಗ.
- ಕೊಟ್ರೇಶ್ ಎಂ., ೨೦೧೦ 'ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಕೊಟ್ರೇಶ್ ಎಂ. ೨೦೧೧, 'ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಗಿರಿಜ ಟಿ., ೨೦೦೧, 'ದಾವಣಗೆರೆ ಇದು ನಮ್ಮ ಜಿಲ್ಲೆ', ನಿಹಾರಿಕಾ ಪ್ರಕಾಶನ, ದಾವಣಗೆರೆ.

- ಗಿರಿಜ ಟಿ., ೨೦೦೪, 'ಪಂಚಗಣಾಧೀಶ್ವರರಲ್ಲಿ ಶ್ರೀಗುರು ಕೊಟ್ಟೂರೇಶ್ವರ', ಪಾದಯಾತ್ರಿ ಸಮಿತಿ, ದಾವಣಗೆರೆ.
- ಗುರುಮೂರ್ತಿ ಕೆ.ಜಿ., ೨೦೦೭, 'ಸ್ಥಳನಾಮಗಳ ಅಧ್ಯಯನ–ಮತ್ತಿತರ ಪ್ರಬಂಧಗಳು', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
- ಗುರುಮೂರ್ತಿ ಪೆಂಡಕೂರು., ೨೦೦೬, 'ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
- ಗುಡದೇಶ್ವರಪ್ಪ ಹೆಚ್., ೨೦೧೪, 'ಚಿತ್ರದುರ್ಗದ ಐತಿಹಾಸಿಕ ಸ್ಮಾರಕಗಳು', ಪೂಜಾ ಪ್ರಕಾಶನ, ಚಿತ್ರದುರ್ಗ.
- ಗೋಪಾಲ ಬಾ.ರಾ., ೧೯೮೫, 'ಕಲೆ ಮತ್ತು ವಾಸ್ತು'.
- ಗೋವಿಂದಮೂರ್ತಿ ದೇಸಾಯಿ, ೧೯೯೯, ಸವಣೂರು ನವಾಬರು, ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಚಿಕ್ಕೇರೂರು ಗೋವಿಂದಾಚಾರ್ಯ., ೧೭೭೨, 'ನಿರೂಪ'. ಅಪ್ರಕಟಿತ ಹಸ್ತಪ್ರತಿ.
- ಗೋಪಾಲ್ ಆರ್., (ಸಂ), 'ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.
- ಚಂದ್ರಪೂಜಾರಿ ಎಂ., ೨೦೦೮, 'ಸಂಶೋಧನಾ ಪ್ರಸ್ತಾವ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಚನ್ನಕ್ಕ ಎಲಿಗಾರ., ೧೯೯೧, 'ಬಂಕಾಪುರದ ಕದಂಬರು', ಪ್ರೊ. ಲಕ್ಷ್ಮಣ್‌ತೆಲಗಾವಿ (ಸಂ).
- ಚನ್ನಪ್ಪ ಉತ್ತಂಗಿ., (ಸಂ), 'ಸರ್ವಜ್ಞನ ವಚನಗಳು'.
- ಚನ್ನಬಸಪ್ಪ ಎಸ್., 'ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಪ್ರಬಂಧ.
- ಚಿದಾನಂದಮೂರ್ತಿ ಎಂ., ೧೯೭೯, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಮೈಸೂರು.
- ಚಿನ್ನಸ್ವಾಮಿ ಸೋಸಲೆ., ೨೦೦೪, 'ಸಾಮ್ರಾಜ್ಯ ಮತ್ತು ಸಂಸ್ಥಾನ', ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.
- ಚಿನ್ನಸ್ವಾಮಿ ಸೋಸಲೆ .ಎನ್, ೨೦೧೦, 'ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಚುರ್ಚಿಹಾಳಮಠ ಸಿ.ಎಂ., (ಸಂ), ೧೯೯೯; 'ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ'.
- ಜಯಣ್ಣ., ೧೯೭೯; 'ಚಿತ್ರದುರ್ಗದಲ್ಲಿ ಭೂಸಂಶೋಧನೆ', ಐತಿಹಾಸಿಕ ಚಿತ್ರದುರ್ಗ', ಪ್ರೊ. ಎಂ.ವಿ. ಶ್ರೀನಿವಾಸ್ ಮತ್ತು ಪ್ರೊ. ಲಕ್ಷ್ಮಣ್‌ತೆಲಗಾವಿ (ಸಂ).
- ತಿಪ್ಪೇಸ್ವಾಮಿ ಹೆಚ್., ೧೯೯೪, 'ದಾವಣಗೆರೆ ಜಿಲ್ಲೆಯ ದೇವಾಲಯಗಳು' (ಅಪ್ರಕಟಿತ ಮಹಾಪ್ರಬಂಧ), ಕ.ವಿ.ವಿ., ಹಂಪಿ.

- ತಿಪ್ಪೇರುದ್ರಸ್ವಾಮಿ ಹೆಚ್., ೨೦೦೭, 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.
- ತಿಪ್ಪೇಸ್ವಾಮಿ ಡಿ., ೨೦೧೨ 'ಕೋಗಳಿನಾಡಿನ ಶಾಸನಗಳ ಅಧ್ಯಯನ', ಅಪ್ರಕಟಿತ ಮಹಾಪ್ರಬಂಧ, ಕ.ವಿ.ವಿ., ಹಂಪಿ.
- ದೀಕ್ಷಿತ್ ಜಿ.ಎಸ್., ಕುಪ್ಪಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ. (ಅನು), ನೀಲತ್ತಹಳ್ಳಿ ಕಸ್ತೂರಿ, ೨೦೦೦, 'ಕರ್ನಾಟಕದಲ್ಲಿ ಕೆರೆ ನೀರಾವರಿ'.
- ದೃವನಾರಾಯಣ .ಎ., ೧೯೭೯, ನಾರಾಯಣದೇವರಕೆರೆ, ಲಲಿತಕಲಾರಂಗ, ಮರಿಯಮ್ಮನಹಳ್ಳಿ
- ದುರುಗಪ್ಪ ಎಂ.ಕೆ., ೨೦೧೦, 'ವಿಜಯನಗರೋತ್ತರ ಕಾಲೀನ ಬೇಡ ಜನಾಂಗ', ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ದೇ. ಜವರೇಗೌಡ (ಸಂ), ೧೯೯೮, 'ಜನಪ್ರಿಯ ಕನಕದಾಸ'.
- ದೇವರಕೊಂಡಾರೆಡ್ಡಿ, ೧೯೯೪; 'ತಲಕಾಡಿನ ಗಂಗರ ದೇವಾಲಯಗಳು-ಒಂದು ಅಧ್ಯಯನ' ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ) ೧೯೯೮, ಕ.ವಿ.ವಿ. ಶಾಸನ ಸಂಪುಟ, ೧ ಮತ್ತು ೨, ಪ್ರಸಾರಂಗ, ಕ.ವಿ.ವಿ. ಹಂಪಿ.
- ದೇಸಾಯಿ ಬಿ.ಆರ್., (ಸಂ), 'ಶ್ರೀ ಹುಲಿಗಿ ರೇಣುಕಾಂಬಾ ಸ್ಥಳ ಚರಿತ್ರೆ', ಡಿ.ಬಿ. ದೇಸಾಯಿ ಮುನಿರಾಬಾದ್.
- ದೇವಕವಿ., 'ಶ್ರೀ ಮರುಳಸಿದ್ದನ ಕಾವ್ಯ, ಮರುಳಸಿದ್ದೇಶ್ವರ ಚರಿತ್ರೆ (೧೫೮೭) (ಸಂ)
- ನಂಜಯ್ಯ ಹೊಂಗನೂರು ಎಂ., ೨೦೦೯; 'ಸ್ಥಳನಾಮಗಳು' ಪ್ರಚಾರ ಪುಸ್ತಕ ಮಾಲೆ-೫೦೩, ಪ್ರಸಾರಂಗ, ಮಾನಸಗಂಗೋತ್ರಿ, ಮೈಸೂರು.
- ನಂಜುಂಡಸ್ವಾಮಿ ಎ.ಎಸ್., ೧೯೮೬, 'ಪಾಳೆಯಗಾರರು ಮತ್ತು ಒಡೆಯರ ಇತಿಹಾಸ', ಕರ್ನಾಟಕ ಇತಿಹಾಸ ಮಾಲಿಕೆ-೬, ಸಮಾಜ ಪುಸ್ತಕಾಲಯ, ಧಾರವಾಡ.
- ನರಸಿಂಹಮೂರ್ತಿ ಎ.ವಿ., ೧೯೯೧, 'ಕರ್ನಾಟಕದ ಸೇವುಣರ ಇತಿಹಾಸ'. ಮೈಸೂರು.
- ನರಸಿಂಹಮೂರ್ತಿ .ಎ.ವಿ, ೧೯೯೬, 'ವಿಜಯನಗರದ ನಾಣ್ಯ ಸಂಪತ್ತು', ಮೈಸೂರು ವಿ.ವಿ., ಮೈಸೂರು.
- ನಾಗೇಗೌಡ ಹೆಚ್.ಎಲ್., 'ಪ್ರವಾಸಿ ಕಂಡ ಇಂಡಿಯಾ'.
- ನಾಗಾರಾಜರಾವ್ ಎಚ್.ಎಂ.., ೧೯೮೫, 'ಹೊಯ್ಸಳ ವಾಸ್ತುಶಿಲ್ಪ'.
- ಪರಮಶಿವಮೂರ್ತಿ, ಡಿ.ವಿ., ೧೯೯೬, ಸಂಶೋಧನೆಯ ಸಿರಿ ಪಾಳೆಯಗಾರರ ಲೇಖನಗಳು, ಗುಣನಿಧಿ ಪ್ರಕಾಶನ, ಬೆಂಗಳೂರು.
- ಪಂಪ 'ವಿಕ್ರಮಾರ್ಜುನ ವಿಜಯಂ'.

- ಪಂಡಿತ್ ಎಸ್. ಬಸಪ್ಪ., (ಸಂ), ೧೯೯೭, 'ದೇವಕವಿಕೃತ ಮರುಳಸಿದ್ಧನ ಕಾವ್ಯ', ತರಳಬಾಳು ಪ್ರಕಾಶನ, ಸಿರಿಗೆರೆ.
- ಪುಟ್ಟಣ್ಣ ಎಂ.ಎಸ್., ೧೯೨೪, 'ಚಿತ್ರದುರ್ಗ ಪಾಳೆಯಗಾರರು', ಕಾವ್ಯಾಲಯ, ಮೈಸೂರು.
- ಪುಟ್ಟಣ್ಣ ಎಂ.ಎಸ್., ೧೯೩೧, 'ಹಾಗಲವಾಡಿ ಪಾಳೆಯಗಾರರು', ಬೆಂಗಳೂರು.
- ಪುಟ್ಟಣ್ಣ ಎಂ.ಎಸ್., ೧೯೩೧, 'ಇಕ್ಕೇರಿ ಸಂಸ್ಥಾನದ ಚರಿತ್ರೆ', ಬೆಂಗಳೂರು.
- ಪ್ರಭಾಕರ್ ಎಂ.ಎನ್., ೨೦೧೧, 'ದೇವಾಲಯ ವಾಸ್ತು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಪ್ರಸಾದ್ ಜಿ.ಹೆಚ್., ೨೦೦೮, 'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ', ಪ್ರೊ. ಲಕ್ಷ್ಮಣ್ ತೆಲಗಾವಿ (ಸಂ) ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ಫಣೀಂದ್ರನಾಥ್‌ಬೋಸ್, ೧೯೭೮, 'ಫ್ರಿನ್ಸಿಪಲ್ ಆಫ್ ಇಂಡಿಯನ್ ಶಿಲ್ಪಶಾಸ್ತ್ರ'.
- ಬಸವರಾಜ ಕೂಂಚೂರು, ೧೯೭೮, 'ನಮ್ಮೂರ ಕೆರೆಗಳು', ೨೦೧೯೬, ಶ್ರೀಚಕ್ರ, ಕುಂಚೂರು.
- ಬಸವರಾಜ ಡಿ. ದಂಡೆ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್. ಪ್ರಬಂಧ.
- ಬಸವಲಿಂಗ ಕವಿ., ೨೦೦೧, 'ಶ್ರೀ ಕೊಟ್ಟೂರು ಬಸವೇಶ್ವರ ಚರಿತ್ರೆ' (೧೬೭೮) (ಸಂ), ಹಿರೇಮಠ ಆರ್.ಸಿ., ಕೊಟ್ಟೂರು.
- ಬಸವರಾಜ ಬಾವಿಕಟ್ಟೆ ಕೆ., 'ಕೊಟ್ಟೂರು ಶ್ರೀ ಗುರುಬಸವೇಶ್ವರರರ ಮಹಿಮಾಮೃತ', ಕೊಟ್ಟೂರು.
- ಭಟ್ ಎಂ.ಎಂ. (ಸಂ), 'ಸರ್ವಜ್ಞನ ವಚನ ಸಂಗ್ರಹ'.
- ಭಂಡಾರ್‌ಕರ್ ಆರ್.ಜಿ., 'ವೈಷ್ಣವಿಸಂ, ಶೈವಿಸಂ ಅಂಡ್ ಮೈನರ್ ರಿಲೀಜಿಯಸಂ ಸಿಸ್ಟಂ'.
- ಮಹದೇವ ಸಿ., (ಸಂ), ೨೦೧೨, 'ಮೈಲಾರ', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಮಾನವಿಕ ಭಾರತಿ–೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಮಾನವಿಕ ಭಾರತಿ–೨, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಮಜುಂದಾರ್ ಆರ್.ಸಿ., ಭಾರತದ ಪ್ರೌಢ ಇತಿಹಾಸ, ಬೆಂಗಳೂರು.
- ಮಹಾಲಿಂಗಂ ಟಿ.ವಿ., ೧೯೫೧, 'ಎಕನಾಮಿಕ್ ಲೈಫ್ ಆಫ್ ಇನ್ ವಿಜಯನಗರ', ಮದ್ರಾಸ್.
- ಮಹದೇವ ಸಿ., ಸುಬ್ಬಣ್ಣರೈ ಎ., ಮಾಧವ ಪೆರಾಜೆ (ಸಂ), ೨೦೦೨; 'ಹೊಸಪೇಟೆ ತಾಲ್ಲೂಕು ದರ್ಶನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಮುರಳಿ ರಂ. ಶ್ರೀ., 'ಕರ್ನಾಟಕದ ಸಾಂಸ್ಕೃತಿಕ ಪರಂಪರೆ'.
- ಯೋಗೀಶ್ವರಪ್ಪ ಡಿ.ಎನ್., ೨೦೦೯, 'ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಯೋಗೀಶ್ವರಪ್ಪ .ಡಿ.ಎನ್., ೧೯೯೯, 'ಹಾಗಲವಾಡಿ ನಾಯಕರು, ಪ್ರಸಾರಾಂಗ, ಕ.ವಿ.ವಿ., ಹಂಪಿ.

- ರಾಜಶೇಖರ ಬಣಕಾರ, ೨೦೧೧, 'ಬಾಳ್ಳಳಿಯ ಖಡ್ಗ ಮತ್ತು ರಾಜ ಸೋಮಶೇಖರ ನಾಯಕ', ಹರಪನಹಳ್ಳಿ.
- ರಾವರ್ಟ್‌ಸಿವೆಲ್., ೨೦೦೬, 'ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ರಾಜರಾಂ ಹೆಗಡೆ., ೧೯೯೨, 'ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ, ರಾಜಕೀಯ ಐತಿಹಾಸಿಕ ವಿಶ್ಲೇಷಣೆ.
- ರಾಮಚಂದ್ರರಾವ್ ಎಸ್.ಕೆ., ೧೯೯೨, 'ಪ್ರತಿಮಾ ಕೋಶ', ಬೆಂಗಳೂರು.
- ರಾಮಚಂದ್ರರಾವ್ ಎಸ್.ಕೆ., ೧೯೭೫, 'ಮೂರ್ತಿಶಿಲ್ಪದ ನೆಲೆ–ಹಿನ್ನೆಲೆ', ಬೆಂಗಳೂರು ವಿ.ವಿ., ಬೆಂಗಳೂರು.
- ಲಕ್ಷ್ಮಣ್ ತೆಲಗಾವಿ, ೨೦೦೩, 'ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಲಕ್ಷ್ಮಣ್ ತೆಲಗಾವಿ., ೨೦೦೪, 'ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾರ್ಥಯತೆ – ಒಂದು ಶತಮಾನ', ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ಲಕ್ಷ್ಮಣ್ ತೆಲಗಾವಿ., (ಸಂ), 'ಹರತಿಸಿರಿ' ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ಲಕ್ಷ್ಮಣ್ ತೆಲಗಾವಿ., ೨೦೧೦, 'ಎಪ್ಪತ್ತೇಳು ಪಾಳೆಯಗಾರರು', ಸಂಖ್ಯಾ ಆಶಯ ನೆಲೆಯ ಚಾರಿತ್ರಿಕ ವಿವೇಚನೆ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ್ ಎಂ.ವಿ., (ಸಂ), ೧೯೭೬, 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ.
- ಲಕ್ಷ್ಮಣ್ ತೆಲಗಾಪಿ ಮತ್ತು ಶ್ರೀನಿವಾಸ್ ಎಂ.ವಿ., (ಸಂ), ೧೯೭೮, 'ಚಂದ್ರವಳ್ಳಿ', ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.
- ಲಕ್ಷ್ಮಣ್ ತೆಲಗಾವಿ ಮತ್ತು ಕೆ. ವೆಂಕಣ್ಣಾಚಾರ್, ೧೯೭೮, 'ಐತಿಹಾಸಿಕ ಚಿತ್ರದುರ್ಗ', ಜಿಲ್ಲಾ ಇತಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.
- ಲಕ್ಷ್ಮಣ್ ತೆಲಗಾವಿ, 'ಕರ್ನಾಟಕ ನಾಯಕ ಪಾಳೆಯಗಾರರ ಇತಿಹಾಸ: ಸಮಸ್ಯೆ–ಸವಾಲುಗಳು', ವಾಲ್ಮೀಕಿ ಮಂದಾರ, (ಸಂ), ಹರ್ತಿಕೋಟೆ ವೀರೇಂದ್ರಸಿಂಹ, ಡಾ. ಅಮರೇಶ್ ಯತಗಲ್, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.
- ವಾಸುದೇವ ಬಡಿಗೇರ., ೨೦೧೨, 'ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು', ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.
- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, 'ಬಳ್ಳಾರಿ ಜಿಲ್ಲೆಯ ಪಾಳೆಯಗಾರರು', ಪ್ರಸಾರಾಂಗ, ಕ.ವಿ.ವಿ., ಹಂಪಿ.

- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, 'ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥಾಸಾರ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕ.ವಿ.ವಿ., ಹಂಪಿ.
- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಕರ್ನಾಟಕದಲ್ಲಿ ತಳವಾರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, ಬ್ರಿಟಿಷರ ವಿರುದ್ಧ ಬೇಡನಾಯಕರ ಹೋರಾಟಗಳು, ಚಿನ್ನ ಹಗರಿ ಪ್ರಕಾಶನ, ಕೆ.ಬಿ.ಹಟ್ಟಿ
- ವೆಂಕಟಾಚಲಶಾಸ್ತ್ರೀ ಟಿ.ವಿ. ಮತ್ತು ನಾಯಕ ಹಾ.ಮಾ., ೧೯೭೪, 'ಕನ್ನಡ ಸಾಹಿತ್ಯ ಚರಿತೆ', ಸಂ–೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
- ವೆಂಕಟರತ್ನಂ ಎ.ವಿ., ೧೯೭೯, 'ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
- ವೆಂಕಟೇಶ್ ಇಂದ್ವಾಡಿ (ಸಂ) ೨೦೦೬, 'ಗೋಣಿಬಸಪ್ಪನ ಕಾವ್ಯ', ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.
- ವೆಂಕಟೇಶ್ ಜೋಯಿಸ್ ಕೆ.ಜಿ., ೧೯೯೬, 'ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಶಕುಂತಲ, ಎನ್., ೨೦೧೧, 'ಚಿತ್ರದುರ್ಗ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ', ಪ್ರಕಟಿತ ಮಹಾಪ್ರಬಂಧ, ಕ.ವಿ.ವಿ., ಹಂಪಿ.
- ಶಿವತಾರಕ್ ಕೆ.ಬಿ., ೨೦೦೧, 'ಕರ್ನಾಟಕದ ಪುರಾತತ್ವ ನೆಲೆಗಳು', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಶಿವರಾಮಕಾರಂತ್, ೧೯೯೧, 'ಚಾಲುಕ್ಯ ವಾಸ್ತುಶಿಲ್ಪ', ಬೆಂಗಳೂರು.
- ಶಿವಣ್ಣ ಕೆ.ಎಸ್., (ಸಂ), ೧೯೯೭, 'ಕರ್ನಾಟಕ ಚರಿತ್ರೆ ಸಂಪುಟ–೩', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಶೇಠ್ ಬಿ.ಎಸ್., ೧೯೯೧, 'ಕರ್ನಾಟಕದಲ್ಲಿ ಸತಿಪದ್ದತಿ', ಪ್ರಕಟಿತ ಮಹಾಪ್ರಬಂಧ, ವೀರಶೈವ ಅಧ್ಯಯನ ಅಕಾಡಮಿ, ಬೆಳಗಾವಿ.
- ಶೇಷಶಾಸ್ತ್ರಿ ಆರ್., ೨೦೦೪, 'ಕರ್ನಾಟಕ ವೀರಗಲ್ಲುಗಳು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಶಾಸ್ತ್ರೀ ಬಿ.ಎಸ್., 'ಕೆಳದಿ ಮತ್ತು ಪೋರ್ಚಗೀಸರು'.
- ಶ್ಯಾಮಶಾಸ್ತ್ರೀ ಆರ್ (ಸಂ), ೧೯೭೩, 'ಲಿಂಗಣ್ಣ ಕವಿಯ ಕೆಳದಿನೃಪ ವಿಜಯ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು.
- ಶ್ರೀನಿವಾಸ್ ಎಂ.ವಿ., ೨೦೦೧, 'ಸ್ಥಳೀಯ ಚರಿತ್ರೆ', ಕನ್ನಡ ವಿಷಯ ವಿಶ್ವಕೋಶ–೪, ಮೈಸೂರು ವಿ.ವಿ., ಮೈಸೂರು.

- ಶ್ರೀಕಂಠಶಾಸ್ತ್ರೀ ಎಸ್., ೧೯೭೫, 'ಪುರಾತತ್ವ ಶೋಧನೆ'.
- ಶ್ರೀನಿವಾಸ್ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ (ಸಂ), ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.
- ಶ್ರೀನಿವಾಸ್ ಮೂರ್ತಿ ಹೆಚ್.ವಿ., ರಾಮಕೃಷ್ಣ ಆರ್., (ಸಂ), ೧೯೯೫, ಸಮಗ್ರ ಕರ್ನಾಟಕ ಚರಿತ್ರೆ
- ಶ್ರೀಸತ್ಯನ್ ಬಿ.ಎನ್., ೧೯೮೬, 'ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್'.
- ಶ್ರೀಸತ್ಯನ್ ಬಿ.ಎನ್., (ಸಂ), ೧೯೬೭, 'ಮೈಸೂರು ರಾಜ್ಯ ಗೆಜೆಟಿಯರ್', ಚಿತ್ರದುರ್ಗ ಜಿಲ್ಲೆ.
- ಶ್ರೀನಿ.ಪ್ರಸ್ವ ಮಹಾಂತಸ್ವಾಮಿಗಳು (ಪ್ರ), ೧೯೭೬, 'ಗುರುಕರುಣ ತ್ರಿವಿಧಿ, ಮುರುಘಾಮಠ, ಧಾರವಾಡ.
- ಶ್ಯಾಮಶಾಸ್ತ್ರೀ ಆರ್., (ಸಂ), ೧೯೯೭, 'ಕೌಟಿಲ್ಯನ ಅರ್ಥಶಾಸ್ತ್ರ-ಭಾಗ-೨.
- ಶ್ಯಾಮಲ ಸಿ.ಆರ್., ೨೦೦೮, 'ಪೂರ್ವ ಕರ್ನಾಟಕದ ಪಾಳೆಯಗಾರರು-ಒಂದು ಅಧ್ಯಯನ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
- ಸದಾಶಿವಪ್ಪ ಕುಂಬಾ, ೨೦೦೬, 'ಹರಪನಹಳ್ಳಿ ಪಾಳೆಯಗಾರರ ಇತಿಹಾಸ ದರ್ಶನ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
- ಸದಾಶಿವಪ್ಪ ಕುಂಬಾ, ೨೦೦೮, 'ಹರಪನಹಳ್ಳಿ ತಾಲ್ಲೂಕು ಪರಿಚಯ', ಮಾಲತೇಶ ಪ್ರಕಾಶನ, ಹರಪನಹಳ್ಳಿ.
- ಸದಾಶಿವಪ್ಪ ಕುಂಬಾ, ೨೦೧೧, 'ರಾಯಸಂಸ್ಕೃತಿ', (ಸಂಶೋಧನಾ ಪ್ರಬಂಧಗಳು), ಹರಪನಹಳ್ಳಿ.
- ಸಂತೋಷ್ ಎನ್.ಜಿ., ೨೦೦೯, 'ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ಪಾಳೆಯಗಾರರ ಕಾಲದ ಕೃಷಿ ವ್ಯವಸ್ಥೆ (ಅಪ್ರಕಟಿತ ಮಹಾಪ್ರಬಂಧ).
- ಸರಿತಾಕುಸುಮಾಕರ ದೇಸಾಯಿ, ೨೦೦೧, 'ಹರಪನಹಳ್ಳಿ ಭೀಮವ್ವನ ಹಾಡುಗಳು-ಒಂದು ಅಧ್ಯಯನ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
- ಸತೀಶ., 'ಪಂಚಗಣಾಧೀಶ್ವರರು-ಒಂದು ಅಧ್ಯಯನ', ಪಿಹೆಚ್.ಡಿ. ಮಹಾಪ್ರಬಂಧ, ಕ.ವಿ.ವಿ., ಹಂಪಿ.
- ಸಿದ್ದನಂಜೇಶ., ೧೯೫೦, 'ಗುರುಬಸವರಾಜ ಚರಿತ್ರೆ (೧೫೩೦), (ಸಂ) ಭೂಸನೂರುಮಠ, ಸಂ.ಶಿ. ಮುರುಘಾಮಠ, ಧಾರವಾಡ.
- ಸಿಂದಗಿ ರಾಜಶೇಖರ್, ೧೯೮೮, 'ಕರ್ನಾಟಕ ವಾಸ್ತುಶಿಲ್ಪ'.
- ಸುಂದರ ಅ., ೧೯೯೮, 'ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ', ಪ್ರೊ. ಷೇಕ್ಆಲಿ, ಕರ್ನಾಟಕ ಚರಿತ್ರೆ-ಸಂ-೧.
- ಸುಬ್ಬರಾವ್ ಜಿ.ವಿ., ಮತ್ತು ಹವಾಲ್ದಾರ್ ಎಸ್., ಶ್ರೀಹರಪ್ರಸಾದ (ಸಂ), ೨೦೦೩, 'ನೋಡು ಬಾ ನಮ್ಮೂರ', ಶ್ರೀ ಹರಿಪ್ರಿಯ ಪ್ರಕಾಶನ, ಮರಿಯಮ್ಮಹಳ್ಳಿ.

- ಹನುಮಂತರೆಡ್ಡಿ ವೈ., ೨೦೦೭; 'ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ', ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಧಾರವಾಡ.
- ಹರ್ತಿಕೋಟೆ ವೀರೇಂದ್ರಸಿಂಹ, 'ಕರ್ನಾಟಕ ಪಾಳೆಯಗಾರರನ್ನು ಕುರಿತು ವಿದ್ವಾಂಸರ ಅಭಿಪ್ರಾಯಗಳು'.
- ಹಳ್ಳಿಕೇರಿ ಎಫ್.ಟಿ., ೨೦೦೯, 'ಎಮ್ಮೆ ಬಸವನ ಕಾಲಜ್ಞಾನ ಸಾಹಿತ್ಯ', ಪ್ರಸಾರಾಂಗ, ಕ.ವಿ.ವಿ., ಹಂಪಿ.
- ಹಳ್ಳಿಕೇರಿ ಎಫ್.ಟಿ., ೨೦೦೩, 'ಹಿರಿಯಣ್ಣ ಕವಿಯ ಹಯರತ್ನ ಶ್ರೇಣಿ', ಪ್ರಸಾರಾಂಗ ಕ.ವಿ.ವಿ., ಹಂಪಿ.
- ಹಿರೇಮಠ ಎ.ಎಸ್., ೧೯೯೯, 'ಕ್ರಿಯಾಶೀಲ ತೆಗ್ಗಿನ ಮಠ', ತೆಗ್ಗಿನಮಠ, ಹರಪನಹಳ್ಳಿ.

## ENGLISH

- Ajaymitra Shastri, 1998, 'The Shatavahanas and the Western Kshatrapas', Nagapura.
- Alvin F.R., 1998, 'The Rise and Worth of Indian Civiliziation.
- Appadorai A., 1995, 'Economic condition in Karnataka', Dharwad.
- Bhandarkar R.G., 'Vaishnavisam, Shyvisam and Minor Religious System'.
- Edgar Thurton, 'Carter and Triber of South India', Vol-1.
- Francis Bhukhanan, 1988, 'A Journey from Madras through Malabar', Assian Educational Services, New Delhi.
- Fredarik Chalmars, 'A Report of Chitradurga District', Mysore.
- Gopal B.R., 1985, 'Karmas of Kannada Inscriptions', Vol-1.
- Gururajachar S., 1974, 'Some Aspect of Economic and Social Life in Karnataka', Prasaranga Mysore University, Mysore.
- Gururajachar S., 1995, 'A Notes on some Agriculture Operations of Medieval Karnataka', Directorate of Archaeology, Mysore.
- Impirial Gezzeteer of India, Vol. 3.
- Indian Archaeology Report, 1983.
- Kailasapathy, 'Tamil Heroic Poetry'.
- Krishnamurthy M.S., 1980; 'The Nolambas'.
- Mahalingam T.V., 1951, 'Economic Life in Vijayanagara', Madras.

- Maladatta, 1990, 'A Study of Shatavahanas coinage, Horman Publication House, Newdelhi.
- Mirashi V.V., 'The History and inscriptions of the Shatavahanas and western kshatrapas'.
- Narayanaswamy, 'Hero Stones of Tamilnadu'.
- Narayanbabu, 'A rare passage grave in North Karnataka', S.I.H.C. (Ed), Srinivas Ritti and B.R. Gopal.
- Panchamukhi R.S., 'Archaeological Report on Kannada Research in Bombay Province for the year -1930-40.
- Panchamukhi R.S., 'Archaeological Report on Kannada Research in Bombay Province for the year – 1930-40'.
- Poonacha K.P., 1990, 'Archaeology of Malnad Region', Unpublished Ph.D. Thesis.


- Poonacha K.P., 1990, 'Archaeology of Malnad Region', Unpublished Ph.D. Thesis.


- Raghunatha Bhatt H.R., 1978, 'Art and Architecture of Shatavahana, Kadamba Period', Narasimhamurthy (Ed), Archaealogy of Karnataka.
- Salatore R.S., 1982, 'Vijayanagara Art'.
- Shivanna K.S., 1983; 'Agrerian System of Karnataka', Prasaranga, Mysore University, Mysore.
- Turner R.L., (Ed), 'A Comparative Dictionary of Indo-Argan Languar'.
- Verier Elwini., 'The Maria murder and Suicide'.
- White Head H., 'The Villager Gods of South India'.
- Willium Crove and Enthoven, 'The Religion and Folklore of Northern India.


## ಲೇಖನಗಳು


- ಅಂಬಣ್ಣ ಬಿ., (ಕವನಸಂಗ್ರಹ), ೧೯೫೫, 'ಭಾವತರಂಗ ಲಲಿತ ಕಲಾರಂಗ'.
- ಕೆಳದಿ ಗುಂಡಾಜೋಯಿಸ್, ೨೦೦೦ 'ಲಿಂಗಣ್ಣ ಕವಿಯ ಕೆಳದಿನೃಪ ವಿಜಯದಲ್ಲಿ ಹರಪನಹಳ್ಳಿ ಪಾಳೆಯಗಾರರು', ಇತಿಹಾಸ ದರ್ಶನ ಸಂ–೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಕೊಟ್ರೇಶ್ ಎಂ., ೨೦೦೬, 'ಹರಪನಹಳ್ಳಿ ಪಾಳೆಯಗಾರರು', ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ಮಂಜುನಾಥ ಬೇವಿನಕಟ್ಟೆ ಮತ್ತು ತಾರಿಹಳ್ಳಿ ಹನುಮಂತಪ್ಪ (ಸಂ).

- ಚಂದ್ರಶೇಖರ್ ಹೆಚ್, ೨೦೦೦, 'ಬಳ್ಳಾರಿ ಕೋಟೆಯ ರಚನೆಯಲ್ಲಿ ಭೂಸಾದೃಶ್ಯಗಳ ಪಾತ್ರ', ಇತಿಹಾಸ ದರ್ಶನ ಸಂ-೧೫, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು.
- ಬಸವನಾಳ ಶಿ.ಶಿ., (ಸಂ), ೧೯೫೫, 'ಮೈಲಾರದ ಶ್ರೀಬಸವಲಿಂಗ ಶರಣರ ಕೃತಿಗಳು'. ಮುರುಘಾಮಠ, ಧಾರವಾಡ.
- ಮಧುಬಗರೆ, ೧೯೯೯, 'ಹರಪನಹಳ್ಳಿಯ ಪರಿಸರದ ವೀರಶೈವ ಧರ್ಮ', ಹರಪನಹಳ್ಳಿ .
- ಮಾಡಲಗೇರಿ ಕೊಟ್ರೇಶ್, 'ಗಿರಿದುರ್ಗ ಉಚ್ಚಂಗಿ ಪ್ರದೇಶ-ಒಂದು ಪರಿಶೀಲನೆ', ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಮಾಡಲಗೇರಿ ಕೊಟ್ರೇಶ್, 'ಶಾಸನೋಕ್ತ ಐತಿಹಾಸಿಕ ನೆಲೆ ಮಾಡಲಗೇರಿ', ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ರಾಧಾಕೃಷ್ಣಮೂರ್ತಿ ೧೯೯೯, 'ಕರ್ನಾಟಕದ ಯುದ್ಧ ನೀತಿಯಲ್ಲಿ ಜ್ಯೋತಿಷ್ಯದ ಪಾತ್ರ', ಇತಿಹಾಸ ದರ್ಶನ ಸಂ-೧೪, ೧೯೯೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಲಕ್ಷ್ಮಣ್ ತೆಲಗಾವಿ, ೨೦೦೦, 'ಚಿತ್ರದುರ್ಗ ಮತ್ತು ಹರಪನಹಳ್ಳಿ ನಾಯಕ ಅರಸರ ಸಂಬಂಧ- ಕೆಲವು ಸಮಸ್ಯೆಗಳು', ಇತಿಹಾಸ ದರ್ಶನ ಸಂ-೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಶಾಸ್ತ್ರೀ ಎ.ಕೆ., ೨೦೦೦, 'ಶೃಂಗೇರಿ ಮಠದೊಂದಿಗೆ ಹರಪನಹಳ್ಳಿ ಅರಸುಗಳ ಸಂಬಂಧ', ಇತಿಹಾಸ ದರ್ಶನ ಸಂ-೧೫, ಕರ್ನಾಟಕ ಇತಿಹಾಸ ಅಕಾಡೆಮಿ ಬೆಂಗಳೂರು.
- ಸಂತೆಬೆನ್ನೂರು ಸಮತೀಂದ್ರನಾಡಿಗ್, ೧೯೯೯, 'ಸಂತೇಬೆನ್ನೂರು ನಾಯಕರ ಶಾಸನಗಳು, ಇತಿಹಾಸ ದರ್ಶನ, ಸಂ-೧೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಸಂತೆಬೆನ್ನೂರು ಸುಮತೀಂದ್ರ ನಾಡಿಗ್, ೧೯೯೮, 'ಸಂತೇಬೆನ್ನೂರು ಪಾಳೆಯಗಾರರು', ಇತಿಹಾಸ ದರ್ಶನ, ಸಂ-೧೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಸದಾಶಿವಪ್ಪ ಕುಂಬಾ, ೧೯೯೯, 'ಖಡ್ಗಯುದ್ಧ ಪ್ರವೀಣ ಮೊದಲ ಸೋಮಶೇಖರನಾಯಕ- ಒಂದು ಟಿಪ್ಪಣಿ', ಇತಿಹಾಸ ದರ್ಶನ, ಸಂ-೧೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಸೋಮಶೇಖರ ಎಸ್.ವೈ., ೧೯೯೯, 'ಕೂಡ್ಲಿಗಿ ತಾಲ್ಲೂಕಿನ ವೀರನದುರ್ಗದ ಕೋಟೆ', ಇತಿಹಾಸ ದರ್ಶನ, ಸಂ-೧೪, ೧೯೯೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.
- ಹರಿಹರ ಶ್ರೀನಿವಾಸ್‌ರಾವ್, ೨೦೦೦, 'ಹರಪನಹಳ್ಳಿ ಭೀಮವ್ವನ ಹಾಡುಗಳು-ಸೂಪಶಾಸ್ತ್ರ, ವೈದ್ಯಶಾಸ್ತ್ರ ಹಿನ್ನೆಲೆಯಲ್ಲಿ', ಇತಿಹಾಸ ದರ್ಶನ, ಸಂ.೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

